


# ನಿಟ್ಟೂರು - ನಮನ

. . . . . . . . . . . . . . . . . . . . . . . . . ✍ *ಚೆನ್ನವೀರ ಕಣವಿ**

ನೀವು ಮೆಲ್ಲಗೆ ಬಂದು ಎದುರು ಕುಳಿತರೆ ಸಾಕು
ಸಭೆಗೊಂದು ಗಾಂಭೀರ್ಯ; ತಿಳಿನಗೆ ಸೂಸುವಾರ್ಯ.
ನೆನಪಿನ ಗಣಿಯ ಮಣಿಯ ಹೊರತರುವುದನಿವಾರ್ಯ:

ಶತಮಾನದಿತಿಹಾಸ ಬಿಚ್ಚಿ-ಕಟ್ಟುವ ಮೆಲುಕು,
ವೃತ್ತಿ-ಪ್ರವೃತ್ತಿ-ನ್ಯಾಯ ನಿಷ್ಠುರತೆ: ನಿಟ್ಟೂರು.
ಬೋಧೆ-ಬರವಣಿಗೆ-ಪ್ರಕಾಶನ-ಸತ್ಯಶೋಧನೆ.
ಸಾಮಾನ್ಯರೊಡನೆ ಬೆರೆತು ನುರಿತ ಸವಿಚಿಂತನೆ
ಶಾಂತಿ ಚಳವಳಿಗೆ ಬಳುವಳಿ ಮಾನವ ಹಕ್ಕು.

ಕಿರಿಯರಿಂದಲೂ ಕಲಿಯಬಹುದೆಂಬ ಹಿರಿಯ ಗುಣ-
ಕಲೆ-ಸಾಹಿತ್ಯ-ಸಂಸ್ಕೃತಿ: ಸದಾ ಸಂವಾದಿ.
ಎಲ್ಲ ಹದಗೆಟ್ಟಿಲ್ಲ ಎಂಬ ಆಶಾವಾದಿ:

ಒಟ್ಟಾಗಿ ನಿಂತು ನೈತಿಕಮಟ್ಟವೆತ್ತೋಣ.
ಪ್ರಜಾಸತ್ತೆಗೆ ನೀಡಿ ಪರಿಶುದ್ಧತೆಯ ದೀಕ್ಷೆ-
ನೂರಕ್ಕೆ ನೂರು ನಿಮ್ಮದೇ ಚಾರಿತ್ರ್ಯ-ನಕ್ಷೆ.



* ಚೆಂಬೆಳಕು, ವಿದ್ಯಾನಗರ, ಧಾರವಾಡ - ೫೮೦ ೦೦೭

## ಸ್ನೇಹ ಸೌಜನ್ಯಗಳ ಪ್ರತಿಮೂರ್ತಿ

# ಶತಾಯುಷಿ ಶ್ರೀ ನಿಟ್ಟೂರು ಶ್ರೀನಿವಾಸರಾಯರು

. . . . . . . . . . . . . . . . . . . . . . . . . ✍ *ವ್ಯಾಸರಾಯ ಬಲ್ಲಾಳ**

ದೀರ್ಘಕಾಲ ಮುಂಬಯಿ ನಿವಾಸಿಯಾಗಿದ್ದ ನನಗೆ ಶ್ರೀ ನಿಟ್ಟೂರು ಶ್ರೀನಿವಾಸರಾಯರ ಪರಿಚಯ ಅವರು ಭಾಗವಹಿಸುತ್ತಿದ್ದ ಸಭೆ ಸಮಾರಂಭಗಳ ಕುರಿತು ವರದಿಗಳನ್ನು ಪ್ರಕಟಿಸುತ್ತಿದ್ದ ಪತ್ರಿಕೆಗಳ ಮೂಲಕವೇ. ಮುಂಬಯಿಯ ಕರ್ನಾಟಕ ಸಂಘ ನಡೆಸುತ್ತಿದ್ದ ಕರ್ನಾಟಕ ಮಾಹಿತಿ ಕೇಂದ್ರದ ಮೇಲ್ವಿಚಾರಣೆಯ ಹೊಣೆಗಾರಿಕೆ ನನ್ನ ಮೇಲಿದ್ದುದರಿಂದ ಕರ್ನಾಟಕದ ಹೆಚ್ಚಿನ ಎಲ್ಲ ಪತ್ರಿಕೆಗಳನ್ನು ನೋಡುವ ಅವಕಾಶ ನನಗಿತ್ತು. ಹೀಗಾಗಿ ನಿಟ್ಟೂರರ ಮುಖ ಪರಿಚಯ ನನಗಾದುದು ಬೆಂಗಳೂರಿಗೆ ೧೯೬೫ರ ಕೊನೆಗೆ ಬಂದು ನೆಲೆಸಿದ ಮೇಲಾದರೂ ಕನ್ನಡ ಕರ್ನಾಟಕಗಳಿಗೆ ಸ್ಪಂದಿಸುವ ಮುಖ್ಯವಾದುದೊಂದು ಹೆಸರು ಶ್ರೀ ನಿಟ್ಟೂರರರದೆಂಬ ತಿಳಿವಳಿಕೆ ನನಗಿತ್ತು. ಆದರೆ, ನಾವೆಲ್ಲ ಆಶಿಸುವ ಜೀವನ ಪ್ರೀತಿಯ ಹಾಗೂ ಸ್ನೇಹ-ಸೌಜನ್ಯಗಳ ಪ್ರತಿಮೂರ್ತಿ ನಿಟ್ಟೂರು ಶ್ರೀನಿವಾಸರಾಯರು ಎಂದು ತಿಳಿಯುವಂತಾದುದು ನಾನು ಬೆಂಗಳೂರಿಗೆ ಬಂದು ನೆಲೆಸಿ ಅವರ ಪರಿಚಯ ಮಾಡಿಕೊಂಡ ಮೇಲೆಯೇ.

ಭಾರತದ ಎಲ್ಲ ರಾಜ್ಯಗಳಲ್ಲೂ ವಿದ್ವತ್ ಜನರ ಪರಂಪರೆ ಕಾಲ ಕಾಲಕ್ಕೆ ಕಾಣಿಸಿಕೊಳ್ಳುವುದು ಆಶ್ಚರ್ಯವೇನಲ್ಲ. ಮಹಾರಾಷ್ಟ್ರದಲ್ಲೇ ಮಹಾಮಹೋಪಾಧ್ಯಾಯ ಕಾಣೆ, ತರ್ಕತೀರ್ಥ ಲಕ್ಷ್ಮಣ ಶಾಸ್ತ್ರಿ ಜೋಶಿ ಮೊದಲಾದವರನ್ನು

---

* ೧೦೬೪, ಉತ್ತರಾಯಣ, ಮೊದಲ ಹಂತ
ಕುಮಾರಸ್ವಾಮಿ ಬಡಾವಣೆ, ಬೆಂಗಳೂರು - ೫೬೦ ೦೭೮

ಹೆಸರಿಸಬಹುದು. ಆದರೆ ಕರ್ನಾಟಕ ಮಾತ್ರ ಭಾರತದ ಬೇರೆಲ್ಲ ರಾಜ್ಯಗಳಿಗಿಂತಲೂ ಹೆಚ್ಚು. ಹೆಚ್ಚು ಕಡಿಮೆ ಒಂದೇ ಪೀಳಿಗೆಯಲ್ಲಿ ಬಹಳಷ್ಟು ಕೀರ್ತಿ ಗಳಿಸಿದ ಮೇಧಾವಿಗಳನ್ನು ಸಾಹಿತ್ಯದ ಸೃಜನಶೀಲ ಕ್ಷೇತ್ರದಲ್ಲೂ ಪಡೆದಿರುವ ನಾಡೆಂದು ಅಭಿಮಾನ ಪಡಬಹುದು. ಅಲ್ಲದೆ ಎರಡು ಪ್ರಕಾರಗಳಲ್ಲೂ ಗಮನಾರ್ಹ ಸಾಧನೆ ಮಾಡಿರುವ ಹಿರಿಯರ ಪರಂಪರೆ ನಮ್ಮದು. ಆಲೂರು ವೆಂಕಟರಾಯರು, ಪಂಜೆ, ಗೋವಿಂದ ಪೈ, ಕಾರಂತ, ಮಾಸ್ತಿ, ಬೇಂದ್ರೆ, ಕುವೆಂಪು, ಗೋಕಾಕ, ಮುಗಳಿ, ವಿ.ಸೀ., ಶಂಬಾ ಜೋಶಿ, ಡಿ.ವಿ.ಜಿ., ಬಿ.ಎಂ.ಶ್ರೀ., ತೀ.ನಂ.ಶ್ರೀ., ಜಿ. ವೆಂಕಟಸುಬ್ಬಯ್ಯ, ಶತಾಯುಷಿ ಎ.ಎನ್. ಮೂರ್ತಿ ರಾಯರು ಹೀಗೆಲ್ಲ, ಇವರಲ್ಲಿ ಹೆಚ್ಚಿನವರ ಸಂಪರ್ಕವಿದ್ದ ಶ್ರೀ ನಿಟ್ಟೂರು ಶ್ರೀನಿವಾಸ ರಾಯರು ಕರ್ನಾಟಕದ ಹಾಗೂ ಕನ್ನಡದ ಇತಿಹಾಸದಲ್ಲಿ ಹೆಜ್ಜೆಯಿಡುತ್ತಲೇ ಬಂದವರು. ಹೀಗೆ ಮೇಲೆ ಸೂಚಿಸಿದ ಹೆಸರುಗಳಿಲ್ಲದೆಯೂ ಕನ್ನಡದ ಶ್ರೀಮಂತಿಕೆಯನ್ನು ಹೆಚ್ಚಿಸಲು ಕಾರಣರಾದ ಎಲ್ಲ ಹೆಸರುಗಳನ್ನು ಸುಲಭವಾಗಿಯೇ ಉಲ್ಲೇಖಿಸಬಹುದು. ಇಂಥ ಪರಂಪರೆ ಭಾರತದ ಬೇರೆ ಯಾವ ರಾಜ್ಯಕ್ಕಿದೆ ಎಂದು ಕೇಳುವುದು ಅಪ್ರಸ್ತುತವೆನಿಸದು.

ಮುಖ್ಯ ನ್ಯಾಯಾಧೀಶರಾಗಿ, ಕೆಲ ಕಾಲ ರಾಜ್ಯಪಾಲರಾಗಿಯೂ ಕೀರ್ತಿ ಗಳಿಸಿದ್ದ ಶ್ರೀ ನಿಟ್ಟೂರು ಅವರನ್ನು ನಾನು ಮೊದಲು ಭೆಟ್ಟಿಯಾದದ್ದು 'ನವ ಕರ್ನಾಟಕ ಪ್ರಕಾಶನ'ದವರು ಸಂಘಟಿಸಿದ್ದ ಒಂದು ಸಭೆಯಲ್ಲಿ. ಮೊದಲ ಪರಿಚಯದಲ್ಲೆ ಅತ್ಯಂತ ಸ್ನೇಹದಿಂದ ನನ್ನ ಯೋಗಕ್ಷೇಮವನ್ನು ವಿಚಾರಿಸಿದ ಅವರು 'ನವ ಕರ್ನಾಟಕ ಪ್ರಕಾಶನದ'ದ ಮುಖ್ಯಸ್ಥರಾದ ಶ್ರೀ ಆರ್.ಎಸ್. ರಾಜಾರಾಮ್ ಅವರೊಡನೆ ಕೇಳಿದ ಒಂದು ಪ್ರಶ್ನೆ : 'ನೀವೇನಾದರು ಬಲ್ಲಾಳರ ಕೃತಿಗಳನ್ನು ಪ್ರಕಟಿಸಿದ್ದೀರಾ?' ಎಂದು. ಆಗಲೇ ನನ್ನ ಎರಡು ಕೃತಿಗಳನ್ನು ಪ್ರಕಟಿಸಿದ್ದ ಶ್ರೀ ರಾಜಾರಾಮ್ ಅವರಿಗೆ 'ಹೌದು' ಎಂದು ಹೇಳಲು ಕಷ್ಟವಾಗಲಿಲ್ಲ. ನನಗಿಂತ ಶ್ರೀ ನಿಟ್ಟೂರು ಅವರು ಸುಮಾರು ೨೦ ವರ್ಷ ಹಿರಿಯರಾದರೂ ಹಾಗೆ ಆರಂಭವಾದ ಪರಿಚಯ ಹಿರಿಯ ಚೇತನದ ಸ್ನೇಹವಾಗಿ ನನ್ನನ್ನು ಹರಸುತ್ತಿದೆಯೆಂದೆ ನಾನು ಭಾವಿಸಿದ್ದೇನೆ.

ಒಂದೆರಡು ಸಂದರ್ಭಗಳಲ್ಲಿ ಅವರ ಜತೆಗೆ ರಾಜ್ಯೋತ್ಸವ ಆಚರಣೆಯ ಸಂದರ್ಭ ಗಳಲ್ಲಿ ಭಾಗವಹಿಸಬೇಕಾದ ಸದವಕಾಶ ನನಗೆ ಬಂದಿತ್ತು. ಇಳಿ ವಯಸ್ಸಿನಲ್ಲೂ ಅವರ ಅಗಾಧ ನೆನಪಿನ ಶಕ್ತಿಯನ್ನು ಗಮನಿಸಿ ಆಶ್ಚರ್ಯ ಪಟ್ಟವರನ್ನು ನಾನು ಆ ಸಂದರ್ಭಗಳಲ್ಲಿ ಕಂಡಿದ್ದೇನೆ. ನಾನೂ ಆಶ್ಚರ್ಯಪಟ್ಟಿದ್ದೇನೆ. ಕಳೆದ ಶತಮಾನದ ಆದಿಯಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ಆರಂಭವಾದ ದಿನಗಳಿಂದ ಹಿಡಿದು ಸುಮಾರು ಎಂಬತ್ತು ವರ್ಷಗಳ ಕಾಲ ಕನ್ನಡ-ಕರ್ನಾಟಕಗಳ ಇತಿಹಾಸದೊಂದಿಗೆ ಹೆಜ್ಜೆ ಹಾಕುತ್ತಾ ಬಂದ ನಿಟ್ಟೂರರ

ಅನುಭವಗಳೆಲ್ಲ ನಾಡಿನ ಹಾಗೂ ನುಡಿಯ ಶ್ರೀಮಂತಿಕೆಯನ್ನು ಹೆಚ್ಚಿಸಿದ ಹಿರಿಯರ ಕುರಿತೆ. ಈ ನೆನಪುಗಳನ್ನೆಲ್ಲ ಬರೆದಿಡುವ, ಮುಂದಿನ ಪೀಳಿಗೆಗಳಿಗೆ ತಿಳಿಸುವ ಕೆಲಸವನ್ನು ಯಾರಾದರೂ ಕೈಗೆತ್ತಿಕೊಂಡಿದ್ದಾರೆಯೇ ಎಂದು ನನಗೆ ತಿಳಿದಿಲ್ಲ. ಆದರೆ ಇದು ಆವಶ್ಯವಾಗಿ ಆಗಬೇಕಾದ ಕೆಲಸವೆನ್ನಲು ಅನುಮಾನ ಬೇಡಿ.

ನನಗೆ ತಿಳಿದಂತೆ ನಿಟ್ಟೂರು ಶ್ರೀನಿವಾಸರಾಯರು ಯಾವುದೇ ಸಂಸ್ಥೆಯ ಅಧ್ಯಕ್ಷ ಪದವಿಯನ್ನಾಗಲೀ, ಪ್ರಮುಖ ಸ್ಥಾನವನ್ನಾಗಲೀ ಅಲಂಕರಿಸಿದರೆ ಅಂತಹ ಸಂಸ್ಥೆ ತನ್ನನ್ನು ತಾನೇ ಗೌರವಿಸಿಕೊಂಡಂತೆ ಎಂದು ತಿಳಿಯುವುದು ಸಾಮಾನ್ಯವಾಗಿದೆ. ತೀವ್ರವಾದ ಸಾಮಾಜಿಕ ಕಳಕಳಿಯಿರುವ ಶ್ರೀ ನಿಟ್ಟೂರರು ಲೋಕ ಸತ್ತಾತ್ಮಕ ಆಡಳಿತ ವ್ಯವಸ್ಥೆಯನ್ನು ಪೋಷಿಸಬಹುದಾದ ಯಾವುದೇ ರೀತಿಯ ರಚನಾತ್ಮಕವೆನಿಸುವ ಪ್ರತಿಭಟನೆಯ ವೇದಿಕೆಯ ಮುಂಚೂಣಿಯಲ್ಲಿರಲು ಹಿಂದೇಟು ಹಾಕುವವರಲ್ಲ. ಕಳೆದ ವರ್ಷ ನಡೆದ ಗುಜರಾತ್ ಭೂಕಂಪದ ಸಂತ್ರಸ್ತರ ಸಹಾಯಕ್ಕೆಂದು ನಿಧಿ ಸಂಗ್ರಹದ ಪಾದಯಾತ್ರೆಯಲ್ಲಿ ತನ್ನ ಇಳಿ ವಯಸ್ಸಿನಲ್ಲೂ ಸಹಾಯ ಯಾಚಿಸಿ ಡಬ್ಬ ಹಿಡಿದು ತುಸು ದೂರ ನಡೆದಿದ್ದು ಶ್ರೀ ನಿಟ್ಟೂರರು ತಮ್ಮ ಸಾಮಾಜಿಕ ಕಳಕಳಿಯನ್ನು ವ್ಯಕ್ತಪಡಿಸಿದ್ದಷ್ಟೇ ಅಲ್ಲ, ಎಲ್ಲರ ಸಾಮಾಜಿಕ ಪ್ರಜ್ಞೆಗೆ ಸರಳ ಸವಾಲೆಸೆದರು. ನಾಡಿನ ಹಿರಿಯ ಗೋಖಲೆ ಸಾರ್ವಜನಿಕ ಸಂಸ್ಥೆಯ ಅಧ್ಯಕ್ಷ ಪದವಷ್ಟೇ ಅಲ್ಲದೆ ಸಾರ್ವಜನಿಕ ಜೀವನದಲ್ಲಿ ಸಚ್ಚಾರಿತ್ರ್ಯ, ಪ್ರಾಮಾಣಿಕತೆ, ಸೇವಾ ಮನೋಭಾವ ಬೆಳೆಯಬೇಕೆಂಬ ಆಶಯದ ಹಲವಾರು ಸಂಸ್ಥೆಗಳಿಗೆ ಶ್ರೀ ನಿಟ್ಟೂರರ ಮಾರ್ಗದರ್ಶನವೇ ದಾರಿ ದೀಪ.

ಭಾರತದ ನ್ಯಾಯಾಂಗ ವ್ಯವಸ್ಥೆಯ ಆಳವಾದ ತಿಳಿವಳಿಕೆಯುಳ್ಳ ಶ್ರೀ ನಿಟ್ಟೂರರು ಯುವಕರನ್ನೂ ನಾಚಿಸಬಹುದಾದಂಥ ಎಲ್ಲ ಪ್ರಗತಿಪರ ಚಳವಳಿಗಳಿಗೆ ಮಾರ್ಗದರ್ಶನ ಮಾಡುವ ಯೋಗ್ಯತೆಯುಳ್ಳವರು. ನಮ್ಮ ನಾಡನ್ನು ಕಾಡುತ್ತಿರುವ ಕೋಮುವಾದ, ಜಾತೀಯತೆ, ಆಡಳಿತೆಯ ಹಾಗೂ ರಾಜಕೀಯ ಭ್ರಷ್ಟಾಚಾರ ಮುಂತಾದ ಅನಿಷ್ಟಗಳ ವಿರುದ್ಧದ ನ್ಯಾಯವಾದ ಪ್ರತಿಭಟನೆಯ ವೇದಿಕೆಗಳಲ್ಲಿ ಯಾವ ಸಂಕೋಚವನ್ನೂ ಇರಿಸಿಕೊಳ್ಳದೆ ಭಾಗವಹಿಸಲು ಸಮ್ಮತಿ ಸೂಚಿಸುವವರು.

ವೈಯಕ್ತಿಕವಾಗಿ ಅವರ ಸ್ನೇಹ, ಸೌಜನ್ಯಗಳ, ಉದಾರ ಅಂತಃಕರಣದ ಬಗೆಯನ್ನು ನಾನು ಕಂಡು, ಇಳಿವಯಸ್ಸಿನಲ್ಲೂ ಅವರ ಕಾರ್ಯೋತ್ಸಾಹವನ್ನು ಗಮನಿಸಿ ಆಶ್ಚರ್ಯ ಸಂತೋಷಗಳೆರಡನ್ನೂ ಅನುಭವಿಸಿದ್ದೇನೆ. ಬೆಂಗಳೂರಿನಲ್ಲಿ ನಾನು ಭಾಗವಹಿಸಿದ ಯಾವುದೇ ಸಭೆ ಸಮಾರಂಭಗಳಲ್ಲಿ ಶ್ರೀ ನಿಟ್ಟೂರು ಅವರನ್ನು ಕಾಣದೆ ಇದ್ದುದು ಕಡಿಮೆ. ನನಗೆ ೨೦೦೦ ಜೂನ್ ತಿಂಗಳಲ್ಲಿ ಅನಕೃ ಪ್ರತಿಷ್ಠಾನದ ಪ್ರಶಸ್ತಿಯ ಗೌರವ ದೊರಕಿದಾಗ

ಸಭೆಯಲ್ಲಿ ಅವರು ಕಾಣಲಿಲ್ಲ. ಅವರೇಕೆ ಬಂದಿಲ್ಲವೆಂದು ನಾನು ಯೋಚಿಸಿದರೂ ಅವರ ವಯಸ್ಸಿನಲ್ಲಿ ಸಹಜವೆನಿಸಬಹುದಾದ ಕಾರ್ಯಗಳಿಂದಲೇ ಅವರು ಬಂದಿರಲಿಕ್ಕಿಲ್ಲವೆಂದು ತಿಳಿದಿದ್ದೆ. ಆದರೆ ಸಮಾರಂಭ ಮುಗಿದ ಎರಡು ದಿನಗಳಲ್ಲಿ ನನ್ನನ್ನು ದೂರವಾಣಿಯ ಮೂಲಕ ಸಂಪರ್ಕಿಸಿದ ಅವರು ಅಂದು ಅದೇ ಸಮಯಕ್ಕೆ ಇನ್ನೊಂದು ಸಭೆಯಲ್ಲಿ ಭಾಗವಹಿಸಲೇ ಬೇಕಾಗಿದ್ದದ್ದರಿಂದ ತನಗೆ ಬರಲಾಗಲಿಲ್ಲವೆಂದು ತಿಳಿಸಿದಾಗ ನನಗೆ ಆಶ್ಚರ್ಯ. ಆ ಕಾರಣ ತಿಳಿಸಲೆಂದೇ ಅವರು ನನ್ನ ದೂರವಾಣಿಯ ಸಂಖ್ಯೆಯನ್ನು ಅನಕೃ ಪ್ರತಿಷ್ಠಾನದ ಕಾರ್ಯದರ್ಶಿಗಳಿಂದ ಪಡೆದು ನನ್ನನ್ನು ಸಂಪರ್ಕಿಸಿದ ಅವರ ಸೌಜನ್ಯವನ್ನು ಯಾವ ರೀತಿ ವರ್ಣಿಸಬೇಕೋ ನನಗೆ ತಿಳಿದಿಲ್ಲ. ಇಂತಹ ಸೌಜನ್ಯವನ್ನು ನಾವು ಮುಂದಿನ ಪೀಳಿಗೆಗಳಲ್ಲಿ ಕಂಡೇವೆಂಬ ಭರವಸೆ ನನಗಿಲ್ಲ. ಹಾಗೆಯೇ ಮತ್ತೊಂದು ಸಂದರ್ಭದಲ್ಲಿ ನೆಲಮಂಗಲದ ರಾಜ್ಯೋತ್ಸವ ಆಚರಣೆಗೆಂದು ನನ್ನನ್ನು ಕರೆದಿದ್ದಾಗ ನನಗೆ ನಿಟ್ಟೂರು ಅವರಿಂದ ದೂರವಾಣಿಯ ಕರೆ: ತನಗೂ ಅಲ್ಲಿಗೆ ಬರುವ ಆಮಂತ್ರಣವಿದೆಯಾದರೂ ಬೇರೊಂದು ಕಾರ್ಯಕ್ರಮದಿಂದ ಬರಲಾಗುವುದಿಲ್ಲವೆಂದೂ ಈ ಪರಿಸ್ಥಿತಿಯನ್ನು ನೆಲಮಂಗಲದ ಸಮಾರಂಭದ ಸಂಘಟಕರಿಗೆ ತಿಳಿಸಬೇಕಾಗಿಯೂ ಅವರು ಕೇಳಿದ್ದರು. ಇಂಥ ಸೌಜನ್ಯವನ್ನು ನಾವು ಮರೆಯುವುದು ಸಾಧ್ಯವೇ. ಬೆಂಗಳೂರಿನ ಸಾರ್ವಜನಿಕ ಜೀವನದಲ್ಲಿ ತೊಡಗಿಸಿಕೊಂಡವರೆಲ್ಲ ಶ್ರೀ ನಿಟ್ಟೂರರ ಸ್ನೇಹ ಸೌಜನ್ಯ, ಇವುಗಳ ಹಿಂದಿರುವ ಜೀವನ ಪ್ರೀತಿಯನ್ನು ಚೆನ್ನಾಗಿ ಅರ್ಥಮಾಡಿಕೊಂಡಿರುವರೆಂದು ನನಗೆ ತಿಳಿದಿದೆ. ೧೯೯೯ರ ಕೊನೆಗೆ ನಡೆದ ನನ್ನ ಒಂದು ಅಭಿನಂದನಾ ಕಾರ್ಯಕ್ರಮದಲ್ಲಿ ಸಭೆಗೆ ಬಂದು ವೇದಿಕೆಯನ್ನೇರಿ ನನ್ನನ್ನು ಆಶೀರ್ವದಿಸಿದ ಸಂದರ್ಭವಂತೂ ನಾನು ಚಿರಕಾಲ ನೆನಪಿಡುವ ಸ್ಮೃತಿ.

ನಮ್ಮ ನ್ಯಾಯಾಂಗ ವ್ಯವಸ್ಥೆಯಲ್ಲಿ ಅತ್ಯುನ್ನತ ಪದವಿಗೇರಿದ್ದ ಶ್ರೀ ನಿಟ್ಟೂರರ ಬದುಕು ಸಮಾಜಮುಖಿಯಾದ ಬದುಕು. ತನ್ನ ನಡೆ ನುಡಿಗಳಿಂದ ನಮ್ಮ ಸಾಮಾಜಿಕ ಜೀವನಕ್ಕೆ ಬೆಳಕಿನ ಹಾದಿ ತೋರಿಸಲು ನೆರವಾದ ಶ್ರೀ ನಿಟ್ಟೂರು ಶ್ರೀನಿವಾಸರಾಯರು ಈಗ ಶತಾಯುಷಿ. ನಮ್ಮ ಆರ್ಷೇಯ ಚಿಂತನೆಯಂತೆ ಅವರಿಗೆ ನೂರ ಇಪ್ಪತ್ತು ವಸಂತಗಳನ್ನು ಕಾಣುವ ಅವಕಾಶ, ಅದಕ್ಕೆ ಸರಿಯಾದ ಆರೋಗ್ಯ ಭಾಗ್ಯ ಒದಗಿ ಬರಲಿ. ಒಂದು ಶತಮಾನ ಕಾಲದ ಈ ಹಿರಿಯ ಜೀವನದ ಪ್ರಾಮಾಣಿಕ ಬದುಕಿನ ಹಿಂದಿರುವ ಜೀವನ ಪ್ರೀತಿ ಎಲ್ಲರಿಗೂ ಮಾರ್ಗದರ್ಶನ ಮಾಡುತ್ತಿರಲಿ ಎಂಬ ಗೌರವದ ನಮನ ಈ ಲೇಖಕನದು.

❑

# ಇಪ್ಪತ್ತೊಂದನೆ ಶತಮಾನದಲ್ಲಿ ಓಡುವ ಇಪ್ಪತ್ತನೇ ಶತಮಾನ...

.................. ✍ *ಪ್ರೊ|| ಯು.ಆರ್. ಅನಂತಮೂರ್ತಿ**

*ಪ್ರಿಯ ಗೌರಿ ಸುಂದರ್,*

ನನಗೆ ಶ್ರೀ ನಿಟ್ಟೂರು ಪೂಜ್ಯರು. ನನ್ನ ತಂದೆಯಷ್ಟೇ ಪೂಜ್ಯರು.

ಅವರಿಗಿಂತ ಬಹಳ ಚಿಕ್ಕವನಾದ ನಾನು ಮರೆತ ತೀರ್ಥ ಹಳ್ಳಿಯ ಹಿರಿಯರನ್ನು ಅವರು ನನ್ನ ನೆನಪಿಗೆ ತಂದು ನನ್ನ ಒಳಜೀವನವನ್ನು ತುಂಬಿದ್ದಾರೆ. ಅಷ್ಟು ನೆನಪಿರುವ ಮನುಷ್ಯ ಪರಮ ನಿಸ್ವಾರ್ಥಿಯಿರಲೇಬೇಕು. ಇದು ಕೇವಲ ಬುದ್ಧಿಶಕ್ತಿಗೆ ಸಂಬಂಧಿಸಿದ್ದಲ್ಲ; ಆತ್ಮಕ್ಕೆ ಸಂಬಂಧಿಸಿದ್ದು.

ನಿಟ್ಟೂರರು ಇಪ್ಪತ್ತೊಂದನೇ ಶತಮಾನದಲ್ಲಿ ಓಡಾಡುತ್ತಿರುವ ಇಪ್ಪತ್ತನೇ ಶತಮಾನ.

ನಿಟ್ಟೂರರು ಕರ್ನಾಟಕದ ರತ್ನ.



* ನಂ. ೪೯೮, ೭ನೇ 'ಎ' ಮೇನ್, ೨ನೇ ಹಂತ
ರಾಜಾಮಹಲ್‌ವಿಲಾಸ್ ಬಡಾವಣೆ, ಬೆಂಗಳೂರು - ೫೬೦ ೦೯೪

# ಸತ್ಯಶೋಧನದ ಶ್ರೀನಿವಾಸರಾಯರು

.......................... ✍ ನೀಲತ್ತಹಳ್ಳಿ ಕಸ್ತೂರಿ*

ಹಳೆಯ ಬೆಂಗಳೂರಿನ ಪರಿಚಯ ಇದ್ದವರಿಗೆ, ಇಲ್ಲಿನ ಕೋಟೆ ಪ್ರದೇಶದ ಮೂರು ನಾಲ್ಕು ಹೆಗ್ಗುರುತುಗಳು ನೆನಪಿನಲ್ಲಿ ಇರುವುದು ಸಹಜ. ಕೋಟೆಯಂತೂ ಸರಿಯೆ ಸರಿ. ಅದಕ್ಕೆ ದಕ್ಷಿಣಕ್ಕೆ ಆಸ್ಪತ್ರೆಯ ನಂತರ, ಈಗ ವಿಜೃಂಭಣೆಯಿಂದ ಶೋಭಿಸುತ್ತ ಸರ್ವಜನರನ್ನು ಸೆಳೆಯುತ್ತಿರುವ ಕೋಟೆ ವೆಂಕಟರಮಣನ ಗುಡಿ, ಅದರ ಪಕ್ಕದ ಟೀಪು ಸುಲ್ತಾನ್ ಅರಮನೆ ಎಲ್ಲರೂ ಚೆನ್ನಾಗಿ ಬಲ್ಲ ಸ್ಥಳಗಳು. ಕೋಟೆಯ ಪಕ್ಕದಲ್ಲೆ ನೆಲೆಸಿರುವ ಆಂಜನೇಯನೂ ಬೆಂಗಳೂರಿಗೆ ಒಬ್ಬ ಪ್ರಾಚೀನ ರಕ್ಷಾ ದೈವ. ಪಕ್ಕದ ಜನೋಪಕಾರಿ ದೊಡ್ಡಣ್ಣಶೆಟ್ಟರ ಸ್ಮರಣಾರ್ಥ ಕಟ್ಟಡ, ಕಾಲೇಜುಗಳು ಆ ಪುಣ್ಯಪುರುಷರ ನೆನಪನ್ನು ಹಸಿರಾಗಿ ಇಟ್ಟಿವೆ. ಆಂಜನೇಯನ ಗುಡಿಯ ಪಕ್ಕದಲ್ಲೆ ಇನ್ನೆರಡು ಹೆಗ್ಗುರುತು ಇದ್ದವು. ಒಂದು ಖಾದಿ ವಸ್ತ್ರಾಲಯ ಈಗಲೂ ಇದೆ. ರಾಷ್ಟ್ರಪ್ರೇಮ, ಸ್ವಾತಂತ್ರ್ಯ ಹೋರಾಟ, ರಚನಾತ್ಮಕ ಕಾರ್ಯಗಳ ನೆಲೆ ಅದು. ಒಂದು ಕಾಲಕ್ಕೆ ದೇಶಪಾಂಡೆ ಗಂಗಾಧರ ರಾಯರು, ಸಿ. ರಾಜಗೋಪಾಲಾಚಾರಿ, ಸದಾಶಿವಂ (ಎಂ.ಎಸ್. ಸುಬ್ಬುಲಕ್ಷ್ಮಿಯವರ ಪತಿ), ಗೊರೂರು ರಾಮಸ್ವಾಮಯ್ಯಂಗಾರ್ ಮೊದಲಾದ ಹಲವಾರು ಹಿರಿಯರು ಇಲ್ಲಿನ ಸಂಪರ್ಕ ಹೊಂದಿದ್ದು, ಅಥವಾ ಇಲ್ಲಿ ಸೇವೆ ಮಾಡಿ ಈ ಸಂಸ್ಥೆಯನ್ನು ಕಟ್ಟಿ ಬೆಳೆಸಿದರು. ಈಗ ೭೦ಕ್ಕೂ ಹೆಚ್ಚು ವರ್ಷಗಳಿಂದ ಇದು ಮಹಾತ್ಮಗಾಂಧೀಜಿಯ

---

* ೨೯, ಮಿಥಿಲಾ, ೪ನೇ ದೇವಸ್ಥಾನದ ರಸ್ತೆ
ಮಲ್ಲೇಶ್ವರ, ಬೆಂಗಳೂರು - ೫೬೦ ೦೦೩

ಪ್ರಿಯಕಾರ್ಯವಾದ ಖಾದಿಯನ್ನು ಇಂದಿಗೂ ಮುಂದುವರಿಸುತ್ತ ಬಂದಿದೆ. ಈಗ ಇದು ಕರ್ನಾಟಕ ಸರ್ವೋದಯ ಸಂಘದ ಅಂಗವಾಗಿದೆ. ಖಾದಿ ಪ್ರಿಯರಿಗೆ ಇನ್ನೂ ಸ್ಫೂರ್ತಿ ಕೇಂದ್ರವಾಗಿ ಉಳಿದಿದೆ.

ಖಾದಿ ವಸ್ತ್ರಾಲಯಕ್ಕೂ ಆಂಜನೇಯನ ಗುಡಿಗೂ ನಡುವೆ ಇನ್ನೊಂದು ಸಂಸ್ಥೆ ಇತ್ತು. ಈಗ ಅದು ಇಲ್ಲ. ಅಲ್ಲಿ ಯಾವುದೊ ಅಂಗಡಿ ಬಂದಿದೆ. ಅಲ್ಲಿ ಇದ್ದುದು ಸತ್ಯ ಶೋಧನ ಪುಸ್ತಕ ಭಂಡಾರ. ಹಳಬರಿಗೆ ಇನ್ನೂ ನೆನಪಿರುತ್ತದೆ. ಪ್ರಾಯಶಃ ಆಗ ಸುಮಾರು ೫೦-೬೦ ವರ್ಷಗಳ ಹಿಂದೆ, ಬೆಂಗಳೂರಿನಲ್ಲಿ ಇದ್ದ ಏಕೈಕ ಬೃಹತ್ ಕನ್ನಡ ಪುಸ್ತಕದ ಅಂಗಡಿ ಹಾಗೂ ಪ್ರಕಟನಾಲಯ.

ಸತ್ಯ ಶೋಧನ ಭಂಡಾರಕ್ಕೆ ಒಂದು ಇತಿಹಾಸವೇ ಉಂಟು. ನಾವೆಲ್ಲ ಚಿಕ್ಕವರಾಗಿದ್ದಾಗ ದೇಶದಲ್ಲಿ ರಾಷ್ಟ್ರೀಯ ಭಾವನೆ, ಗಾಂಧೀ ವಿಚಾರ ಪ್ರಭೆ ವಿಜೃಂಭಿಸಿತ್ತು. ಆಗಿನ ಯುವಜನರೆಲ್ಲ ಒಂದಲ್ಲ ಒಂದು ಸಲ, ಒಂದಲ್ಲ ಒಂದು ರೀತಿಯಲ್ಲಿ ಈ ಭಾವನೆಗಳಿಗೆ ಮನತೆತ್ತಿದ್ದರು. ಗಾಂಧೀ ವಿಚಾರ ಪ್ರಭೆಗೆ, ಅನಂತರ ಅವರ ಹೆಸರಿನಲ್ಲಿ ಅಧಿಕಾರ ಮತ್ತರಾಗಿ ಏನೇನೊ ಕೆಲಸ ಮಾಡಿ, ಕಳಂಕ ಹಚ್ಚುವುದಾಗಿದೆಯಲ್ಲ ಈಗ, ಆ ಕಳಂಕ ಆಗ ಹತ್ತಿರಲಿಲ್ಲ. ಪ್ರಭೆ ಉಜ್ವಲವಾಗಿ ಬೆಳಗುತ್ತಿತ್ತು. ರಾಷ್ಟ್ರಸೇವೆಯ ಶಾಖವನ್ನು ನೀಡುತ್ತಿತ್ತು. ಬೆಳಕನ್ನು ಬೀರುತ್ತಿತ್ತು. ನಾವೆಲ್ಲ ಓದಿದ ಗಾಂಧೀಜಿ ಚರಿತ್ರೆ "ಸತ್ಯ ಶೋಧನೆ", ಅವರ ಆತ್ಮಚರಿತ್ರೆ. ಮೂಲ ಇಂಗ್ಲಿಷ್ ಪುಸ್ತಕದ ಹೆಸರು "The Story of My Experiments with Truth" ಗಾಂಧೀಜಿ ಸ್ವತಃ ಬರೆದ ಕೃತಿ. ಅವರ ಜೀವನ ತೆರೆದ ಪುಸ್ತಕ. ಅದು ಜಗತ್ತಿನ ಆತ್ಮಕಥೆಗಳಲ್ಲೆಲ್ಲ ಅತ್ಯಂತ ವಿಶಿಷ್ಟವಾದುದು. ಅದು ಅನುವಾದಗೊಳ್ಳದ ಪ್ರಮುಖ ಭಾಷೆಯೇ ಇಲ್ಲ. ಲಕ್ಷ ಲಕ್ಷ ಜನ ಓದಿದ, ಓದುತ್ತಿರುವ ಕೃತಿ.

ನಮಗೆ ಈ ಪುಸ್ತಕ ದೊರೆತದ್ದು ಅದರ ಕನ್ನಡ ರೂಪದಲ್ಲಿ. ೧೯೨೧ರಲ್ಲೆ ಪ್ರಕಟಗೊಂಡ ಈ ಕೃತಿ ಹಲವು ವರ್ಷಗಳ ತರುವಾಯ ಕನ್ನಡಕ್ಕೆ ಬಂತು. "ಸತ್ಯ ಶೋಧನೆ" ಎಂಬ ಹೆಸರಿನಲ್ಲಿ. ಅತ್ಯಂತ ಉಚಿತವಾದ ಹೆಸರು. ಅಲ್ಲಿಂದ ಈಚೆಗೆ ಗೊರೂರು ರಾಮಸ್ವಾಮಯ್ಯಂಗಾರ್ಯರು "ಸತ್ಯಾನ್ವೇಷಣೆ" ಎಂಬ ಹೆಸರಿಟ್ಟು ಮಾಡಿದ ಅನುವಾದ ವೇನೊ ಬಂದಿದೆ. ಆದರೆ ಆ ಹೆಸರಿಗಿಂತಲೂ, " ಸತ್ಯ ಶೋಧನೆ" ಎಂಬುದೇ ಆಪ್ಯಾಯ ಮಾನ. ಇಂದಿಗೂ ಗಾಂಧೀ ಆತ್ಮಕಥೆ ಎಂದರೆ "ಸತ್ಯ ಶೋಧನೆ" ಎಂದೇ ಐತಿಹ್ಯವಾಗಿದೆ.

"ಸತ್ಯ ಶೋಧನೆ" ಐದು ಭಾಗಗಳಲ್ಲಿ ಬಂತು. ಒಂದೊಂದೂ ಸುಮಾರು ೧೫೦ ಪುಟಗಳ ಕ್ರೌನ್ ಅಷ್ಟದಳಾಕಾರದ ಪುಸ್ತಕ. ಭಾಷೆ ಸರಳ, ಸುಲಲಿತ ಸುಭಗ.

ಸ್ವಭಾವೋಕ್ತಿಯೆ ಇಲ್ಲಿನ ಅಲಂಕಾರ ವಿಶೇಷ. "ಗದ್ಯಂ ಹೃದ್ಯಂ" ಎನ್ನುವ ಮುದ್ದಣನ ಮಾತಿಗೆ ಈ ಕೃತಿ ನಿದರ್ಶನ. ಪುಸ್ತಕದ ಬೆಲೆಯೊ ಪ್ರಾಯಶಃ ಈಗ ನಂಬಲಸಾಧ್ಯವಾದಷ್ಟು ಕಡಿಮೆ. ನಾಲ್ಕು ಆಣೆ, ಎಂಟಾಣೆ ಹೀಗೆ. ಇತ್ತೀಚೆಗೆ ಎಂದರೆ ಈಗ್ಗೆ ಸುಮಾರು ೧೫-೨೦ ವರ್ಷಗಳ ಹಿಂದೆ ಈ ಐದೂ ಭಾಗಗಳು ಒಟ್ಟು ಸೇರಿ ಒಂದೇ ಸಂಪುಟವಾಗಿ ಬಂದಿದ್ದೂ ಉಂಟು. ಆಗಲೂ ಬೆಲೆ ಐದು ರೂಪಾಯಿ ಮಾತ್ರ. ಇವೊತ್ತಿನ ದರದಲ್ಲಿ ಆ ಗ್ರಂಥಕ್ಕೆ ೨೦೦ ರೂ ಆದರೆ ಹೆಚ್ಚಲ್ಲ.

"ಸತ್ಯ ಶೋಧನೆ" ಪುಸ್ತಕದ ಅನುವಾದಕರ ಹೆಸರು ಅದರಲ್ಲಿ ಎಲ್ಲಿಯೂ ಇಲ್ಲ. ಅನುವಾದಕರು "ಇಬ್ಬರು ಕನ್ನಡಿಗರು" ಎಂದು ಮಾತ್ರ ಇತ್ತು. ಅನೇಕ ವರ್ಷ ಈ ಕನ್ನಡಿಗರಿಬ್ಬರು ಯಾರು ಎಂಬುದೇ ಜನಕ್ಕೆ ಗೊತ್ತಾಗಲಿಲ್ಲ. ಎಲ್ಲರ ಗಮನವೂ ಗ್ರಂಥದ ತಿರುಳಿನತ್ತಲೇ ಇದ್ದುದರಿಂದ, ಪ್ರಾಯಶಃ ಯಾರೂ ಈ ಕನ್ನಡಿಗರ ಪತ್ತೆಗೆ ಹೋಗಲೇ ಇಲ್ಲ. ಏನೊ ಆಪ್ತರಾದ ಕೆಲವರಿಗೆ ಪತ್ತೆ ಆಗಿದ್ದಿರಬಹುದು. ಆದರೆ, ಅವರೂ ಸತ್ಯಸಂಗತಿಯನ್ನು ಜಾಹೀರು ಮಾಡಲಿಲ್ಲ. ಅನೇಕ ವರ್ಷಗಳ ನಂತರ ಗೊತ್ತಾಯಿತು. ಆ ಇಬ್ಬರು ಕನ್ನಡಿಗರು ಶ್ರೀ ನಿಟ್ಟೂರು ಶ್ರೀನಿವಾಸರಾಯರು ಮತ್ತು ಅವರ ಪತ್ನಿ ಶ್ರೀಮತಿ ಪದ್ಮಮ್ಮ ಎಂದು! ಹೊಸಗನ್ನಡದಲ್ಲಿ ಈ ಪ್ರಸಂಗ ಅತ್ಯಂತ ವಿಶಿಷ್ಟ, ಅತ್ಯಂತ ರೋಚಕ. ಹಲವಾರು ಮಂದಿ ನಿಜನಾಮ ಹೇಳದೆ, ಅನ್ಯ ನಾಮಗಳಲ್ಲಿ ಕೃತಿ ರಚನೆ ಮಾಡಿದ್ದುಂಟು. ಮುದ್ದಣನೇ ಅದಕ್ಕೆ ನಿದರ್ಶನ. ಆದರೆ ಯಾವ ಹೆಸರನ್ನು ಹಾಕದೆ ಇಬ್ಬರು ಕನ್ನಡಿಗರು ಎಂದು ಮಾತ್ರ ಹೇಳಿರುವುದು ಇಲ್ಲಿ ಮಾತ್ರ. ಮಲ್ಲಾಡಿಹಳ್ಳಿಯ ಶ್ರೀ ರಾಘವೇಂದ್ರ ಸ್ವಾಮಿಗಳು "ತಿರುಕ" ಎಂಬ ಹೆಸರಿನಲ್ಲಿ ಬರೆದರು ನಿಜ. ಆದರೆ ಕ್ಷಿಪ್ರದಲ್ಲೆ "ತಿರುಕ" ಯಾರೆಂದು ನಾಡಿಗೆ ತಿಳಿದುಹೋಯಿತು. ಈ ಕನ್ನಡಿಗರ ಪತ್ತೆ ಆದುದು ಪುಸ್ತಕ ಬಂದು ೨೫-೩೦ ವರ್ಷಾಗಳ ನಂತರ. ಈ ಪ್ರಸಂಗ ಶ್ರೀ ನಿಟ್ಟೂರು ದಂಪತಿಗಳ ಬಾಳಮನೋ ಧರ್ಮಕ್ಕೆ ಕನ್ನಡಿ ಹಿಡಿಯುತ್ತದೆ. ರಾಯರೇನೊ ಈಗ ಲೋಕ ಪ್ರಸಿದ್ಧರು. ಆದರೆ ಅವರ ಬಾಳಸಂಗಾತಿ, "ಸತ್ಯ ಶೋಧನೆ" ಮಹಾಕೃತಿಯ ಸಹ ಕೃತಿಗಾರ್ತಿ ಅನಾಮಧೇಯ ರಾಗಿಯೇ ಉಳಿದುಬಿಟ್ಟರು.

"ಸತ್ಯ ಶೋಧನೆ"ಯ ಕತೆ, ಒಂದು ಪುಸ್ತಕಕ್ಕೆ ಉಳಿದುಹೋಗಲಿಲ್ಲ. ಪುಸ್ತಕವಾಗಿಯೆ ಅದರ ಪ್ರಾಮುಖ್ಯ ಅಸಮಾನ. ಕನ್ನಡದ ಗಾಂಧೀ ಸಾಹಿತ್ಯ ಭಂಡಾರದಲ್ಲಿ ಅದೊಂದು ಬಹುಮೂಲ್ಯಕೃತಿ. ಸಾಹಿತ್ಯ ಪರ್ವತಶ್ರೇಣಿಯಲ್ಲಿ ಒಂದು ಉನ್ನತ ಶಿಖರ. ಅಷ್ಟೇ ಅಲ್ಲ, ಆ ಹೆಸರೇ ೨೦-೩೦ ವರ್ಷಗಳ ಕಾಲ ಕನ್ನಡದ ಒಂದು ಮಂತ್ರವೇ ಆಗಿತ್ತು. ಗ್ರಂಥದ ಪ್ರಕಟನೆಯ ಹಿಂದೆಯೆ, ಶ್ರೀನಿವಾಸರಾಯರು ಒಂದು ಪುಸ್ತಕದ ಅಂಗಡಿಯನ್ನೆ

ತೆರೆದರು. "ಸತ್ಯ ಶೋಧನೆ"ಯೆ ಇದಕ್ಕೂ ಪ್ರೇರಣೆ, ಅಂತೆಯೆ ಇದು ಸತ್ಯ ಶೋಧನ ಪುಸ್ತಕ ಭಂಡಾರ. ಆಗ ಇದು ಅತ್ಯಂತ ಉತ್ತಮ ಗ್ರಂಥ ಭಂಡಾರವಾಗಿತ್ತು. ಉತ್ತಮ ಕನ್ನಡ ಪುಸ್ತಕ ಬೇಕೆಂದರೆ "ಸತ್ಯ ಶೋಧನ" ಭಂಡಾರಕ್ಕೇ ಹೋಗಬೇಕಾಗಿತ್ತು.

ಇದು ಕೇವಲ ಪುಸ್ತಕದ ಅಂಗಡಿ ಅಲ್ಲ. ಪುಸ್ತಕಪ್ರಿಯರ ಆಡುಂಬೊಲವೇ ಆಗಿತ್ತು. ಸಾಹಿತಿಗಳು ಕಲೆಯುವ ಸ್ಥಳ, ಪರಸ್ಪರ ವಿಚಾರವಿನಿಮಯ ಸ್ಥಳ, ಉದಯೋನ್ಮುಖ ಲೇಖಕರಿಗೆ ತೊಟ್ಟಿಲು ಆಗಿತ್ತು. ಆಗಿನ ಪ್ರಮುಖ ಯುವ ಸಾಹಿತಿಗಳ ಕೃತಿಗಳಿಗೆ ಇದೇ ಪ್ರೋತ್ಸಾಹದ ಆಧಾರ. ಗೊರೂರು, ನರಸಿಂಹಸ್ವಾಮಿ, ಇತ್ಯಾದಿ ಅನೇಕರ ಸಾಹಿತ್ಯ ಕ್ರೀಡೆಗೆ ಸತ್ಯ ಶೋಧನ ಪ್ರಕಟನಾಲಯವೇ ರಂಗ. ಕನ್ನಡ ನವೋದಯ ಯುಗದಲ್ಲಿ "ಸತ್ಯ ಶೋಧನ" ವಹಿಸಿದ ಪಾತ್ರ ತುಂಬ ಗಣನೀಯ. ಇದರ ಬೆನ್ನೆಲುಬು ನಿಟ್ಟೂರು ಶ್ರೀನಿವಾಸರಾಯರು. ಅವರ ವಕೀಲಿ ಕಚೇರಿ ಇದ್ದುದೂ ಅಲ್ಲಿಯೆ. ಅವರ ವೃತ್ತಿ-ಪ್ರವೃತ್ತಿ ಎರಡರ ಮೇಳವೂ ಅಲ್ಲೆ.

ಸಾಹಿತ್ಯ, ಸಂಗೀತ, ಸಾರ್ವಜನಿಕ ಸೇವೆ, ಗಾಂಧೀ ವಿಚಾರ, ಖಾದಿ, ರಾಷ್ಟ್ರಪ್ರೇಮ, ಸ್ವಾತಂತ್ರ್ಯ ಹೋರಾಟ, ವಕೀಲಿ, ಆಡಳಿತ, ಸರ್ಕಾರಿ ಕೆಲಸ, ಪತ್ರಿಕೆ, ಹೈಕೋರ್ಟು, ಗೋಖಲೆ ಸಂಸ್ಥೆ - ಹೀಗೆ ಹಲವು ಹತ್ತು ರಂಗಗಳಲ್ಲಿ ಪರಿಣತವಾದ ಪ್ರಾಮಾಣಿಕವಾದ ಸೇವೆ ಸಲ್ಲಿಸಿರುವವರು ಶ್ರೀ ಶ್ರೀನಿವಾಸರಾಯರು. ಪ್ರಾಯಶಃ ಅವರಷ್ಟು ವೈವಿಧ್ಯಮಯ, ವಿಶಾಲ ಅನುಭವ ಉಳ್ಳವರು ಕರ್ನಾಟಕದಲ್ಲಿ ಯಾರೂ ಇಲ್ಲ. ಅವರ ಈ ಸೇವಾಮಯ ದೀರ್ಘ ಜೀವನದಲ್ಲಿ, ಅವರ "ಸತ್ಯ ಶೋಧನೆ"ಯ ಅಧ್ಯಾಯ ತುಂಬ ಪ್ರಮುಖ ವಾದುದು.

ಗಾಂಧೀ ಸಾಹಿತ್ಯಾಸಕ್ತ ಕನ್ನಡಿಗರೆಲ್ಲರೂ "ಸತ್ಯ ಶೋಧನೆ"ಯ ಆ ಇಬ್ಬರು ಕನ್ನಡಿಗರಿಗೆ- ಆ ದಂಪತಿವರ್ಯರಿಗೆ - ಚಿರಋಣಿಗಳಾಗಿರಬೇಕು.



# ಸಂಗೀತ ರಸಿಕ ನಿಟ್ಟೂರು

.................... ✍ *ಪಿ.ಜಿ. ಶ್ರೀನಿವಾಸ ಮೂರ್ತಿ**

**ಶ**ತಾಯುಷಿ, ನ್ಯಾಯಮೂರ್ತಿ ನಿಟ್ಟೂರು ಶ್ರೀನಿವಾಸರಾಯರ ದೀರ್ಘಾಯುಷ್ಯದ ಗುಟ್ಟು ಏನಿರಬಹುದು?

ಈ ವಿಷಯವಾಗಿ ಹಲವರು ಹಲವು ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಅವರ ಶಿಸ್ತುಬದ್ಧ ಜೀವನ, ಮಾನಸಿಕ ನೆಮ್ಮದಿ ಇತ್ಯಾದಿ ಕಾರಣಗಳು ಕೇಳಿಬರುತ್ತಿವೆ. ಆದರೆ ಅವರ ಸಂಗೀತ ರಸಿಕತೆ ಅವುಗಳಲ್ಲಿ ಮುಖ್ಯ ಕಾರಣ ಎನ್ನಿಸುತ್ತದೆ.

ಬೆಂಗಳೂರು ಗಾಯನ ಸಮಾಜದೊಡನೆ ಅವರು ಕಳೆದ ಎಪ್ಪತ್ತು ವರ್ಷಗಳಿಂದ ನಂಟು ಹೊಂದಿದ್ದಾರೆ. ಅದಕ್ಕೂ ಮುನ್ನ ಅವರ ಕಾಲೇಜು ವಿದ್ಯಾಭ್ಯಾಸದ ಸಮಯದಲ್ಲಿ ಅವರ ಹಿರಿಯ ಸಹಪಾಠಿ ಶ್ರೀನಿವಾಸರಾಯರ ಪ್ರೇರಣೆ, ಪ್ರೋತ್ಸಾಹದಿಂದ ಸಂಗೀತವನ್ನಾಲಿಸುವ ಗೀಳು ಅಂಟಿಕೊಂಡಿತ್ತು. ಆ ದಿನಗಳಲ್ಲಿ ಕೆಲವು ಸಂಗೀತ ಅಭಿಮಾನಿಗಳ ಮನೆಗಳಲ್ಲಿಯೇ ಸಂಗೀತ ಕಾರ್ಯಕ್ರಮಗಳು ನಡೆಯುತ್ತಿದ್ದವು. ಚಿಕ್ಕಪೇಟೆ ಗಲ್ಲಿಯಲ್ಲಿನ ಏಕಾಂಬರ ಸಾಹುಜಿ ಅವರ ಮನೆ, ವಿಶ್ವೇಶ್ವರಪುರಂನಲ್ಲಿ ಅರಕಲಗೂಡು ನರಸಿಂಗರಾಯರ (ಅ.ನ.ಕೃ.ಅವರ ತಂದೆ) ಮನೆ ಹೀಗೆ ಕೆಲವು ಕಡೆಗಳಲ್ಲಿ ಹಿರಿಯ ಗೆಳೆಯ ಶ್ರೀನಿವಾಸರಾಯರೊಂದಿಗೆ ಸಂಗೀತ ಕಚೇರಿಗಳಿಗೆ ಹೋಗುತ್ತಿದ್ದರು ನಿಟ್ಟೂರು. ಒಳ್ಳೆಯ ಶಾಸ್ತ್ರೀಯ ಸಂಗೀತ ಕೇಳಿದಾಗ ರಾಯರು ತಮ್ಮನ್ನು ತಾವೇ ಮರೆಯುತ್ತಾರೆ. ಇಂದಿಗೂ ಅದೇ

---

* ನಂ. ೧/೩, ೧ನೇ ಕ್ರಾಸ್ (ದಕ್ಷಿಣ), ಕತ್ತಿರಗುಪ್ಪ ಮುಖ್ಯರಸ್ತೆ
ಬೆಂಗಳೂರು - ೫೬೦೦೮೫

ಪರಿಪಾಠ. ಮನೆಯವರು ಯಾರಾದರೂ ಬಂದು 'ಹೋಗೋಣವೇ' ಎಂದು ಕೇಳಿದಾಗಲೇ ಅವರಿಗೆ ಸಮಯದ ಅರಿವು.

ಸಂಗೀತ ಕ್ಷೇತ್ರದ ದಿಗ್ಗಜಗಳೆಲ್ಲರ ಸಂಗೀತ ಕೇಳುವ ಸುಯೋಗ ನನಗೆ ದೊರೆತಿತ್ತು. ಆದರೆ ಶರಭಶಾಸ್ತ್ರಿಗಳ ಕೊಳಲು ಆಲಿಸುವ ಸೌಭಾಗ್ಯ ನನ್ನದಾಗಿರಲಿಲ್ಲ ಎಂದು ಇತ್ತೀಚಿಗೆ ಕೊಳಲು ವಿದ್ವಾಂಸರುಗಳ ಪ್ರಸ್ತಾಪ ಬಂದಾಗ ನಿಟ್ಟೂರರು ಹೇಳಿದರು.

ಸ್ವತಃ ಶಾಸ್ತ್ರೀಯ ಸಂಗೀತವನ್ನು ದೀರ್ಘವಾಗಿ ಕಲಿಯದಿದ್ದರೂ ೭೦-೮೦ ವರ್ಷಗಳ ಕೇಳ್ಮೆಯಿಂದಾಗಿ ಅವರು ರಾಗಗಳನ್ನು, ವಾಗ್ಗೇಯಕಾರರ ಕೃತಿಗಳನ್ನು ಗುರುತಿಸಬಲ್ಲರು

ಸಂಗೀತಕ್ಕೆ ಚಿಕಿತ್ಸಾ ಶಕ್ತಿ ಇದೆ ಎಂಬ ಮಾತಿದೆ. ಈ ಬಗ್ಗೆ ಮದರಾಸಿನಲ್ಲಿ ಸಂಶೋಧನೆಗಳು ನಡೆದಿವೆ. ಹಿಂದೆ ಸಂಗೀತರತ್ನ ಟಿ.ಚೌಡಯ್ಯನವರು ಒಳ್ಳೆಯ ಸಂಗೀತದಿಂದ ಬೆಳೆಗಳನ್ನು ಹುಲುಸಾಗಿ ಬೆಳೆಯಬಹುದು ಎಂದು ಹೇಳಿದಾಗ ಅವರ ಮಾತಿನ ಬಗ್ಗೆ ಅನೇಕರು ಅಪಹಾಸ್ಯ ಮಾಡಿದರು. ಆದರೆ ಅದು ಈಗ ನಿಜವಾಗುತ್ತಿದೆ.

ಕೆಲವು ರಾಗಗಳು ಪ್ರಕ್ಷುಬ್ಧ ಮನಸ್ಸನ್ನು ತಿಳಿಗೊಳಿಸಿ ಮಾನಸಿಕ ಶಾಂತಿ ನೀಡುತ್ತವೆ. ಎಂಬುದು ರುಜುವಾತಾಗಿದೆ. ಆನಂದ ಭೈರವಿ, ಅಭೇರಿ(ಭೀಂಪಲಾಸ್) ಮುಂತಾದ ರಾಗಗಳು ಮಾನಸಿಕ ಶಾಂತಿ ನೀಡಿ ರಕ್ತದೊತ್ತಡ (ಬ್ಲಡ್ ಪ್ರೆಷರ್)ವನ್ನು ಶಮನ ಮಾಡುತ್ತದೆಂಬುದು ಅನುಭವ ...ಇಂಥ ಮಾನಸಿಕ ಶಾಂತಿ ದೊರೆತಾಗ ರೋಗರುಜಿನಗಳು ನಮ್ಮನ್ನು ಬಾಧಿಸುವುದಿಲ್ಲ. ನಿರೋಗಿಯಾದವನಿಗೆ ದೀರ್ಘಾಯುಷ್ಯ ಗಟ್ಟಿ.

ಮತ್ತೊಬ್ಬ ಶತಾಯುಷಿ (ಈಗ ನೂರಮೂರು ದಾಟಿದ್ದಾರೆ) ಎ.ಎಸ್. ಮೂರ್ತಿ ರಾಯರೂ ನಿಟ್ಟೂರರಂತೆ ಸಂಗೀತ ರಸಿಕರು... 'ಹಿಂದೋಳ' ರಾಗ ತಮಗೆ ಬಹಳ ಪ್ರಿಯವಾದುದೆಂದು ಅವರೇ ಒಮ್ಮೆ ನುಡಿದಿದ್ದಾರೆ.

ಸಂಗೀತದಿಂದ ದೀರ್ಘಾಯುಸ್ಸು, ಮಾನಸಿಕ ನೆಮ್ಮದಿ ದೊರೆಯುತ್ತದೆಂಬುದಕ್ಕೆ ಈ ಎರಡು ಉದಾಹರಣೆಗಳು ಸಾಲದೆ?



# ಶ್ರೀ ನಿಟ್ಟೂರರ ಘನತೆ

.......................✍ *ಜಿ.ಎ. ನರಸಿಂಹಮೂರ್ತಿ**

ರಾಷ್ಟ್ರಪ್ರಸಿದ್ಧರಾದ ಶ್ರೀ ನಿಟ್ಟೂರು ಶ್ರೀನಿವಾಸರಾಯರು ತಮ್ಮ ಶತಾಬ್ದಿ ವರ್ಷದಲ್ಲಿ ಇದ್ದಾರೆ. ಕನ್ನಡಿಗರೆಲ್ಲ ಹೆಮ್ಮೆ ಪಡುವ ಅಂಶ ಇದು.

ಶತಾಬ್ದಿಯಲ್ಲೂ ಇವರ ಆರೋಗ್ಯ ಚೆನ್ನಾಗಿದೆ; ವಿಚಾರಗಳು ಸ್ಪಷ್ಟವಾಗಿವೆ, ಮಾತು ಸ್ಫುಟವಾಗಿದೆ. ಇದರ ಗುಟ್ಟೇನು ಎಂದು ಎಲ್ಲರೂ ಕೇಳುತ್ತಾರೆ. ಅದಕ್ಕೆ ಶ್ರೀ ನಿಟ್ಟೂರರ ಉತ್ತರ 'ನನಗೂ ತಿಳಿಯದು. ಹೀಗೇ ನಡೆದಿದೆ'. ಇದು ಯಾರಿಗೂ ಸಮಾಧಾನ ಕೊಡುವುದಿಲ್ಲ. ಆದರೆ ದೀರ್ಘವಾಗಿ ನಿರೀಕ್ಷಿಸಿದರೆ, ವಿಚಾರ ಮಾಡಿದರೆ ಇದಕ್ಕೆ ಸಮಾಧಾನಕರವಾದ ಉತ್ತರ ಖಂಡಿತ ಸಿಗುತ್ತದೆ. ಅದು ಶ್ರೀಯುತರ ಋಜುತ್ವ, ಸರಳತೆ, ಎಲ್ಲರೊಡನೆ ಬೆರೆಯುವ ಸಮಾನತೆ.

ಮನಸ್ಸಿನಲ್ಲಿ ಬಂದುದು, ಮಾತಿನಲ್ಲಿ ಮಿಂಚಿ, ಕಾರ್ಯದಲ್ಲಿ ಕೋರಿಕೊಳ್ಳುವುದು ಹೇಳಬೇಕಾದ ಮಾತನ್ನು ನೇರವಾಗಿ, ಸ್ಪಷ್ಟವಾಗಿ ಹೇಳುವರು ಅದರಲ್ಲಿ ಉದ್ವೇಗಕ್ಕಾಗಲಿ, ಆಗ್ರಹಕ್ಕಾಗಲಿ ಅವಕಾಶವೇ ಇಲ್ಲ;

ಶ್ರೀ ನಿಟ್ಟೂರರು ಮತ್ತು ಅವರ ಪತ್ನಿಯವರು ಗಾಂಧೀಜಿ ಅವರ ಆತ್ಮಕಥನವನ್ನು ಕನ್ನಡಕ್ಕೆ ಅನುವಾದಿಸಿ ಪ್ರಕಟಿಸಿದ್ದಾರೆ. 'ಸತ್ಯ ಶೋಧನೆ' - ಅದರಲ್ಲಿ ಅನುವಾದಕರ ಹೆಸರು 'ಇಬ್ಬರು

---

* ಅನಂತ ಆಯುರ್ವೇದಿಕ್ ಸೆಂಟರ್
3/89, ಬಸವನಗುಡಿ ರಸ್ತೆ, ಬೆಂಗಳೂರು - 560 019

ಕನ್ನಡಿಗರು' ಎಂದಿದೆ. ತಮ್ಮ ಹೆಸರುಗಳನ್ನು ಮೆರೆಸಬೇಕೆಂಬ ಅಪೇಕ್ಷೆ ಅವರಲ್ಲಿ ಎಂದೂ ಹುಟ್ಟಲಿಲ್ಲ.

ಕಳೆದ ಶತಮಾನದ ೩೦-೪೦ರ ದಶಕದಲ್ಲಿ ಕನ್ನಡ ಸಾಹಿತಿಗಳ ಆರ್ಥಿಕ ಸ್ಥಿತಿ ತೀರಾ ಚಿಂತಾಜನಕವಾಗಿತ್ತು. ಆಗ ಅನೇಕರಿಗೆ ಆರ್ಥಿಕ ನೆರವು ಕೊಟ್ಟವರು ಶ್ರೀ ನಿಟ್ಟೂರರು. ಅವರ ಕೃತಿಗಳನ್ನು ಇವರು ಸ್ವೀಕರಿಸಿದರು. ಹೀಗೆ ಪ್ರಕಟವಾದ ಕೃತಿಗಳು ಮೇಲ್ಮಟ್ಟದ ಅಭಿರುಚಿಗೆ ಹೆಸರಾದ ಶ್ರೀ ವಿ.ಸೀ. ಅವರನ್ನೂ ಮೆಚ್ಚಿಸಿದ್ದವು.

ಶ್ರೀ ಜಿ.ಪಿ. ರಾಜರತ್ನಂ, ಶ್ರೀ ಲಕ್ಷ್ಮಣರಾವ್ ಹೊಯ್ಸಳ ಮೊದಲಾದವರ ಮೊದಲ ಕೃತಿಗಳು "ಸತ್ಯ ಶೋಧನ ಪುಸ್ತಕ ಭಂಡಾರ"ದಿಂದ ಪ್ರಕಟವಾದವು. ಈ ಪುಸ್ತಕ ಭಂಡಾರ ಬೆಂಗಳೂರು ಕೋಟೆ ಆಂಜನೇಯನ ಗುಡಿಯ ಪಕ್ಕದಲ್ಲಿತ್ತು. ಅದರ ಹಿಂದೆಯೇ ಶ್ರೀ ನಿಟ್ಟೂರು ಶ್ರೀನಿವಾಸರಾಯರ ವಕೀಲಿ ಆಫೀಸು. ಈ ಪುಸ್ತಕ ಭಂಡಾರ ಎಂದೂ ಲಾಭ ಗಳಿಸಲಿಲ್ಲ. ಸಾಹಿತಿಗಳಿಗೆ ಅಪಾರ ನೆರವು ದೊರಕಿಸಿಕೊಟ್ಟಿತು.

ಮೈಸೂರಿನಲ್ಲಿ 'ಸಂಸ' ಎಂಬ ಕಾವ್ಯನಾಮದಿಂದ ಪ್ರಸಿದ್ಧ ನಾಟಕಗಳನ್ನು ರಚಿಸಿದ ಶ್ರೀ ವೆಂಕಟಾದ್ರಿ ಅಯ್ಯರ್ ಅವರು ತೀರಾ ರಿಕ್ತ ಸ್ಥಿತಿಯಲ್ಲಿದ್ದರು. ಆಗ ಮೈಸೂರಿನಲ್ಲಿದ್ದ ಶ್ರೀ ಜಿ.ಪಿ. ರಾಜರತ್ನಂ ಬೆಂಗಳೂರಿಗೆ ಬಂದು ಶ್ರೀ ನಿಟ್ಟೂರರಿಗೆ ವಿಷಯ ತಿಳಿಸಿದರು. ಕೂಡಲೇ ಶ್ರೀ ನಿಟ್ಟೂರರು ಪ್ರತಿ ತಿಂಗಳು ಶ್ರೀ 'ಸಂಸ' ಅವರಿಗೆ ಮನಿಯಾರ್ಡರ್ ಮೂಲಕ ಸಂಭಾವನೆ ಕಳುಹಿಸಿ ಅವರ ಕೃತಿಗಳನ್ನು ಪ್ರಕಟಿಸಿದರು. ಹೀಗೆ ಸಹಾಯ ಪಡೆದ ಸಾಹಿತಿಗಳ ಪಟ್ಟಿ ದೀರ್ಘವಾಗಿಯೇ ಇತ್ತು.

ಕನ್ನಡ ಸಾಹಿತ್ಯ ಪರಿಷತ್ತು, ಪತ್ರಕರ್ತರ ಸಂಘ, ಲೇಖಕರ ಸಂಘ ಇವೆಲ್ಲಕ್ಕೂ ಶ್ರೀ ನಿಟ್ಟೂರರು ತಮ್ಮ ಸಲಹೆ, ಸಹಕಾರಗಳನ್ನು ಯಾವ ಪ್ರತಿಫಲಾಪೇಕ್ಷೆಯೂ ಇಲ್ಲದೆ ಒದಗಿಸಿದರು. ಅವುಗಳ ಕಾರ್ಯ ಸಮಿತಿಯಲ್ಲಿ ಸದಸ್ಯರಾಗಿದ್ದರೂ ಪ್ರಮುಖವಾದ ಪದಾಧಿಕಾರಿಗಳು ಆಗಲಿಲ್ಲ. ಅದರ ಅಪೇಕ್ಷೆಯೇ ಅವರಿಗೆ ಇರಲಿಲ್ಲ.

ವಕೀಲರಾಗಿ ಶ್ರೀ ನಿಟ್ಟೂರರು ತುಂಬಾ ಯಶಸ್ವಿಯಾಗಿದ್ದರು. ಇವರು ಹಿಡಿದ ಕೇಸುಗಳೆಲ್ಲ ಗೆದ್ದು ಬರುವುವೆಂದೇ ಹೆಸರು ಗಳಿಸಿದ್ದರು. ಮೂರು ನಾಲ್ಕು ಜನ ಸಹಾಯಕರೊಡನೆ ತಮ್ಮ ಕಚೇರಿ ನಡೆಸುತ್ತಿದ್ದರು.

ಆಗ ಸರ್ಕಾರ ಇವರನ್ನು ಅಡ್ವೊಕೇಟ್ ಜನರಲ್ ಮಾಡಿದರು. ಅನಂತರ ಹೈಕೋರ್ಟಿನ ನ್ಯಾಯಾಧೀಶರನ್ನಾಗಿ ಮಾಡಿದರು. ಈ ಹುದ್ದೆಗಳನ್ನು ಒಪ್ಪಿಕೊಂಡುದು ಶ್ರೀ ನಿಟ್ಟೂರರ ತ್ಯಾಗ ಬುದ್ಧಿಗೆ ನಿದರ್ಶನಗಳಾಗಿವೆ. ಹೆಚ್ಚಿನ ಸಂಪಾದನೆಯನ್ನು ತರುವ

ಸ್ವತಂತ್ರ ವಕೀಲಿಯನ್ನು ಬಿಟ್ಟು, ಸೀಮಿತವಾದ ತಲುಬಿನ ಮೇಲೆ ನಿರ್ಬಂಧಿತ ಉದ್ಯೋಗ ವನ್ನು ಒಪ್ಪಿಕೊಂಡದು ತ್ಯಾಗವಲ್ಲವೆ?

ಇದು ಸಾಮಾನ್ಯರಿಗೆ ಗೋಚರವಾಗುವುದಿಲ್ಲ. ಇಂದಿನ ಪತ್ರಿಕೆಗಳೂ ಈ ಅಂಶವನ್ನು ಎತ್ತಿ ತೋರಿಸುವುದಿಲ್ಲ. ಇತ್ತೀಚೆಗೆ ಕರ್ನಾಟಕದ ನಿವೃತ್ತ ನ್ಯಾಯಾಧೀಶರೊಬ್ಬರು ರಾಜ್ಯಪಾಲರಾಗಿ ನೇಮಕಗೊಂಡರು. ಆ ವೇಳೆಗೆ ಆ ನ್ಯಾಯಮೂರ್ತಿಗಳು ಸರ್ವೋಚ್ಚ ನ್ಯಾಯಾಲಯದಲ್ಲಿ ವಕೀಲಿ ವೃತ್ತಿ ನಡೆಸುತ್ತಿದ್ದರು. ಕೈ ತುಂಬ ಸಂಪಾದನೆ, ಸ್ವತಂತ್ರ ವೃತ್ತಿ ಇವನ್ನು ಬಿಟ್ಟು ಸೀಮಿತ ಆದಾಯದ ನಿರ್ಬಂಧಿತ ರಾಜ್ಯಪಾಲರ ಹುದ್ದೆ ಒಪ್ಪಿದುದು ದೊಡ್ಡ ತ್ಯಾಗವೆಂದು ಶ್ರೀ ನಿಟ್ಟೂರುರೊಬ್ಬರೇ ಗುರ್ತಿಸಿದರು.

ಶ್ರೀಯುತರು ಚಿಕ್ಕಂದಿನಿಂದಲೂ ಗಾಂಧಿ ಭಕ್ತರು, ಸರಳವಾದ ಉಡುಪು, ಸರಳವಾದ ಜೀವನ. ಎಷ್ಟು ಉನ್ನತ ಹುದ್ದೆಯಲ್ಲಿದ್ದರೂ ಖಾದಿ ಉಡುಪನ್ನು ಬಿಡಲಿಲ್ಲ, ಆಡಂಬರ ವನ್ನು ಹತ್ತಿರ ಸೇರಿಸಲಿಲ್ಲ.

ಇವರು ಮೈಸೂರು ಹೈಕೋರ್ಟಿನ ನ್ಯಾಯಾಧೀಶರಾಗಿದ್ದರು. ಇವರ ಮುಂದೆ ಪತ್ರಕರ್ತನೊಬ್ಬನ ಕೇಸು ವಿಚಾರಣೆಗೆ ಬಂದಿತು. ಆ ಪತ್ರಕರ್ತ ಇವರಿಗೆ ಮೊದಲಿ ನಿಂದಲೂ ಪರಿಚಿತನೇ. ಆಗಾಗ ಇಬ್ಬರೂ ಭೇಟಿಯಾಗಿ ಮಾತುಕತೆ ನಡೆಸುತ್ತಿದ್ದರು.

ಈ ಕೇಸು ಬಂದ ಮೇಲೆ ಆ ಪತ್ರಕರ್ತ ಇವರನ್ನು ಕಾಣಲು ಹೋಗಲಿಲ್ಲ. ಆತ ತನ್ನ ಮೊದಲ ಮನೆ ಕಟ್ಟಿದ. ಅತಿ ಸಣ್ಣ ಮನೆ. ಗೃಹಪ್ರವೇಶಕ್ಕೆ ಶ್ರೀ ನಿಟ್ಟೂರರನ್ನು ಆಹ್ವಾನಿಸಿದ. ಶ್ರೀ ನಿಟ್ಟೂರರು ಯಾವ ಆಹ್ವಾನವನ್ನೂ ಉಪೇಕ್ಷಿಸಿದವರಲ್ಲ. ಅತಿ ದೀನರಾಗಲಿ, ಬಡವರಾಗಲಿ ಕರೆದಾಗ ಅವರಲ್ಲಿಗೆ ಹೋಗಿ ಬರುವುದು ಶ್ರೀಯುತರ ಪರಿಪಾಟ.

ಈ ಸಂದರ್ಭದಲ್ಲಿ ಆ ಪತ್ರಕರ್ತನ ಕೇಸು ತಮ್ಮ ಮುಂದಿದೆ. ಒಂದು ವೇಳೆ ತಾವು ಈ ಸಮಾರಂಭದಲ್ಲಿ ಭಾಗವಹಿಸಿ, ಅನಂತರ ಕೇಸು ಪತ್ರಕರ್ತನ ಪರವಾಗಿ ತೀರ್ಮಾನ ವಾದರೆ, ವೃಥಾ ಮಾತುಗಳಿಗೆ ಅವಕಾಶವಾಗುವುದು. ಆದರೆ ಚಿರಪರಿಚಿತನಾದ ಆ ಪತ್ರಕರ್ತನ ಆಹ್ವಾನ ತೊರೆಯುವಂತೆಯೂ ಇಲ್ಲ.

ಶ್ರೀಯುತರು ಆ ಪತ್ರಕರ್ತನ ಮನೆ ಬಾಗಿಲಿಗೆ ಬಂದರು. 'ಬೇರೊಂದು ಕಾರ್ಯ ಕ್ರಮಕ್ಕೆ ಹೋಗಬೇಕಾಗಿದೆ ಶುಭವಾಗಲಿ' ಎಂದು ಹೇಳಿ ಅಲ್ಲಿಂದ ಹೊರಟೇ ಬಿಟ್ಟರು. ತಮ್ಮ ಸೌಜನ್ಯವನ್ನು ನಿಷ್ಠೆಯನ್ನೂ ಕಾಪಾಡಿಕೊಂಡರು.

ಶ್ರೀ ನಿಟ್ಟೂರರು ಕೆಲವು ತಿಂಗಳು ರಾಜ್ಯದ ಹಂಗಾಮಿ ರಾಜ್ಯಪಾಲರಾಗಿದ್ದರು. ರಾಜಭವನದಲ್ಲಿ ತಂಗಿದ್ದರು. ಬೆಳಗಿನ ವೇಳೆ ತಮ್ಮ ಖಾದಿ ಪಂಚೆ, ಶರಟು ತಲೆಗೆ

ಒಂದು ಟವೆಲ್ ಸುತ್ತಿಕೊಂಡು ರಾಜಭವನದ ತೋಟದಲ್ಲಿ ಸುತ್ತಾಡುತ್ತಿದ್ದರು. ಆಗೊಬ್ಬ ಮಾಲಿ ಎದ್ದು ಬಂದು 'ಸ್ವಾಮಿ ತಮ್ಮಂಥವರೆಲ್ಲ ಇಲ್ಲಿ ಬರಬಾರದು' ಎಂದು ಕೂಗಿದ.

ಶ್ರೀ ನಿಟ್ಟೂರರು ಸಮಾಧಾನದಿಂದ 'ಏನು ಮಾಡುವುದು, ಭಾರತ ಸರ್ಕಾರ ನಾನಿಲ್ಲಿ ಇರಬೇಕೆಂದು ಹೇಳಿದೆಯಲ್ಲ' ಎಂದರು. ಇಷ್ಟಾಗುವುದರಲ್ಲಿ ಅಂಗರಕ್ಷಕನು ಓಡಿಬಂದು 'ನಮ್ಮ ಬುದ್ಧಿಯವರು' ಎಂದು ಮಾಲಿಯನ್ನು ಎಚ್ಚರಿಸಿದ!

ಶ್ರೀ ನಿಟ್ಟೂರರು ಪ್ರಕೃತಿಪ್ರಿಯರೂ ತಾವು ಯಾವ ದೊಡ್ಡ ಹುದ್ದೆಯಲ್ಲಿದ್ದರೂ ವರ್ಷದಲ್ಲಿ ಒಂದು ತಿಂಗಳು ಪ್ರಶಾಂತವಾದ ಸ್ಥಳದಲ್ಲಿ ಹೋಗಿ ಇದ್ದುಬಿಡುತ್ತಿದ್ದರು. ಅವರಿಗೆ ಯಾವ ನಕ್ಷತ್ರ ಹೊಟೇಲಿನ ಸೌಕರ್ಯವೂ ಬೇಕಿರಲಿಲ್ಲ. ಗ್ರಾಮದ ಸೌಲಭ್ಯದಿಂದಲೇ ಸುಪ್ರೀತರಾಗುತ್ತಿದ್ದರು.

ಶೃಂಗೇರಿಯ ಸಮೀಪವಿರುವ ಕೆಲವು ಗ್ರಾಮಗಳಲ್ಲಿ ಅನೇಕ ದಿನ ವಾಸ ಮಾಡುತ್ತಿದ್ದುದನ್ನು ನಾನು ಬಲ್ಲೆ. ಆ ಮನೆಗಳ ವಂಶೀಕರೆಲ್ಲ ಅವರಿಗೆ ಪರಿಚಯ. ಈಗಲೂ ಅದನ್ನೆಲ್ಲ ಸ್ಮರಿಸಿಕೊಳ್ಳುವ ಅಪೂರ್ವ ಸ್ಮರಣಶಕ್ತಿ ಶ್ರೀಯುತರಿಗಿದೆ.

ಎಷ್ಟೆಲ್ಲ ಬರೆದರೂ ಶ್ರೀ ನಿಟ್ಟೂರರ ಪೂರ್ಣಚಿತ್ರ ಆಗುತ್ತಿಲ್ಲ. ನಾಲ್ವರು ಕುರುಡರು ಆನೆಯನ್ನು ವರ್ಣಿಸಿದಂತೆ, ಅಪೂರ್ಣವಾಗಿದೆ. ಶ್ರೀಯುತರೇ ತಮ್ಮ 'ಆತ್ಮ ಚರಿತ್ರೆ' ಬರೆದರೆ ಉಪಯುಕ್ತವಾದೀತು. ಆದರೆ ಅದರಲ್ಲಿ 'ಅಹಂ' ಬರುವುದೆಂದು ಅವರು ಬರೆಯುವುದೇ ಇಲ್ಲ.

ಸಾಹಿತಿಗಳೂ ರಂಗತಜ್ಞರೂ ಆದ ಡಾ|| ಹೆಚ್.ಕೆ. ರಂಗನಾಥ್ ಅವರು ನಾಲ್ಕಾರು ಸಾಹಿತಿಗಳನ್ನು ಸೇರಿಸಿಕೊಂಡು ಶ್ರೀಯುತರ ಮನೆಯಲ್ಲಿ ಅಂದಿನ ಅವರ ಜೀವನದ ಘಟನೆಗಳನ್ನು ಟೇಪ್‌ರೆಕಾರ್ಡ್ ಮಾಡಿಕೊಂಡಿದ್ದಾರೆ. ಸುಮಾರು ೧೫೦೦ ಪುಟಗಳಾಗುವಷ್ಟು ವಿಷಯ. ಅದನ್ನು ೩೫೦ ಪುಟಗಳಿಗೆ ಸಂಗ್ರಹ ಮಾಡಿ, ಶ್ರೀಯುತರ ಅವಗಾಹನೆಗೆ ಕಳಿಸಿದ್ದಾರೆ.

ಅವರಲ್ಲಿ 'ನಾನು' ಬರುತ್ತದೆಂದು ಶ್ರೀಯುತರ ಆಕ್ಷೇಪಣೆ. 'ಆತ್ಮಚರಿತ್ರೆ' ಎಂದರೆ 'ನನ್ನ ಚರಿತ್ರೆ'ಯೇ! ಅದರಲ್ಲಿ ವಿಶಿಷ್ಟ 'ಅಹಂ' ಏನೂ ಇಲ್ಲ.

ಅವರು ಒಪ್ಪಬೇಕು, ಪುಸ್ತಕರೂಪದಲ್ಲಿ ಪ್ರಕಟವಾಗಬೇಕು. ಅದು ಶ್ರೀಯುತರ ಜೀವನದ ಬಗೆಗೆ ಎಷ್ಟೋ ಬೆಳಕನ್ನು ಚೆಲ್ಲುತ್ತದೆ. ಕನ್ನಡಿಗರಿಗೆ ಮಾರ್ಗದರ್ಶನವಾಗುತ್ತದೆ. ಆ ಭಾಗ್ಯವನ್ನು ಎದುರು ನೋಡೋಣ.



# ಶತಾಯು ನಿಟ್ಟೂರು ಶ್ರೀನಿವಾಸರಾವ್

. . . . . . . . . . . . . . . . . . . . . . . ✍ ಎಸ್.ವಿ. ಶ್ರೀನಿವಾಸರಾವ್*

**ಮಾ**ಹಿತಿ ಸಂಗ್ರಹಣಕ್ಕೆ ಇಂದು ನಾವು ಕಂಪ್ಯೂಟರ್ ಅವಲಂಬಿಸಿದ್ದೇವೆ. ಆಧುನಿಕ ತಂತ್ರಜ್ಞಾನ ಆವಿಷ್ಕರಿಸಿರುವ ಈ ಮಾದರಿ 'ಉಗ್ರಾಣ' ವೈಜ್ಞಾನಿಕ ಯುಗದಲ್ಲಿ ಮಾನವ ನಿರ್ಮಿತ ಯಾಂತ್ರಿಕ ಮೆದುಳೆಂದು ಖ್ಯಾತವಾಗಿದೆ. ಕಂಪ್ಯೂಟರ್ ಬರುವುದಕ್ಕೆ ಮುಂಚೆ ನಾವು ಜ್ಞಾಪಕ ಶಕ್ತಿಯ ನಿಗೂಢ ಕೋಶ ಮೆದುಳನ್ನೇ ಅವಲಂಬಿಸಿರುತ್ತಿದ್ದೆವು. ಆದರೆ ಈ ಮೆದುಳಿನ ಕಾರ್ಯಕುಶಲತೆ, ನಿರ್ವಹಣೆಯ ವೈಶಿಷ್ಟ್ಯ, ನೀಡುವ ಫಲಿತಾಂಶದ ಸಾಮರ್ಥ್ಯ ಒಂದೇ ಸಮನಾಗಿರುವುದಿಲ್ಲ. ಆದರೆ ಕಂಪ್ಯೂಟರ್ ತನ್ನ ಮೆದುಳ ಜಾಲದಲ್ಲಿ ಹುದುಗಿಸಿಕೊಂಡಿರುವ ಯಾವುದೇ ಅಂಶವನ್ನಾದರೂ ಬೇಕೆಂದಾಗ ಕರಾರುವಾಕ್ಕಾಗಿ ಹೊರ ಉಗುಳುವ ಸಾಮರ್ಥ್ಯವನ್ನು ಹೊಂದಿದೆ. ಇದಕ್ಕೇ ಶ್ರೀ ನಿಟ್ಟೂರುರವರ ಜ್ಞಾಪಕ ಶಕ್ತಿಯನ್ನು ದಕ್ಷ ಕಂಪ್ಯೂಟರ್‌ಗೆ ಹೋಲಿಸಬಹುದಾಗಿದೆ. ಅದಕ್ಕೇ ಶ್ರೀ ನಿಟ್ಟೂರುರವರನ್ನು ಜೀವಂತ ಕಂಪ್ಯೂಟರ್ ಎಂದು ಕರೆಯಲು ನಾನು ಇಚ್ಛಿಸುತ್ತೇನೆ. ಈ ಅಮೋಘ ಶಕ್ತಿಯ ಪರಿಚಯ ನನಗೆ ಎರಡು ಬಾರಿ ಆಗಿದೆ. ಒಮ್ಮೆ ಈಗ್ಗೆ ಸುಮಾರು ಹತ್ತು ವರ್ಷಗಳ ಕೆಳಗೆ ಸನ್ಮಾನ್ಯ ಶ್ರೀ ವೀರಪ್ಪ ಮೊಯಿಲಿಯವರು ಮುಖ್ಯ ಮಂತ್ರಿಗಳಾಗಿದ್ದ ಕಾಲದಲ್ಲಿ ಅವರ ಬಗ್ಗೆ 'ಮೂಡಬಿದರಿ ವೀರಪ್ಪ ಮೊಯಿಲಿ' ಎಂಬ ಒಂದು ಪುಸ್ತಕವನ್ನು ರಚಿಸಿದ್ದೆ. ಅದರಲ್ಲಿ ಅವರ ಜೀವನದ ಜೊತೆಗೆ ಅವರ ಯೋಚನೆಗಳು

* ೪೩೦, ಸೌರಭ, ೪ನೇ ಮುಖ್ಯರಸ್ತೆ, ಬನಶಂಕರಿ ೧ನೇ ಹಂತ
ಬೆಂಗಳೂರು - ೫೬೦ ೦೫೦

ಹಾಗೂ ಸಾಧಿಸಿದ್ದ ಸಾಧನೆಗಳ ವಿವರಗಳನ್ನು ನೀಡಿದ್ದೆ. ಈ ಕೃತಿಗೆ ಮುನ್ನುಡಿಯನ್ನು ಬರೆದು ಕೊಡಿರೆಂದು ಹೇಳಲು ಅವರ ಬಳಿ ಹೋಗಿದ್ದೆ. ಮತ್ತೊಮ್ಮೆ ನಾನು ಸಂಪಾದಿಸುತ್ತಿದ್ದ 'ಕರ್ನಾಟಕದ ಮುಖ್ಯ ಮಂತ್ರಿಗಳು' ಕೃತಿಗೆ ಮುನ್ನುಡಿ ಬರೆಯಿರೆಂದು ಪ್ರಾರ್ಥಿಸಲು, ಈ ಎರಡೂ ಸಂದರ್ಭದಲ್ಲಿ ನನಗೆ ಅವರ ಅಮೋಘ ಜ್ಞಾಪಕ ಶಕ್ತಿಯ ಪರಿಚಯವಾಯಿತು. ಕನ್ನಡ ನಾಡಿನ ಎಲ್ಲಾ ಮುಖ್ಯಮಂತ್ರಿಗಳನ್ನೂ ವೈಯಕ್ತಿಕವಾಗಿ, ಬಲ್ಲ ನಿಟ್ಟೂರುರವರು ಸ್ವಾತಂತ್ರ್ಯ ಹೋರಾಟಕ್ಕೆ ಹೋರಾಡಿದವರು, ಕರ್ನಾಟಕ ಏಕೀಕರಣಕ್ಕೆ ದುಡಿದವರು, ಇವರ ನಿಸ್ಪೃಹ, ನಿಸ್ವಾರ್ಥ ಧೀರೋದಾತ್ತ ಹಾಗೂ ಆದರ್ಶ ಜೀವನದ ಹಿನ್ನೆಲೆಯಲ್ಲಿ ಹಳೆಯ ಮೈಸೂರು, ಕರ್ನಾಟಕದ ಮುಖ್ಯಮಂತ್ರಿಗಳನ್ನು ವಿಶ್ಲೇಷಿಸಿದ್ದರು. ಆಗ ಅವರ ಅನುಪಮ ನೆನಪಿನ ಪರಿಚಯ ನನಗೆ ಚೆನ್ನಾಗಿ ಆಯಿತು. ನನಗೆ ಅತ್ಯಂತ ಅಚ್ಚರಿಯನ್ನುಂಟು ಮಾಡಿದ ಅಂಶವೆಂದರೆ ಅವರ ನೆನಪಿನ ಸುರುಳಿ ಬಿಚ್ಚುತ್ತಿದ್ದ ಹೆಸರುಗಳ ಸರಮಾಲೆ. ಸಾಮಾನ್ಯವಾಗಿ ಎಲ್ಲರ ನೆನಪಿನಲ್ಲಿ ಘಟನೆಗಳು ನೆನಪಿರುತ್ತವೆ. ಕಾಲ ಕಳೆದಂತೆ ಘಟನೆಗಳಲ್ಲಿ ಸುಳಿಯುವ ಹೆಸರುಗಳು ಮಾಸಿ ಹೋಗಿರುತ್ತವೆ. ಆದರೆ ನಿಟ್ಟೂರರ ವಿಷಯದಲ್ಲಿ ಹಾಗಲ್ಲ. ಘಟನೆಗಳು, ಘಟನೆಗೆ ಕಾರಣಕರ್ತರಾದ ವ್ಯಕ್ತಿಗಳ ಹೆಸರು, ಎಲ್ಲವೂ ನಿಚ್ಚಳ ಸ್ಫಟಿಕದಷ್ಟು ಸ್ಫುಟ. ಉದಾಹರಣೆಗೆ ಅವರು ಕರ್ನಾಟಕದ ಮುಖ್ಯಮಂತ್ರಿಗಳು ಕೃತಿಗೆ ಬರೆದಿರುವ ಮುನ್ನುಡಿಯ ಕೆಲ ಮಾತುಗಳು.

'....ಮೈಸೂರು ರಾಜ್ಯದಲ್ಲಿ ಜವಾಬ್ದಾರಿ ಸರ್ಕಾರ ಸ್ಥಾಪನೆಯಾಗುವುದಕ್ಕೆ ಮುಂಚೆ ಆಡಳಿತ ಮುಖ್ಯಸ್ಥರನ್ನು ದಿವಾನರೆಂದು ಕರೆಯುತ್ತಿದ್ದರು. ಜವಾಬ್ದಾರಿ ಸರ್ಕಾರ ಬಂದ ಮೇಲೆ ಅಂಥ ಮುಖ್ಯಸ್ಥರನ್ನು ಮುಖ್ಯಮಂತ್ರಿಗಳೆಂದು ಕರೆಯಲಾಗುತ್ತಿದೆ. ೧೮೮೧ರಲ್ಲಿ ಮೈಸೂರು ಅರಸರಿಗೆ ರಾಜ್ಯದ ಆಡಳಿತವನ್ನು ಬ್ರಿಟಿಷ್ ಸರ್ಕಾರದವರು ಪುನಃ ಒಪ್ಪಿಸಿದ ಮೇಲೆ ಶ್ರೀರಂಗಾಚಾರ್ ಅವರು ಮೊದಲನೆ ದಿವಾನರಾಗಿ ನೇಮಿಸಲ್ಪಟ್ಟರು. ತದನಂತರ ಸರ್ ಕೆ. ಶೇಷಾದ್ರಿ ಅಯ್ಯರ್‌ರವರು, ಸರ್. ಪಿ.ಎನ್. ಕೃಷ್ಣಮೂರ್ತಿ, ವಿ.ಪಿ. ಮಾಧವ ರಾವ್, ಟಿ. ಆನಂದರಾವ್, ಸರ್ ಎಂ. ವಿಶ್ವೇಶ್ವರಯ್ಯ, ಕಾಂತರಾಜೇ ಅರಸು, ಎಲ್.ಆರ್. ಬ್ಯಾನರ್ಜಿ ಸರ್‌ಮಿರ್ಜಾ ಇಸ್ಮಾಯಿಲ್, ಎನ್. ಮಾಧವರಾವ್ ಹಾಗೂ ಸರ್ ಎ. ರಾಮಸ್ವಾಮಿ ಮೊದಲಿಯಾರ್ ಇವರುಗಳು ದಿವಾನರ ಸ್ಥಾನದಲ್ಲಿದ್ದು ಆಡಳಿತ ನಡೆಸಿದರು. ಇವರೆಲ್ಲರಿಗೆ ಸಂಬಂಧಪಟ್ಟ, ಸಾಹಿತ್ಯ ಸಾಮಗ್ರಿ, ತಕ್ಕ ಪ್ರಮಾಣದಲ್ಲಿ ದೊರೆಯುತ್ತದೆ. ಡಿ.ವಿ.ಜಿ.ಯವರು ರಂಗಾಚಾರ್ಯರವರ ಜೀವನ ಚರಿತ್ರೆಯನ್ನು ಬರೆದಿದ್ದಾರೆ. ಭಾರತ ಸರ್ಕಾರದ ಪ್ರಕಟಣಾ ಶಾಖೆ ಶ್ರೀ ಎಸ್.ಎಸ್. ಚಂದ್ರಶೇಖರ್ ಅವರು ರಚಿಸಿರುವ ದಿವಾನ್ ರಂಗಾಚಾರ್ಲು, ದಿವಾನ್ ಶೇಷಾದ್ರಿ ಅಯ್ಯರ್ ಇವರುಗಳ

ಜೀವನ ಚರಿತ್ರೆಯನ್ನು ಪ್ರಕಟಿಸಿದೆ. ಡಿ.ವಿ.ಜಿ.ಯವರ ಜ್ಞಾಪಕ ಚಿತ್ರಶಾಲೆಯಲ್ಲಿ ಹಲವಾರು ದಿವಾನರುಗಳ ವ್ಯಕ್ತಿ ಚಿತ್ರಗಳಿವೆ.....'

ಇದು ನಿಟ್ಟೂರುರವರ ಅದ್ಭುತ ನೆನಪಿನ ಒಂದು ಪುಟ್ಟ ಮಾದರಿ.

ನಿಟ್ಟೂರುರವರು ಯಾವುದೇ ಮಾತನ್ನು ಹೇಳಲಿ, ಅಥವಾ ಬರೆಯಲಿ ಅದರಲ್ಲಿ ಕಡು ಸತ್ಯವಿರುತ್ತದೆ. ಕಹಿ ಪಥ್ಯವಿರುತ್ತದೆ. ನಿಷ್ಠುರ ಎಚ್ಚರಿಕೆ ಇರುತ್ತದೆ. ಸತ್ಯ ಹೇಳಲು ಅವರು ಎಂದೂ ಹಿಂಜರಿದವರಲ್ಲ.

ನನ್ನ ಮತ್ತು ಪೂಜ್ಯ ನಿಟ್ಟೂರುರವರ ನಿಕಟ ಸಂಬಂಧದ ಈ ೧೩-೧೪ ವರ್ಷಗಳಲ್ಲಿ, ಅವರನ್ನು ಗೋಖಲೆ ಸಾರ್ವಜನಿಕ ಸಂಸ್ಥೆಯ ಕಾರ್ಯದರ್ಶಿಯಾಗಿ, ಬಿ.ಎಂ.ಶ್ರೀ. ಪ್ರತಿಷ್ಠಾನದ ಅಧ್ಯಕ್ಷರಾಗಿ, ಗೌರವಾಧ್ಯಕ್ಷರಾಗಿ ಹತ್ತಿರದಿಂದ ಕಂಡಿದ್ದೇನೆ. ಹಲವು ಬಾರಿ ಅವರೊಡನೆ ಒಂದೇ ವೇದಿಕೆ ಮೇಲೆ ಕುಳಿತಿದ್ದೇನೆ. ಕನ್ನಡ ಸಾಹಿತ್ಯ ಪರಿಷತ್ತಿನ ಗೌರವ ಕೋಶಾಧ್ಯಕ್ಷನಾಗಿದ್ದಾಗ ಅವರನ್ನು ಪರಿಷತ್ತಿನ ಕಾರ್ಯಕ್ರಮಗಳಿಗೆ ಸ್ವಾಗತಿಸಿ ಸನ್ಮಾನಿಸುವ ಸೌಭಾಗ್ಯಕ್ಕೂ ನಾನು ಭಾಜನನಾಗಿದ್ದೇನೆ.

ಇವರ ಹೆಸರನ್ನು ನಾನು ೪೦-೫೦ ವರ್ಷಗಳ ಹಿಂದೇ ಕೇಳಿದ್ದೆ. ಸತ್ಯ ಶೋಧನ ಪ್ರಕಟನಾಲಯದಲ್ಲಿ ಕಂಡಿದ್ದ ನೆನಪೂ ಇದೆ. ನನ್ನದೊಂದು ಕಥಾ ಸಂಕಲವನ್ನೊ ಅಥವಾ ಕಾದಂಬರಿಯನ್ನೊ ಪ್ರಕಟಿಸುವ ಬಗ್ಗೆ ಇವರೊಡನೆ ಸಮಾಲೋಚಿಸಲು ನಾನು ನನ್ನ ವಿದ್ಯಾಗುರುಗಳಾದ ದಿವಗಂತ ಕೆ.ಎಸ್. ಜೋಯಿಸ್‌ರವರ ಜೊತೆಯಲ್ಲಿ ತುಮಕೂರಿನಿಂದ ಬಂದಿದ್ದ ನೆನಪು. ಗಾಂಧಿ ಸಾಹಿತ್ಯ ಹಾಗೂ ಸ್ವಾತಂತ್ರ್ಯ ಚಳವಳಿಗೆ ಸಂಬಂಧಿಸಿದ್ದ ಪುಸ್ತಕಗಳಲ್ಲಿ ಪ್ರಕಟಣೆಗೆ ಆದ್ಯತೆ ಕೊಡುತ್ತಿದ್ದ ಆ ಸಂಸ್ಥೆ ನನ್ನ ಪುಸ್ತಕವನ್ನು ಪ್ರಕಟಣೆಗೆ ಅಂಗೀಕರಿಸಿರಲಿಲ್ಲ. ಆದರೆ ಮನ ತುಂಬಿ ಮೃದು ಸಾಂತ್ವವನ್ನು ಹೇಳಿದ್ದುದು ಇಂದೂ ನೆನಪಿದೆ.

ನ್ಯಾಯಮೂರ್ತಿ ನಿಟ್ಟೂರುರವರ ನಿಸ್ಪೃಹ, ನಿಸ್ವಾರ್ಥ ಕ್ರಮಬದ್ಧ ಜೀವನ ನವಪೀಳಿಗೆಯವರಿಗೆ ಆದರ್ಶಪ್ರಾಯವಾಗಿದೆ. ನುಡಿದಂತೆ ನಡೆಯುತ್ತಾರೆ. ನಡೆದು ಮಾರ್ಗದರ್ಶನ ನೀಡುತ್ತಾರೆ. ದರ್ಶಿತ ಮಾರ್ಗದಲ್ಲಿ ನಡೆದು ನಿಶ್ಚಿತ ಗುರಿ ಸಾಧಿಸುತ್ತಾರೆ. ಮಾರ್ಗಮಧ್ಯದಲ್ಲಿ ಎಷ್ಟೇ ಕಷ್ಟಗಳು ಬಂದರೂ ಅಂಜುವವರಲ್ಲ. ಗುರಿ ಸಾಧಿಸುವ ಛಲ, ಗೆಲ್ಲ ಬಯಸುವ ಹುಮ್ಮಸ್ಸು, ಸದಾ ಕಾರ್ಯಮಗ್ನನಾಗಿರ ಬಯಸುವ ಬಯಕೆ ಅವರನ್ನು ಈ ಇಳಿವಯಸ್ಸಿನಲ್ಲೂ ಚೈತನ್ಯಶಾಲಿಯಾಗಿರಿಸಿದೆ.

ಆದರ್ಶ ಜೀವನದ ಆಕಾಂಕ್ಷೆ, ಈ ಕರ್ಮಯೋಗಿ ಕಾನೂನು ತಜ್ಞರು, ವಕೀಲರಾಗಿ,

ನ್ಯಾಯಾಧೀಶರಾಗಿ, ರಾಜ್ಯದ ಮುಖ್ಯ ನ್ಯಾಯಾಧೀಶರಾಗಿ, ರಾಜ್ಯದ ಹಂಗಾಮಿ ರಾಜ್ಯಪಾಲರಾಗಿ, ಕೇಂದ್ರ ವಿಜಿಲೆನ್ಸ್ ಕಮೀಷನರ್ ಆಗಿ ಕಾರ್ಯನಿರ್ವಹಿಸಿದ್ದಾರೆ. ಕಾರ್ಯದಕ್ಷತೆ ಮೆರೆದಿದ್ದಾರೆ.

ಗಾಂಧಿ ವಿಚಾರಧಾರೆಯಿಂದ ಪ್ರಭಾವಿತರಾಗಿರುವ ಶ್ರೀಯುತರು ಗಾಂಧೀಜಿಯ ಆತ್ಮಕಥೆ, 'ಸತ್ಯ ಶೋಧನ ಬದುಕು' ಮತ್ತು 'ಅನಾಸಕ್ತಿಯೋಗ' ಕೃತಿಗಳನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ.

ಮೃದು ಮಾತಿನ ಮಲ್ಲ, ನಿಟ್ಟೂರುರವರು ವಿವಾದಗಳಿಂದ ಸದಾ ದೂರವಿರುತ್ತಾರೆ. ಸಂಯಮ ಮಾತ್ರದಿಂದ ಜಯ ಸಾಧ್ಯ ಎಂಬುದನ್ನು ಅವರ ಅನುಭವ ಸಾಧಿಸಿ ತೋರಿಸಿದೆ.

ನಿಟ್ಟೂರುರವರು ಅಪ್ರತಿಮ ಪ್ರತಿಭೆಯ ಪ್ರಜ್ಞಾವಂತ, ಸುಕೋಮಲ ಮನಸ್ಸಿನ ಪ್ರಬುದ್ಧ, ಜ್ಞಾನವೃದ್ಧ, ಶತಶತಮಾನಗಳಿಗೊಮ್ಮೆ ಕಾಣಸಿಕೊಳ್ಳುವ ಯುಗ ಪುರುಷ. ಶತಾಯುಗಳ ಸಾಲಿನಲ್ಲಿ ಪ್ರಜ್ವಲಿಸುವ ದಿವ್ಯತಾರೆ. ಕರ್ನಾಟಕದ ಚರಿತ್ರೆಯಲ್ಲಿ ಚಿರಸ್ಥಾಯಿಯಾಗುಳಿಯುವ ದಿವ್ಯದೀಪ್ತಿ ಶ್ರೀ ನಿಟ್ಟೂರು ಶ್ರೀನಿವಾಸರಾವ್ ಅವರನ್ನು ಇನ್ನೂ ಬಹಳ ಕಾಲ ನಗರದಲ್ಲಿ ನಡೆಯುವ ಸಾಹಿತ್ಯ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಕಾಣುವ ಸೌಭಾಗ್ಯ ಜನರಿಗೆ ದೊರೆಯಲಿ ಎಂದು ಆಶಿಸೋಣ.

ಸ್ನೇಹಪರ, ಅಜಾತಶತ್ರು ನಿಟ್ಟೂರುರವರು ತೊಂಬತ್ತೊಂಬತ್ತು ದಾಟಿ ನೂರಕ್ಕೆ ಅಡಿ ಇರಿಸಿದ್ದಾರೆ. ೨೪ ಆಗಸ್ಟ್ ೨೦೦೩ರಂದು ನೂರರ ಗಡಿ ದಾಟಿ ಶತಾಯು ಶ್ರೀ ಎ.ಎನ್. ಮೂರ್ತಿರಾಯರ ಸಂಗ ಸೇರಲಿದ್ದಾರೆ. ನಿಟ್ಟೂರುರವರಿಗೆ ದೀರ್ಘಾಯಸ್ಸು, ಒಳ್ಳೆಯ ಆರೋಗ್ಯ ಸಂತೃಪ್ತಿ ಸಮಾಧಾನವನ್ನು ಭಗವಂತನು ಕರುಣಿಸಲಿ ಎಂದು ಹಾರೈಸೋಣ.






# ನೂರು ವಸಂತ ನೂರಾರು ಸಂತಸ

✍ ಪ್ರೊ|| ಡಿ. ಲಿಂಗಯ್ಯ*

ಇಪ್ಪತ್ತನೆಯ ಶತಮಾನ ಭಾರತ ದೇಶದ ಪಾಲಿಗೆ ಮಹತ್ವದ ಕಾಲಾವಧಿ. ದೀರ್ಘಕಾಲದ ದಾಸ್ಯದಿಂದ ಬಿಡುಗಡೆ ಹೊಂದಿ ಸ್ವಾತಂತ್ರ್ಯ ಗಳಿಸಿದ್ದು; ಯುಗಪುರುಷ ಮಹಾತ್ಮ ಗಾಂಧೀಜಿ ಯವರ ಮಹತ್ಸಾಧನೆ ನಡೆದದ್ದು; ಹಲವು ಕ್ಷೇತ್ರಗಳಲ್ಲಿ ಹಲವು ಸಿದ್ಧಿ ಪುರುಷರು ಹುಟ್ಟಿ ಭಾರತದ ಭವ್ಯ ಪರಂಪರೆಯನ್ನು ಉಜ್ವಲಗೊಳಿಸಿದ್ದು ಈ ಪರ್ವಕಾಲದಲ್ಲೇ. ಇಪ್ಪತ್ತನೆಯ ಶತಮಾನದ ಸಮಗ್ರ ವಿದ್ಯಮಾನಗಳಿಗೆ ಸಾಕ್ಷಿಯಾಗಿ ಬದುಕಿದವರು ಕೆಲವೇ ಮಂದಿ. ಅಂಥವರಲ್ಲಿ ಶ್ರೀ ನಿಟ್ಟೂರು ಶ್ರೀನಿವಾಸರಾಯರು ಒಬ್ಬರು.

ಶತಾಯುಷಿ ಶ್ರೀ ನಿಟ್ಟೂರು ಶ್ರೀನಿವಾಸರಾವ್ ಬೆಂಗಳೂರಿನಲ್ಲಿ ಜನಿಸಿದರು. (೨೪.೮.೧೯೦೩) ಅವರ ತಂದೆಯ ಊರು ತುಮಕೂರು ಜಿಲ್ಲೆಯ ನಿಟ್ಟೂರು. ಅವರ ತಂದೆ ಶ್ರೀ ಶಾಮಣ್ಣನವರು ಮಾಧ್ಯಮಿಕ ಶಾಲೆಯ ಮುಖ್ಯೋಪಾಧ್ಯಾಯರು. ತಾಯಿ ಸೀತಮ್ಮ ಸದ್ಗೃಹಿಣಿ. ಅವರದು ಸಂಪ್ರದಾಯಸ್ಥ ಧಾರ್ಮಿಕ ಮನೆತನ. ಶ್ರೀ ಶ್ರೀನಿವಾಸರಾಯರ ಪ್ರಾರಂಭದ ವಿದ್ಯಾಭ್ಯಾಸ ಚಳ್ಳಕೆರೆ, ಚಿತ್ರದುರ್ಗ, ಶಿವಮೊಗ್ಗೆಗಳಲ್ಲಿ ನಡೆಯಿತು. ಉನ್ನತ ಶಿಕ್ಷಣ ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ ಮುಂದುವರಿಯಿತು. ಅವರು ಮೈಸೂರು ವಿಶ್ವ ವಿದ್ಯಾಲಯ (ಆಗ ರಾಜ್ಯದಲ್ಲಿದ್ದುದು ಒಂದೇ ವಿಶ್ವ

---

* ೬೯೦, ಮೊದಲ 'ಬಿ' ಮುಖ್ಯರಸ್ತೆ, ೭ನೇ ಬ್ಲಾಕ್, ೨ನೇ ಫೇಸ್
ಬನಶಂಕರಿ ೩ನೇ ಹಂತ, ಬೆಂಗಳೂರು - ೫೬೦ ೦೮೫

ವಿದ್ಯಾಲಯ)ದಿಂದ ಬಿ.ಎಸ್‌ಸಿ. ಪದವಿಯನ್ನು, ಮದರಾಸು ವಿಶ್ವವಿದ್ಯಾಲಯದಿಂದ ಕಾನೂನು ಪದವಿಯನ್ನೂ ಗಳಿಸಿದರು. ಆಗ ಮೈಸೂರು ಸಂಸ್ಥಾನದಲ್ಲಿ ಕಾನೂನು ಶಿಕ್ಷಣಕ್ಕೆ ಅವಕಾಶವಿರಲಿಲ್ಲ. ಮದರಾಸು ಅಥವಾ ಪುಣೆಗೆ ಹೋಗಬೇಕಾಗಿತ್ತು. ಶ್ರೀನಿವಾಸರಾವ್ ಮದರಾಸನ್ನು ಆರಿಸಿಕೊಂಡರು. ಶ್ರೀಯುತರು ಸಂಪ್ರದಾಯಸ್ಥ ಬ್ರಾಹ್ಮಣ ಕುಟುಂಬದಲ್ಲಿ ಬೆಳೆದವರಾದರೂ ವಿದ್ಯಾವಂತರ ಪರಿಸರವಿದ್ದುದರಿಂದ ಆಧುನಿಕ ವಿದ್ಯಮಾನಗಳಿಗೂ ಮನಸ್ಸು ತೆರೆಯಲು ಅವಕಾಶವಾಯಿತು.

ಶ್ರೀ ಶ್ರೀನಿವಾಸರಾವ್ ಶಿಕ್ಷಣ ಮುಗಿಸಿದ ಮೇಲೆ ಬೆಂಗಳೂರಿನಲ್ಲಿ ವಕೀಲಿ ವೃತ್ತಿಯನ್ನು ಆರಂಭಿಸಿದರು (೧೯೨೭). ಕಡಿಮೆ ಸಂಖ್ಯೆಯ ಪದವೀಧರರಿದ್ದ ಆ ಕಾಲದಲ್ಲಿ ವಕೀಲಿ ವೃತ್ತಿಗೆ ಬಹಳ ಗೌರವವಿತ್ತು. ಅವರ ನ್ಯಾಯವಾದಿ ಜೀವನ ಸಾಕಷ್ಟು ಭರಾಟೆಯಿಂದಲೇ ನಡೆಯಿತು. ಕೆಲವು ಜನಪರವಾದ ಕೇಸುಗಳಲ್ಲಿ ಸಮರ್ಥವಾಗಿ ವಾದಿಸಿ, ಕಕ್ಷಿದಾರರಿಗೆ ನ್ಯಾಯ ದೊರಕಿಸಿಕೊಟ್ಟು ಹೆಸರು ಗಳಿಸಿದರು. ಬೆಂಗಳೂರು ನಗರ ಅವರ ಕರ್ಮಭೂಮಿಯೂ ಭೋಗಭೂಮಿಯೂ ಆಯಿತು.

ನ್ಯಾಯವಾದಿ ವೃತ್ತಿಯ ವಿವಿಧ ಸ್ಥಾನಮಾನಗಳನ್ನು ಗಳಿಸಿದ್ದು ಶ್ರೀನಿವಾಸರಾಯರ ವಿಶೇಷ. ಪ್ರಸಿದ್ಧ ನ್ಯಾಯವಾದಿಯಾದ ಅವರು ಮೈಸೂರು ಸಂಸ್ಥಾನದ ವಕೀಲರ ಸಂಘದ ಪ್ರಥಮ ಅಧ್ಯಕ್ಷರಾಗಿದ್ದರು. ೧೯೫೩ರಲ್ಲಿ ಅಡ್ವೊಕೇಟ್ ಜನರಲ್ಲಾಗಿ, ೧೯೫೫ರಲ್ಲಿ ಶ್ರೇಷ್ಠ ನ್ಯಾಯಾಲಯದ ನ್ಯಾಯಾಧೀಶರಾಗಿ, ೧೯೬೧ರಲ್ಲಿ ಶ್ರೇಷ್ಠ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರಾಗಿ ಸೇವೆ ಸಲ್ಲಿಸಿದರು. ಶ್ರೀಯುತರು ಮುಖ್ಯ ನ್ಯಾಯಾಧೀಶರಾಗಿದ್ದಾಗ ರಾಜ್ಯದ ರಾಜ್ಯಪಾಲರಾಗಿಯೂ ಕಾರ್ಯನಿರ್ವಹಿಸಿದರು. ೧೯೬೮ರಲ್ಲಿ ಸೇವೆಯಿಂದ ನಿವೃತ್ತರಾಗುವವರೆಗೂ ಒಂದಲ್ಲ ಒಂದು ಉನ್ನತ ಹುದ್ದೆಯಲ್ಲಿದ್ದರು.

ಬೆಂಗಳೂರು ನಗರದ ಗಣ್ಯರೂ ಅರ್ಥಶಾಸ್ತ್ರಜ್ಞರೂ ಹಂಗಾಮಿ ದಿವಾನರೂ ಆಗಿದ್ದ ಶ್ರೀ ಎಂ.ಎಸ್. ಕೃಷ್ಣರಾವ್ ಮಗಳು ಪದ್ಮಾವತಿಯವರೊಡನೆ ಶ್ರೀನಿವಾಸರಾಯರ ವಿವಾಹವಾಯಿತು. ಅವರ ಶ್ರೀಮತಿಯವರಿಗೆ ಸಾಹಿತ್ಯದಲ್ಲಿ ಆಸಕ್ತಿ. ಗಂಡನ ಸಾಂಸ್ಕೃತಿಕ ಸಾಹಿತ್ಯಕ, ಸಾರ್ವಜನಿಕ ಚಟುವಟಿಕೆಗಳಲ್ಲಿ ಮನಃಪೂರ್ವಕವಾಗಿ ಸಹಕರಿಸಿದರು.

ಶ್ರೀನಿವಾಸರಾಯರ ಹೆಸರಿನ ಜೊತೆಗೆ ಅವರ ತಂದೆಯ ಊರಾದ 'ನಿಟ್ಟೂರು' ಹಾಗೂ ಅವರು ನಿರ್ವಹಿಸಿದ ಹುದ್ದೆಗಳಲ್ಲಿ ಒಂದಾದ 'ನ್ಯಾಯಮೂರ್ತಿ' ಎಂಬ ನುಡಿಗಳು ವಿಶೇಷಣಗಳಾಗಿ ಬಳಕೆಗೆ ಬಂದವು. ಕೇವಲ 'ನಿಟ್ಟೂರು' ಎಂದರೂ ಅವರಿಗೇ ಅನ್ವಯಿಸುವಷ್ಟು ಜನಪ್ರಿಯವಾಗಿರುವುದುಂಟು.

ಶ್ರೀ ನಿಟ್ಟೂರು ಶ್ರೀನಿವಾಸರಾವ್ ವಕೀಲರಾಗಿ ಸ್ವತಃ ಕೇಸು ನಡೆಸುತ್ತಿದ್ದುದರ ಜೊತೆಗೆ, ಕಕ್ಷಿದಾರರು ಇತರ ವಕೀಲರಿಂದ ಕೇಸು ನಡೆಸುವ ಬಗೆಗೆ ಸಲಹೆಗಳನ್ನೂ ನೀಡುತ್ತಿದ್ದರು. ಸಣ್ಣ ಕೇಸುಗಳಿಂದ ದೊಡ್ಡ ಕೇಸುಗಳವರೆಗೂ ಅವರ ಸಲಹೆ, ಮಾರ್ಗದರ್ಶನ ಲಭ್ಯವಾಗುತ್ತಿತ್ತು.

ಶ್ರೀ ಅಂಕಯ್ಯ ಎನ್ನುವವರು ತಮ್ಮ ಯಾವುದೇ ಕೇಸನ್ನು ನಡೆಸುವ ಬಗೆಗೆ ನಿಟ್ಟೂರರಿಂದ ಸಲಹೆ ಕೇಳಲು ಒಬ್ಬ ರಾಜಕಾರಣಿಯೊಡನೆ ಬಂದರು. ಸತ್ಯ ಶೋಧನ ಪುಸ್ತಕ ಮಂದಿರದಲ್ಲಿ ನಿಟ್ಟೂರರು ಕುಳಿತಿದ್ದರು. ಕೇಸಿನ ಬಗೆಗೆ ಮಾತುಕತೆ ನಡೆಯಿತು. ಕೇಸು ಚೆನ್ನಾಗಿದೆ. ಕೇಸನ್ನು ನಡೆಸಿದರೆ ಗೆಲ್ಲಬಹುದು ಎಂದು ಸಲಹೆ ದೊರೆಯಿತು. ಶ್ರೀ ಅಂಕಯ್ಯ ಜಿಪುಣರು. ಸಲಹೆ ನೀಡಿದ ವಕೀಲರಿಗೆ ಐದು ರೂಪಾಯಿ ಸಂಭಾವನೆ ನೀಡಿದರು! ಶ್ರೀ ನಿಟ್ಟೂರರರು ನೋಟಿನ ಮೇಲಿದ್ದ ಗಾಂಧೀಜಿಯ ಚಿತ್ರವನ್ನು ನೋಡಿ, ಜೇಬಿಗಿಟ್ಟುಕೊಂಡರು. ಶ್ರೀ ಅಂಕಯ್ಯ ಕಕ್ಷಿದಾರನ ಧರ್ಮವನ್ನು ಪಾಲಿಸಿದರು; ಶ್ರೀ ನಿಟ್ಟೂರರು ವಕೀಲನ ಧರ್ಮವನ್ನು ಪಾಲಿಸಿದರು.

ಶ್ರೀ ಶ್ರೀನಿವಾಸರಾಯರು ವಕೀಲರಾಗಿದ್ದಾಗ ವಕೀಲ ಕ್ಷೇತ್ರ, ನ್ಯಾಯಾಂಗದ ಆಡಳಿತ, ಸಾರ್ವಜನಿಕ ಆಡಳಿತ, ಕಾನೂನು ವಿಷಯಗಳ ಅಧ್ಯಯನಕ್ಕೆ ಹೆಚ್ಚು ಗಮನ ಕೊಟ್ಟರು. ಮೈಸೂರು ರಾಜ್ಯ ವಕೀಲರ ಸಮ್ಮೇಳನಗಳ ಸಂಪರ್ಕವಿಟ್ಟುಕೊಂಡಿದ್ದರು. ಮೈಸೂರು ಶ್ರೇಷ್ಠ ನ್ಯಾಯಾಲಯ ಬಾರ್ ಕೌನ್ಸಿಲ್‌ನ ಅಧ್ಯಕ್ಷರಾಗಿದ್ದರು. ಬೆಳಗಾವಿಯಲ್ಲಿ ನಡೆದ ಅಖಿಲ ಕರ್ನಾಟಕ ವಕೀಲರ ಸಮ್ಮೇಳನ, ಮದರಾಸ್ ಬಾರ್ ಫೆಡರೇಶನ್ನಿನ ಸಮ್ಮೇಳನ, ಚಿತ್ತೂರು ಜಿಲ್ಲಾ ಕಾನೂನು ಸಂಸ್ಥೆ, ಭಾರತೀಯ ಸಾರ್ವಜನಿಕ ಆಡಳಿತ ಸಂಸ್ಥೆ, ಅಂತರರಾಷ್ಟ್ರ ಕಾನೂನು ಸಂಸ್ಥೆ ಮುಂತಾದವುಗಳ ನಿಕಟವರ್ತಿಯಾಗಿದ್ದರು. ಶ್ರೀ ನಿಟ್ಟೂರರರು ವಕೀಲರಾಗಿ ಸಂಪಾದಿಸಿದ ಹಣಕ್ಕಿಂತ, ಗಳಿಸಿದ ಜನ ಸಂಪರ್ಕ ಹೆಚ್ಚು.

ಶ್ರೀ ನಿಟ್ಟೂರರು ನ್ಯಾಯಾಧೀಶರಾಗಿದ್ದ ಅವಧಿಯಲ್ಲಿ ನಡೆದ ಚುನಾವಣೆ ಒಂದರಲ್ಲಿ ಬೆಂಗಳೂರು ಯಲಹಂಕ ಕ್ಷೇತ್ರದಲ್ಲಿ ಒಬ್ಬ ಮತದಾರ ಎರಡು ಕಡೆ ಮತ ಚಲಾಯಿಸಿದ ಕೇಸು ಬಂತು. ವಾದ ವಿವಾದ ನಡೆಯಿತು. ಬಲವಾದ ಸಾಕ್ಷಿ ಆಧಾರಗಳಿಲ್ಲದುದರಿಂದ, ಎರಡು ಕಡೆ ಮತ ನೀಡಿದವನ ಪರವಾಗಿ ಶ್ರೀ ನಿಟ್ಟೂರರು ತೀರ್ಪು ನೀಡಿದರು! ಇದು ಸಾಕಷ್ಟು ಚರ್ಚೆಗೆ ಕಾರಣವಾಯಿತು.

ಶ್ರೀ ಶ್ರೀನಿವಾಸರಾವ್ ಭಾರತದ ಪ್ರಥಮ ಜಾಗೃತ ಆಯೋಗದ ಆಯುಕ್ತರಾಗಿದ್ದ ರೆಂಬುದು ಪ್ರಶಂಸೆಯ ಉಲ್ಲೇಖಸವಾಗಿದೆ. ಸ್ವತಂತ್ರ ಭಾರತದಲ್ಲಿ ಭ್ರಷ್ಟಾಚಾರವಿದೆ, ಅದು ಕಡಿಮೆಯಾಗಬೇಕು ಎನ್ನುತ್ತಾರೆ ನಿಟ್ಟೂರರು. ಭ್ರಷ್ಟಾಚಾರವನ್ನು ಸಂಪೂರ್ಣವಾಗಿ

ತಡೆಗಟ್ಟಲು ಏನಾದರೂ ಪರಿಹಾರವಿದೆಯೇ ಎಂದರೆ ಮೌನರಾಗುತ್ತಾರೆ. ಸಾತ್ವಿಕ ಸ್ವಭಾವದ ಅವರಿಗೆ ನಿಷ್ಠುರವಾದ ಉತ್ತರ ಕೊಡಲು ಬೇಸರವೆಂದು ಭಾವಿಸಬೇಕಾಗುತ್ತದೆ.

ಶ್ರೀ ನಿಟ್ಟೂರರು ಮುಖ್ಯ ನ್ಯಾಯಾಧೀಶರಾಗಿದ್ದಾಗ ಒಂದು ತೀರ್ಪನ್ನೂ ನೀಡಲಿಲ್ಲ ವೆಂಬುದು ಕೆಲವರ ಟೀಕೆ. ತೀರ್ಪು ನೀಡಿದರೆ ಯಾರಿಗೆ ನೋವಾಗುತ್ತದೋ ಎಂಬ ಕಳವಳ ನ್ಯಾಯಾಧೀಶರಿಗೆ ಎಂಬುದು ಕೆಲವರ ಸಮಾಧಾನ. ಅದು ಅವರ ಸೋಮಾರಿತನ ವೆಂಬುದು ಇನ್ನು ಕೆಲವರ ಅಭಿಮತ. ನ್ಯಾಯಾಧೀಶರಾಗಿ ತೀರ್ಪು ನೀಡದುದಕ್ಕೆ ಹಲವು ವಕೀಲರು ಅಸಮಾಧಾನ ಪಟ್ಟುಕೊಂಡಿದ್ದುದಂತು ನಿಜ. ಅಂಥವರ ಪೈಕಿ ಭಾರತದ ಸರ್ವೋಚ್ಚ ನ್ಯಾಯಾಧೀಶರಾಗಿದ್ದ ಶ್ರೀ ಇ.ಎಸ್. ವೆಂಕಟರಾಮಯ್ಯನವರೂ ಒಬ್ಬ ರಾಗಿದ್ದರು.

ಕನ್ನಡ ಪತ್ರಿಕೋದ್ಯಮದ ಭೀಷ್ಮ ಶ್ರೀ ತಿರುಮಲೆ ತಾತಾಚಾರ್ಯ ಶರ್ಮರು ಪ್ರಾರಂಭಿಸಿದ ವಿಶ್ವಕರ್ನಾಟಕ ಪತ್ರಿಕೆ, ಸರಕಾರದಿಂದಾದ ಅದರ ಮುಟ್ಟುಗೋಲು, ಸಂಪಾದಕರ ಮೇಲಿನ ಮಾನನಷ್ಟ ಮೊಕದ್ದಮೆ ಮೊದಲಾದ ಸಂದರ್ಭಗಳಲ್ಲಿ ಶ್ರೀ ನಿಟ್ಟೂರರು ಕಾನೂನು ಸಲಹೆಗಾರರಾಗಿದ್ದರು. ಒಂದೆರಡು ಕೇಸುಗಳನ್ನು ವಕೀಲರಾಗಿ ತಾವೇ ವಾದಿಸಿ ಗೆದ್ದುಕೊಟ್ಟರು. ಶ್ರೀ ತಿ.ತಾ. ಶರ್ಮರಿಗೂ, ಶ್ರೀ ನಿಟ್ಟೂರರಿಗೂ ಆತ್ಮೀಯ ಪರಿಚಯ, ಸ್ನೇಹ, ಬಿಡಿಸಲಾಗದ ನಂಟು. ಶ್ರೀ ನಿಟ್ಟೂರರು ಆಗಾಗ ಹೇಳುವುದುಂಟು: 'ತಿ.ತಾ. ಶರ್ಮರೂ ನಾನೂ ಎರಡು ದೇಹ, ಒಂದು ಆತ್ಮ.'

ಶ್ರೀ ನಿಟ್ಟೂರರು ವಕೀಲಿ ವೃತ್ತಿಯ ಜೊತೆಗೆ ಪುಸ್ತಕೋದ್ಯಮಕ್ಕೂ ತೊಡಗಿದರು. ಆ ಕಾಲಕ್ಕೆ ಏಕಕಾಲದಲ್ಲಿ ಎರಡು ವೃತ್ತಿಗಳನ್ನು ಅವಲಂಬಿಸಿದ ವಕೀಲರಲ್ಲಿ ಅವರೇ ಮೊದಲಿಗರು. ಶ್ರೀ ತಿ.ತಾ. ಶರ್ಮ ಮತ್ತು ಶ್ರೀ ನಿಟ್ಟೂರರು ಕೂಡಿ, ಬೆಂಗಳೂರು ಕೋಟೆಯಲ್ಲಿ 'ವಿಶ್ವಕರ್ನಾಟಕ ಪ್ರಕಟಣಾಲಯ' ಸ್ಥಾಪಿಸಿದರು. ಒಂದೆರಡು ತೊಡಕುಗಳು ಕಾಣಿಸಿಕೊಂಡವು. ಪ್ರಕಾಶನಕ್ಕೆ ಸಂಬಂಧಿಸಿದ ಅಂಚೆ ಪತ್ರಗಳು ಮೂಲ ವಿಶ್ವಕರ್ನಾಟಕ ಪತ್ರಿಕೆಯ ವಿಳಾಸಕ್ಕೆ ಹೋಗುತ್ತಿದ್ದವು! ಎರಡೂ ಸಂಸ್ಥೆಗಳು ಸುಮಾರು ಹತ್ತಿರದಲ್ಲೇ ಇದ್ದುದು, ವಿಶ್ವಕರ್ನಾಟಕ ಪತ್ರಿಕೆಯ ವಿಳಾಸ ಹೆಚ್ಚು ಜನಪ್ರಿಯವಾಗಿದ್ದುದು ಇದಕ್ಕೆ ಕಾರಣ. ಇದನ್ನು ತಪ್ಪಿಸಲು ಹೆಸರು ಬದಲಾಯಿಸಿ 'ಕರ್ನಾಟಕ ಸಾಹಿತ್ಯ ಪ್ರಕಟಣ ಮಂದಿರ' ಎಂದು ಕರೆಯಲಾಯಿತು. ಅದಕ್ಕೂ ಸ್ವಲ್ಪ ಅಡ್ಡಿ ಕಾಣಿಸಿಕೊಂಡಿತು. ಹೆಸರು ಉದ್ದವಾಗಿದ್ದುದು ವ್ಯವಹಾರಕ್ಕೆ ತೊಂದರೆಯಾಯಿತು. ಅದನ್ನು ಸರಿಪಡಿಸಲು ಸಮಾಲೋಚನೆ ನಡೆಯಿತು.

ಆ ಹೊತ್ತಿಗಾಗಲೇ ಶ್ರೀ ನಿಟ್ಟೂರರು ಮಹಾತ್ಮಾಗಾಂಧೀಜಿಯವರ ಆತ್ಮಕಥೆಯನ್ನು

ಮೊದಲಬಾರಿಗೆ ಕನ್ನಡ ಭಾಷೆಗೆ ಅನುವಾದಿಸಿದ್ದು ಅದು ವಿಶ್ವಕರ್ನಾಟಕ ಪತ್ರಿಕೆಯಲ್ಲಿ ಧಾರಾವಾಹಿಯಾಗಿ ಪ್ರಕಟವಾಗಿ ಜನಪ್ರಿಯವಾಗಿತ್ತು. ಅದರ ಆಧಾರದ ಮೇಲೆ ಹೊಸ ಪ್ರಕಾಶನ ಸಂಸ್ಥೆಯ ಹೆಸರು ಮೊಟಕಾಗಿರಲಿ ಎಂದು 'ಸತ್ಯ ಶೋಧನ ಪುಸ್ತಕ ಮಂದಿರ' ನಾಮಕರಣವಾಯಿತು. ಶ್ರೀ ನಿಟ್ಟೂರು ಶ್ರೀನಿವಾಸರಾಯರು ಸ್ವತಃ ಹುಟ್ಟುಹಾಕಿ ನಡೆಸಿದ್ದು ಇದೊಂದೇ ಸಂಸ್ಥೆ. ಇದರಿಂದ ಎರಡು ಕೆಲಸಗಳಾದವು: ಒಂದು ಕನ್ನಡದ ಎಲ್ಲಾ ಪುಸ್ತಕಗಳೂ ಒಂದೇ ಕಡೆ ದೊರೆಯುವಂತಾಯಿತು. ಎರಡು: ಉತ್ತಮ ಗ್ರಂಥಗಳು ಪ್ರಕಟವಾಗಲು ನೆರವಾಯಿತು. ಎಂ.ಆರ್. ಶ್ರೀನಿವಾಸಮೂರ್ತಿ, ಸಂಸ, ವಿ. ಸೀತಾ ರಾಮಯ್ಯ, ಗೊರೂರು ರಾಮಸ್ವಾಮಿ ಅಯ್ಯಂಗಾರ್, ಎಲ್. ಗುಂಡಪ್ಪ, ಆನಂದ, ಎಂ. ರಾಮರಾವ್ ಮೊದಲಾದವರ ಅತ್ಯುತ್ತಮ ಗ್ರಂಥಗಳು ಸತ್ಯ ಶೋಧನ ಪುಸ್ತಕ ಮಂದಿರದಿಂದ ಪ್ರಕಟವಾದವು. ಸುಮಾರು ಮೂರು ದಶಕಗಳವರೆಗೆ ಚೆನ್ನಾಗಿ ನಡೆದ ಸದಾಶಯದ ಈ ಸಂಸ್ಥೆಯನ್ನು ಅನಂತರ ಬೇರೆಯವರಿಗೆ ಮಾರಲಾಯಿತು.

ಕಲಾಸಿಪಾಳ್ಯಂ ಬಸ್ ನಿಲ್ದಾಣದಲ್ಲಿ ಇಳಿಯುತ್ತಿದ್ದಂತೆ ವಕೀಲ ಶ್ರೀ ನಿಟ್ಟೂರರ ಕಛೇರಿ, ಸತ್ಯ ಶೋಧನ ಪುಸ್ತಕ ಮಂದಿರ ಕಾಣುತ್ತಿದ್ದವು. ಅದರ ಪಕ್ಕದಲ್ಲೇ ಖಾದಿ ವಸ್ತ್ರಾಲಯ. ಆ ಕಾಲದ ರಾಜಕಾರಿಣಿಗಳು, ಗಣ್ಯವ್ಯಕ್ತಿಗಳು, ಸಾಹಿತಿಗಳು ಸಂಜೆಯ ಹೊತ್ತು ಸೇರಿ, ದೇಶದ ವಿದ್ಯಮಾನಗಳನ್ನೆಲ್ಲಾ ಚರ್ಚಿಸುತ್ತಿದ್ದ ಸ್ಥಳ ಅದು. ಶ್ರೀ ನಿಟ್ಟೂರರು ಎಲ್ಲರಿಗೂ ಸಂಪರ್ಕ ಸೇತುವೆಯಂತಿದ್ದರು. ಅಂಗಡಿಯ ಮುಂದೆ ಒಂದು ಕಪ್ಪು ಹಲಗೆ ಇರುತ್ತಿತ್ತು. ಅದರ ಮೇಲೆ ಅಂದು ನಗರದಲ್ಲಿ ನಡೆಯುವ ಸ್ವಾತಂತ್ರ್ಯ ಹೋರಾಟ ಕಾರ್ಯಕ್ರಮಗಳ ವಿವರ ಇರುತ್ತಿತ್ತು. ಸಾರ್ವಜನಿಕರು ಅದನ್ನು ಓದಿಕೊಂಡು ಸಭೆಗಳಲ್ಲಿ ಭಾಗವಹಿಸು ತ್ತಿದ್ದರು.

೧೯೬೦ರ ದಶಕದಲ್ಲಿ ನಾನು ಸತ್ಯ ಶೋಧನ ಪುಸ್ತಕ ಮಂದಿರಕ್ಕೆ ಹೋಗಿ, ನನ್ನ ಎರಡು ಮೂರು ಪುಸ್ತಕಗಳನ್ನು ಕೊಟ್ಟಿದ್ದೆ. ಅಲ್ಲಿ ಶ್ರೀ ನಿಟ್ಟೂರರನ್ನು ಮೊದಲ ಬಾರಿಗೆ ನೋಡಿದರೂ ಅವರ ಬಗೆಗೆ ನನಗೇನೂ ಗೊತ್ತಿರಲಿಲ್ಲ. ಅವರು ಅನುವಾದಿಸಿದ 'ಸತ್ಯ ಶೋಧನೆ' ಗ್ರಂಥವನ್ನು ಓದಿದ್ದರೂ ಅದು ಅವರೆ ಅನುವಾದಿಸಿದ್ದೆಂದು ಆಗ ತಿಳಿದಿರ ಲಿಲ್ಲ. ಏಕೆಂದರೆ ಅನುವಾದ ಪುಸ್ತಕದಲ್ಲಿ ಅವರ ಹೆಸರಿರಲಿಲ್ಲ. ನನಗೆ ಚೆನ್ನಾಗಿ ಅವರ ಪರಿಚಯವಾದದ್ದು ೧೯೭೦ರ ಮೇಲೆ, ಅದೂ ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯಕ್ರಮ ಗಳಲ್ಲಿ.

ಶ್ರೀ ನಿಟ್ಟೂರು ಶ್ರೀನಿವಾಸರಾಯರಿಗೆ 'ಸತ್ಯ ಶೋಧನೆ' ಅನುವಾದ ಗ್ರಂಥದಿಂದ, ಸಾಹಿತ್ಯ ಕ್ಷೇತ್ರದಲ್ಲಿ ಒಳ್ಳೆಯ ಹೆಸರು ಬಂತು; ಸಾಹಿತಿಗಳ ಪರಿಚಯವೂ ಆಯಿತು.

ಹಾಗೆಯೇ ಮಹಾತ್ಮಗಾಂಧಿಯವರ ಭಗವದ್ಗೀತೆಯ ವ್ಯಾಖ್ಯಾನ ಗ್ರಂಥವಾದ 'ಅನಾಸಕ್ತಿಯೋಗ'ವನ್ನೂ ಕನ್ನಡಕ್ಕೆ ಭಾಷಾಂತರಿಸಿದರು. ಅವರ ಅನುವಾದ ಶೈಲಿಯೂ ಉತ್ತಮವಾಗಿದೆ. ಒಂದೆರಡು ಪತ್ರಿಕೆಗಳಲ್ಲೂ ಅವರ ಲೇಖನಗಳು ಪ್ರಕಟವಾದವು. ಮೈಸೂರು ಸಂಸ್ಥಾನದಲ್ಲಿ ಮೊದಲು ಪ್ರಾರಂಭವಾದ 'ದೇಶೀಯ ವಿದ್ಯಾಶಾಲಾ ಪತ್ರಿಕೆ'ಯಲ್ಲಿ ಮಹಲಿಂಗರಂಗ ಕವಿಯ 'ಅನುಭವಾಮೃತ' ಗ್ರಂಥದ ಪರಿಚಯ; ನವಜೀವನ ಪತ್ರಿಕೆಯಲ್ಲಿ ಪ್ರಕಟವಾದ ದತ್ತಾತ್ರೇಯ ಬಾಲಕೃಷ್ಣ ಕಾಲೇಕರರ ಹಿಂದಿ ಲೇಖನದ ಅನುವಾದ 'ನಿರಕ್ಷರ ಬಾಲ ಶಿಕ್ಷಣ' - ಬರಹಗಳನ್ನು ಗಮನಿಸಬಹುದು. ವಿಶ್ವಕರ್ನಾಟಕ ಪತ್ರಿಕೆಯಲ್ಲೂ ಕೆಲವು ಲೇಖನಗಳನ್ನು ಬರೆದಿದ್ದಾರೆ. ಆತ್ಮೀಯರ ಕೆಲವು ಗ್ರಂಥಗಳಿಗೆ ಮುನ್ನುಡಿಯನ್ನು ಬರೆದಿದ್ದಾರೆ. ಉದಾಹರಣೆಗೆ, 'ಕರ್ನಾಟಕದ ಮುಖ್ಯ ಮಂತ್ರಿಗಳು'.

ಶ್ರೀ ನಿಟ್ಟೂರರು ಮನಸ್ಸು ಮಾಡಿದ್ದರೆ ಸಾಹಿತ್ಯ ಕ್ಷೇತ್ರದಲ್ಲಿ ಇನ್ನೂ ಹೆಚ್ಚಿನ ಸಾಧನೆಯನ್ನು ಮಾಡಬಹುದಾಗಿತ್ತು. ಆದರೆ ಸರಕಾರದ ಉನ್ನತ ಹುದ್ದೆಗಳ ಬೆನ್ನು ಹತ್ತಿದುದರಿಂದ ರಾಜಕೀಯ ಹಾಗೂ ಹಲವು ಸಾರ್ವಜನಿಕ ಸಂಘ ಸಂಸ್ಥೆಗಳ ಚಟುವಟಿಕೆ ಗಳಲ್ಲಿ ನಿರಂತರವಾಗಿ ತೊಡಗಿಕೊಂಡುದರಿಂದ ಬರವಣಿಗೆ ಸಾಗಲಿಲ್ಲ. ಬರೆಯುವವರಿಗೆ ಆಕರ ಸಾಮಗ್ರಿಯಾದರು, ಅಷ್ಟೆ.

ಶತಾಯುಷಿಯಾದ ಸಂದರ್ಭದಲ್ಲಿ ಕಾರ್ಯಕ್ರಮವೊಂದಕ್ಕೆ ಆಹ್ವಾನಿಸಲು ಇಬ್ಬರು ಸ್ನೇಹಿತರು ಶ್ರೀ ನಿಟ್ಟೂರರ ಮನೆಗೆ ಬಂದರು. ಎಪ್ಪತ್ತು ವರ್ಷಗಳ ಹಿಂದೆ ಪತ್ರಿಕೆಯೊಂದ ರಲ್ಲಿ ಪ್ರಕಟವಾಗಿದ್ದ ಎರಡು ಲೇಖನಗಳ ಜೆರಾಕ್ಸ್ ಪ್ರತಿಯನ್ನು ಅವರಿಗೆ ಕೊಟ್ಟರು. ನೋಡಿದ ಕೂಡಲೇ ಶ್ರೀ ನಿಟ್ಟೂರರು "ಇವು 'ದೇವಿಶಾಪ'ದ ಲೇಖನಗಳು" ಎಂದರು. ಸ್ನೇಹಿತರಿಗೆ ಅರ್ಥವಾಗಲಿಲ್ಲ. "ಅದೇಪ್ಪಾ 'ದೇವಿಶಾಪ' ಎಂದರೆ 'ದೇಶಿಯ ವಿದ್ಯಾಶಾಲಾ ಪತ್ರಿಕೆ'ಯ ಸಂಕ್ಷಿಪ್ತ ರೂಪ" ಎಂದು ನಗೆಯಾಡಿದರು.

ಬೆಂಗಳೂರು ಸೆಂಟ್ರಲ್ ಕಾಲೇಜಿನ ಆವರಣ ಸ್ವಾತಂತ್ರ್ಯ ಸಂಗ್ರಾಮದ ನೇರ ಪ್ರಭಾವಕ್ಕೆ ಒಳಗಾಗಿತ್ತು. ಸಾಕಷ್ಟು ವಿದ್ಯಾರ್ಥಿಗಳು, ಅಧ್ಯಾಪಕರು, ನೌಕರರು, ಸ್ವಾತಂತ್ರ್ಯ ಹೋರಾಟಕ್ಕೆ ಬೆಂಬಲವಾಗಿ ನಿಂತರು. ಉತ್ತರ ಭಾರತದಲ್ಲಿ ಮಹಾತ್ಮಾಗಾಂಧೀಜಿ ಬಂಧನಕ್ಕೆ ಒಳಗಾಗಿ ಸೆರೆಮನೆ ಸೇರಿದರೆ ಬೆಂಗಳೂರು ಸೆಂಟ್ರಲ್ ಕಾಲೇಜಿನ ವಿದ್ಯಾರ್ಥಿಗಳು ಕಣ್ಣೀರು ಸುರಿಸುತ್ತಿದ್ದರು. ಭಾರತದ ಸ್ವಾತಂತ್ರ್ಯ ಚಳವಳಿಯ ಸಂದರ್ಭದಲ್ಲಿ ಬೆಂಗಳೂರಿಗೆ ಬರುತ್ತಿದ್ದ ಎಲ್ಲ ರಾಷ್ಟ್ರ ನಾಯಕರು ಸೆಂಟ್ರಲ್ ಕಾಲೇಜು ಆವರಣದಲ್ಲಿ ಪರಿಣಾಮಕಾರಿ ಯಾದ ಭಾಷಣ ಮಾಡುತ್ತಿದ್ದರು. ಅಂಥವರ ಭಾಷಣವನ್ನು ಕೇಳಿದ, ಅಂಥವರನ್ನು

ಕಣ್ಣಾರೆ ಕಂಡ, ಬೆಂಗಳೂರಿನಲ್ಲೇ ವಕೀಲಿ ವೃತ್ತಿಗಿಳಿದ ಶ್ರೀ ನಿಟ್ಟೂರರರೂ ರಾಷ್ಟ್ರ ನಾಯಕರ ಪ್ರಭಾವಕ್ಕೆ ಒಳಗಾದರು. ಮಹಾತ್ಮ ಗಾಂಧಿಯವರ ಪ್ರಭಾವದಿಂದ, ಸ್ವದೇಶ ಪ್ರೇಮದಿಂದ, ಕಾಂಗ್ರೆಸ್ ಪ್ರಣಾಳಿಕೆಯಿಂದ ಖಾದಿಧಾರಿಯಾದರು. ಆಗ ಪ್ರಬಲವಾಗಿದ್ದ ಕಾಂಗ್ರೆಸ್ ಪಕ್ಷದ ಸಕ್ರಿಯ ಕಾರ್ಯಕರ್ತರಾದರು; ಸ್ವಾತಂತ್ರ್ಯ ಹೋರಾಟಗಾರರಿಗೆ ಪರೋಕ್ಷವಾಗಿ ನೆರವಾದರು; ರಾಷ್ಟ್ರಹಿತಕಾರಿಯಾದ ಕಾರ್ಯಕ್ರಮಗಳ ಪ್ರಚಾರಕರಾದರು.

ಶ್ರೀ ನಿಟ್ಟೂರು ಶ್ರೀನಿವಾಸರಾಯರು ನೇರವಾಗಿ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾಗವಹಿಸಲಿಲ್ಲ. ಬಂಧನಕ್ಕೆ ಒಳಗಾಗಿ ಸೆರೆಮನೆಗೆ ಹೋಗಲಿಲ್ಲ. ಭಾರತದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಪಾಲ್ಗೊಂಡು, ಭೂಗತ ಚಟುವಟಿಕೆಗಳಲ್ಲಿ ತೊಡಗಿದ ಸತ್ಯಾಗ್ರಹಿಗಳಿಗೆ ಆಶ್ರಯ ನೀಡಿ, ಇತರರು ಆಶ್ರಯ ನೀಡಲು ಪ್ರೇರಕರಾಗಿ, ಪರೋಕ್ಷವಾಗಿ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗಿಯಾದರು (೧೯೩೦, ೧೯೩೨, ೧೯೪೨) ಸತ್ಯಾಗ್ರಹಿಗಳ ಕಾನೂನು ತೊಡಕು ಬಿಡಿಸಲು ಸಲಹೆ ನೀಡಿದರು. ಆ ಕಾಲಕ್ಕೆ ಅದೂ ಕೂಡ ಮುಖ್ಯವಾದ ಕೈಂಕರ್ಯವಾಗಿತ್ತು. ಹಾಗಾಗಿ ಸ್ವಾತಂತ್ರ್ಯ ಹೋರಾಟಗಾರರ ನಿಕಟವರ್ತಿಯಾಗಿ, ಪರಿಚಿತರಾಗಿ ಶ್ರೀ ನಿಟ್ಟೂರರು ಪ್ರಸಿದ್ಧರಾದರು. ಹೀಗೆ ಸಹಾಯ ಪಡೆದ ಸತ್ಯಾಗ್ರಹಿಗಳು, ಸ್ವಾತಂತ್ರ್ಯಾನಂತರದ ದಿನಗಳಲ್ಲಿ ಅವರ ಸಹಾಯವನ್ನು ಪ್ರಾಂಜಲ ಮನಸ್ಸಿನಿಂದ ಸ್ಮರಿಸಿದರು. ಹಿಂದಿನ ಕಾಂಗ್ರೆಸ್ ಪಕ್ಷದ ಸಹಾಯಕರಂತೆ, ಸಲಹೆಗಾರರಂತೆ ಅವರನ್ನು ನಡೆಸಿಕೊಂಡರು.

ಶ್ರೀ ಶ್ರೀನಿವಾಸರಾವ್ ವೃತ್ತಿಯಲ್ಲಿದ್ದಾಗ, ಬೆಂಗಳೂರಿನ ಬಸವನಗುಡಿ ಬಡಾವಣೆಯಲ್ಲಿ ವಿವಿಧ ಕ್ಷೇತ್ರಗಳಿಗೆ ಸಂಬಂಧಿಸಿದಂತೆ ಘಟಾನುಘಟಿಗಳಾದ ನ್ಯಾಯಾಧೀಶರು, ಸಾಹಿತಿಗಳು, ಪತ್ರಕರ್ತರು, ರಾಜಕಾರಿಣಿಗಳು, ಶ್ರೀಮಂತ ಗಣ್ಯರು, ಸಂಗೀತಗಾರರು, ಕಲಾವಿದರು, ಧಾರ್ಮಿಕ ಮುಖಂಡರು ತುಂಬಿಕೊಂಡಿದ್ದರು. ಯಾವ ಕಾರ್ಯಕ್ರಮಗಳಲ್ಲಿ ನೋಡಿದರೂ ಅವರೇ ಮುಂಚೂಣಿಯಲ್ಲಿರುತ್ತಿದ್ದರು; ವೇದಿಕೆಯ ಮೇಲೂ ಅವರೇ ಮಿಂಚುತ್ತಿದ್ದರು. ಆಗ ಶ್ರೀ ನಿಟ್ಟೂರರು ಪ್ರೇಕ್ಷಕರಾಗಿದ್ದುಕೊಂಡು ಅವರ ಕಾರ್ಯವೈಖರಿಯನ್ನು ಗಮನಿಸುತ್ತಿದ್ದರು. ಅವರೆಲ್ಲರ ಪರಿಚಯವೂ ಆಗುತ್ತಿತ್ತು.

ಶ್ರೀ ನಿಟ್ಟೂರರು ಸೇವೆಯಿಂದ ನಿವೃತ್ತರಾದ ಮೇಲೆ, ಕಣ್ಮರೆಯಾದ ಹಿರಿಯರ ಸ್ಥಾನವನ್ನು ತುಂಬಿದರು. ಯಾವುದೇ ಕಾರ್ಯಕ್ರಮವಾದರೂ ವೇದಿಕೆಯ ಮೇಲೆ ಕಾಣಿಸಿಕೊಳ್ಳಲು ಪ್ರಾರಂಭಿಸಿದರು. ಸರಕಾರದಲ್ಲಿ ನಿರ್ವಹಿಸಿದ ದೊಡ್ಡ ಹುದ್ದೆ, ದಿವಾನರ ಅಳಿಯನೆಂಬ ಹೆಚ್ಚುಗಾರಿಕೆ, ಸತ್ಯ ಶೋಧನ ಪುಸ್ತಕ ಮಂದಿರದ ಸಾಧನೆ, ಸತ್ಯಾಗ್ರಹಿಗಳಿಗೆ ಸಹಾಯ ಮಾಡಿದ ಹೆಗ್ಗಳಿಕೆ, ಹಲವು ಕ್ಷೇತ್ರದವರಿಗೆ ಕಾನೂನು ಸಲಹೆ ನೀಡಿದ

ಜನಪ್ರಿಯತೆ ಮೊದಲಾದವುಗಳಿಂದ ಎಲ್ಲಾ ಕ್ಷೇತ್ರದ ಜನರ ಪ್ರೀತಿ ಗೌರವಗಳಿಗೆ ಪಾತ್ರರಾದರು. ಅವರ ಸಲಹೆ ಸೂಚನೆ ಮಾರ್ಗದರ್ಶನಗಳಿಗಾಗಿ ಹಲವು ಸಂಸ್ಥೆಗಳವರೂ ಮುಂದೆ ಬಂದರು. ಸಾರ್ವಜನಿಕ ಚಟುವಟಿಕೆಗಳು ಅವರ ಬದುಕಿನ ಅವಿಭಾಜ್ಯ ಅಂಗವಾದವು.

ಶ್ರೀ ಶ್ರೀನಿವಾಸರಾವ್ ಪದಾಧಿಕಾರಿಯಾದ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ಸಂಸ್ಥೆಗಳು ರಾಷ್ಟ್ರಮಟ್ಟದಲ್ಲೂ ರಾಜ್ಯಮಟ್ಟದಲ್ಲೂ ಹೆಸರಾಗಿವೆ. ಉದಾಹರಣೆಗೆ: ಇಂಡಿಯನ್ ನ್ಯಾಷನಲ್ ಕಾಂಗ್ರೆಸ್, ಮೈಸೂರು ಸ್ಟೇಟ್ ಕಾಂಗ್ರೆಸ್, ದಕ್ಷಿಣ ಭಾರತ ಹಿಂದಿ ಪ್ರಚಾರ ಸಮಿತಿ, ಗಾಂಧೀ ಸ್ಮಾರಕ ನಿಧಿಯ ಕರ್ನಾಟಕ ಘಟಕ, ಗಾಂಧೀ ಶಾಂತಿ ಪ್ರತಿಷ್ಠಾನ, ಕನ್ನಡ ಸಾಹಿತ್ಯ ಪರಿಷತ್ತು, ಲೋಕ ಶಿಕ್ಷಣ ಟ್ರಸ್ಟ್, ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆ, ಕರ್ನಾಟಕ ಪ್ರಕೃತಿ ಚಿಕಿತ್ಸಾ ಪರಿಷತ್ತು, ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಇತ್ಯಾದಿ. ಶ್ರೀಯುತರು ಸಂಪರ್ಕವಿಟ್ಟುಕೊಂಡ ಸಂಸ್ಥೆಗಳ ಸಂಖ್ಯೆ ಅರುವತ್ತಕ್ಕೂ ಮೀರಿದೆ. ಅವರು ಸಂಸ್ಥೆಯ ಸಭೆಗಳಲ್ಲಿ ತಮಾಷೆಯಾಗಿ ಹೇಳುವುದುಂಟು: "ನಾನು ವಯಸ್ಸಿನಲ್ಲಿ ಹಿರಿಯ ಅಂತ ಸಂಸ್ಥೆಯ ಪಟ್ಟ ಕಟ್ಟಿದ್ದಾರೆ. ನಾನು ಹೆಸರಿಗಷ್ಟೇ ಮುಖ್ಯಸ್ಥ. ಉಳಿದ ಪದಾಧಿಕಾರಿಗಳು ಎಲ್ಲಾ ಕಾರ್ಯಗಳನ್ನೂ ತೂಗಿಸಿಕೊಂಡು ಹೋಗುತ್ತಾರೆ.

ಶ್ರೀ ನಿಟ್ಟೂರರು ಕನ್ನಡ ಸಾಹಿತ್ಯ ಪರಿಷತ್ತಿನ ಹಿರಿಯ ಸದಸ್ಯರು. ಯಾವಾಗಲೂ ಸಾಮಾನ್ಯ ಸದಸ್ಯರಾಗಿಯೇ ಮುಂದುವರಿದಿದ್ದಾರೆ. ಪ್ರತಿವರ್ಷವೂ ಚಂದಾ ನೀಡಿ ತಮ್ಮ ಸದಸ್ಯತ್ವವನ್ನು ನವೀಕರಿಸಿಕೊಳ್ಳುತ್ತಾರೆ. ಆಜೀವ ಸದಸ್ಯರಾಗಲು ಬಯಸಿಲ್ಲ. ಕಾರಣ ಕೇಳಿದರೆ ಹೀಗೆ ಉತ್ತರಿಸುತ್ತಾರೆ: 'ಒಟ್ಟಿಗೆ ಹಣ ನೀಡಿ ಆಜೀವ ಸದಸ್ಯನಾದರೆ ಒಂದೇ ಸಾರಿಗೆ ಮರೆತುಬಿಡುತ್ತಾರೆ. ನನ್ನ ಜ್ಞಾಪಕ ಇರಲಿ ಅಂತ ಪ್ರತಿವರ್ಷವೂ ಸದಸ್ಯತ್ವವನ್ನು ನವೀಕರಿಸಿಕೊಳ್ಳುತ್ತೇನೆ." ಮರೆತು ಬಿಡದೆ, ಬೇಸರವಿಲ್ಲದೆ ಪ್ರತಿವರ್ಷವೂ ಸದಸ್ಯತ್ವವನ್ನು ನವೀಕರಿಸಿಕೊಳ್ಳುವ ಶ್ರದ್ಧೆ ಕಡಿಮೆಯಾದುದೇನೂ ಅಲ್ಲ.

ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯಕ್ರಮಗಳಲ್ಲಿ ಸಾಮಾನ್ಯವಾಗಿ ಹಾಜರಾಗುವ ಶ್ರೀ ನಿಟ್ಟೂರರು ಎಲ್ಲೇ ಸಾಹಿತ್ಯ ಸಮ್ಮೇಳನವಾದರೂ ಹೋಗಿ ಭಾಗವಹಿಸುವ ಅಭ್ಯಾಸವನ್ನು ಪಾಲಿಸಿದ್ದಾರೆ. ಇದರಿಂದ ಸಾಹಿತ್ಯಲೋಕದ ಇತ್ತೀಚಿನ ವಿದ್ಯಮಾನಗಳನ್ನು ತಿಳಿಯಲು ಅವರಿಗೆ ಸಾಧ್ಯವಾಗಿದೆ. 'ನಾನು ಸಾಹಿತ್ಯ ಪರಿಷತ್ತಿನ ಹಳೆಯ ಸದಸ್ಯ' ಎಂದು ಹೇಳಿಕೊಳ್ಳಲು ಮರೆಯದ ಅವರು, ಸಾಹಿತ್ಯ ಪರಿಷತ್ತು ಸ್ಥಾಪನೆಯಾಗಿ ಬೆಳೆದು ಬಂದ ಬಗೆಯನ್ನು, ಪರಿಷತ್ತಿನ ಕಟ್ಟಡಗಳು ತಲೆಯೆತ್ತಿದ ಸಂದರ್ಭಗಳನ್ನು ನೆನೆಸಿಕೊಂಡು ವಿವರಿಸುವುದರಲ್ಲಿ ಸಂತೋಷಿಸುತ್ತಾರೆ.

ಕವಿ ವಿದ್ವಾಂಸ ಡಾ.ಡಿ.ವಿ. ಗುಂಡಪ್ಪನವರು ಸ್ಥಾಪಿಸಿದ ಸಂಸ್ಥೆ ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆ. ಡಿ.ವಿ.ಜಿ.ಯವರ ಆಶಯದಂತೆ ಶ್ರೀ ನಿಟ್ಟೂರರು ಅದರ ಗೌರವ ಕಾರ್ಯದರ್ಶಿಗಳು. ಡಿ.ವಿ.ಜಿ.ಯವರು ನಿಧನರಾದ ಮೇಲೆ ಅಭಿಮಾನಿಗಳ ಮನವಿಯ ಮೇರೆಗೆ ಇಡೀ ಸಂಸ್ಥೆಯ ಜವಾಬ್ದಾರಿಯನ್ನು ಹೊತ್ತುಕೊಂಡರು. ಅದು ಡಿ.ವಿ.ಜಿ.ಯವರ ಕಾಲದಲ್ಲೇ ವ್ಯವಸ್ಥಿತವಾಗಿ ರೂಪುಗೊಂಡಿರುವ ಸಂಸ್ಥೆ. ಯಾವ ಬದಲಾವಣೆಯನ್ನೂ ಮಾಡದೆ ಹಿಂದಿನ ಕಾರ್ಯಕ್ರಮಗಳನ್ನು ನಿಟ್ಟೂರರು ಮುಂದುವರಿಸಿದರು. ಅಲ್ಲಿ ದತ್ತಿ ಉಪನ್ಯಾಸಗಳದು ಮುಖ್ಯ ಅಂಗ. ನನಗೂ ಒಂದೆರಡು ಬಾರಿ ಉಪನ್ಯಾಸಕ್ಕೆ ಅವಕಾಶ ನೀಡಿದರು. ದತ್ತಿ ಉಪನ್ಯಾಸಗಳನ್ನು ತಾಳ್ಮೆಯಿಂದ ಕುಳಿತು ಕೇಳಿ ಮೆಚ್ಚಿಗೆ ವ್ಯಕ್ತಪಡಿಸುತ್ತಾರೆ; ಸಂದರ್ಭವನ್ನು ಕುರಿತು ಸಭಿಕರಿಗೆ ವಿವರಿಸುತ್ತಾರೆ. ಅದು ಅವರ ಪದ್ಧತಿ.

ಡಿ.ವಿ.ಜಿ.ಯವರ ಅನಂತರ ಹೊಸ ಯೋಜನೆಗಳನ್ನೇನೂ ಹಮ್ಮಿಕೊಳ್ಳಲಿಲ್ಲವೆಂದು ಒಬ್ಬಿಬ್ಬರು ದೂರುವುದುಂಟು. ಶ್ರೀ ನಿಟ್ಟೂರರು ಆ ಬಗೆಗೆ ತಲೆ ಕೆಡಿಸಿಕೊಳ್ಳುವುದಿಲ್ಲ. ಡಿ.ವಿ.ಜಿ.ಯವರು ಪ್ರಾರಂಭಿಸಿದ ಯಾವ ಕಾರ್ಯಕ್ರಮಗಳೂ ನಿಲ್ಲದಂತೆ, ಕಾಲಕಾಲಕ್ಕೆ ತಪ್ಪದೆ ನಡೆಯುವಂತೆ, ನೋಡಿಕೊಳ್ಳುವುದರತ್ತ ಅವರ ಗಮನ.

ಬೆಂಗಳೂರಿನಲ್ಲಿ ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನ ದಿವಂಗತ ಎಂ.ವಿ. ಸೀತಾರಾಮಯ್ಯನವರು ಸ್ಥಾಪಿಸಿದ ಸಂಸ್ಥೆ. ಶ್ರೀ ಎಂ.ವಿ.ಸೀ.ಯವರಿಗೂ ಶ್ರೀ ನಿಟ್ಟೂರರಿಗೂ ಕೇವಲ. ಶ್ರೀ ನಿಟ್ಟೂರರು ಎಂ.ವಿ.ಸೀ. ಅವರನ್ನು ಅವರ ದೈಹಿಕ ಆಕಾರಕ್ಕೆ ಅನ್ವರ್ಥಕವಾಗಿ 'ಮಗು' ಎಂದು ಕರೆಯುವುದು ವಾಡಿಕೆ. ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರೂ ಹಾಗೇ ಕರೆಯುತ್ತಿದ್ದರು. ಶ್ರೀ ಸೀತಾರಾಮಯ್ಯನವರು ತಾವು ಸ್ಥಾಪಕ ಕಾರ್ಯದರ್ಶಿಯಾಗಿದ್ದುಕೊಂಡು ಹಿರಿಯರಾದ ಶ್ರೀ ನಿಟ್ಟೂರರನ್ನು ಅಧ್ಯಕ್ಷರಾಗಲು ಒಪ್ಪಿಸಿದರು. ಕೆಲವು ವರ್ಷಗಳಾದ ಮೇಲೆ ಶ್ರೀ ನಿಟ್ಟೂರರ ಸಲಹೆ ಮೇರೆಗೆ ಶ್ರೀ ಸೀತಾರಾಮಯ್ಯ ಅಧ್ಯಕ್ಷರಾದರು. ಉಪಾಯವಾಗಿ ಶ್ರೀ ನಿಟ್ಟೂರರನ್ನು ಗೌರವಾಧ್ಯಕ್ಷರಾಗಿರಲು ಒಪ್ಪಿಸಿದರು. ಶ್ರೀ ಸೀತಾರಾಮಯ್ಯನವರು ನಿಧನರಾದ ಮೇಲೆ ಶ್ರೀ ನಿಟ್ಟೂರರು ಸಂಸ್ಥೆಯಲ್ಲಿ ಮುಂದುವರಿಯಬೇಕಾಯಿತು.

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ನಿವೇಶನದ ಸ್ವಾಧೀನ ಪತ್ರ ಪಡೆಯಲು, ಹೊಸ ಕಟ್ಟಡಕ್ಕೆ ಧನ ಸಂಗ್ರಹಿಸಲು ಶ್ರೀನಿವಾಸರಾಯರು ಬಹಳವಾಗಿ ಶ್ರಮಿಸಿದರು. ದಾನಿಗಳಿಗೆ ಪತ್ರ ಬರೆಯುವುದು, ಫೋನಾಯಿಸುವುದು, ಸಿಕ್ಕಿದಾಗ ಜ್ಞಾಪಿಸುವುದು, ತಮ್ಮ ಪ್ರಭಾವವನ್ನು ಬೀರುವುದು ಮೊದಲಾದವುಗಳಿಂದ ಪದಾಧಿಕಾರಿಗಳಿಗೆ ನೆರವಾದರು.

ಇದರಿಂದ ಅಪೂರ್ಣವಾಗಿಯಾದರೂ ಸ್ವಂತ ಕಟ್ಟಡ ನಿರ್ಮಾಣವಾಗಲು, ಸಂಸ್ಥೆ ಸ್ವಂತ ಕಟ್ಟಡದಲ್ಲಿ ಕೆಲಸ ಮಾಡಲು ಸಾಧ್ಯವಾಯಿತು.

ನಾನು ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ವ್ಯವಸ್ಥಾಪಕ ಕಾರ್ಯದರ್ಶಿಯಾದ ಪ್ರಯುಕ್ತ ಅವರ ಕಾರ್ಯವಿಧಾನವನ್ನು ತಿಳಿಯಲು ಸಾಧ್ಯವಾಯಿತು. ಶ್ರೀ ನಿಟ್ಟೂರರಿಗೆ ಸಾರ್ವಜನಿಕ ಸಂಸ್ಥೆಯ ಖಾಯಂ ಠೇವಣಿ ಹಣವನ್ನು ಮತ್ತೊಂದಕ್ಕೆ ಬಳಸಲು ಇಷ್ಟವಾಗುವುದಿಲ್ಲ. ದತ್ತಿ ನಿಧಿಯನ್ನು ಅದರದರ ಉದ್ದೇಶಕ್ಕೆ ಬಳಸುವುದರ ಮೂಲಕ ದಾನಿಗಳ ಇಚ್ಛೆಯನ್ನು ಪೂರೈಸಬೇಕು. ಒಂದು ವೇಳೆ ಅನಿವಾರ್ಯ ಕಾರಣದಿಂದ ಮೂಲಧನವನ್ನು ಮತ್ತೊಂದು ಉದ್ದೇಶಕ್ಕೆ ಬಳಸಿಕೊಂಡರೆ ಕೂಡಲೆ ಹಿಂದಿರುಗಿಸಿ ಭರ್ತಿ ಮಾಡಬೇಕು. ಯಾವುದೇ ವಿಷಯವನ್ನಾದರೂ ಕಾರ್ಯಸಮಿತಿ ಸಭೆಯಲ್ಲಿ ಚರ್ಚಿಸಿ ಬಹುಮತ ನಿರ್ಣಯಕ್ಕೆ ಒಪ್ಪಿಗೆ ನೀಡುವುದು ಅವರ ರೀತಿ. ನಿರಂತರವಾಗಿ ಕಾರ್ಯಕ್ರಮಗಳು ನಡೆಯಲು ಆದ್ಯತೆ. ಸಾಮಾನ್ಯವಾಗಿ ಯಾವ ವಿಷಯದಲ್ಲೂ ರಾಜಿ ಮಾಡಿಕೊಳ್ಳುವುದಿಲ್ಲ. ಇಷ್ಟವಾಗದ ವಿಷಯಗಳನ್ನು ಸೌಮ್ಯವಾಗಿ ಪ್ರತಿಭಟಿಸುವುದೂ ಉಂಟು.

ಸಾರ್ವಜನಿಕ ಸಮಾರಂಭಗಳಿಗೂ ಶ್ರೀ ನಿಟ್ಟೂರರಿಗೂ ಅವಿನಾಸಂಬಂಧ. ಬೇಸರವಿಲ್ಲದೆ, ಉತ್ಸಾಹ ಕಳೆದುಕೊಳ್ಳದೆ, ಸಭೆ ಸಮಾರಂಭಗಳಿಗೆ ಹಾಜರಾಗುತ್ತಾರೆ. ಅದು ದೊಡ್ಡ ಕಾರ್ಯಕ್ರಮವಾದರೂ ಸರಿ, ಚಿಕ್ಕದಾದರೂ ಸರಿ. ಒಂದೊಂದು ದಿನ ಎರಡು ಮೂರು ಕಾರ್ಯಕ್ರಮಗಳಲ್ಲಿ ಭಾಗವಹಿಸಿರುವುದೂ ಉಂಟು. ಶ್ರೀ ನಿಟ್ಟೂರರು ಮನೆಯಲ್ಲಿಲ್ಲವೆಂದರೆ ಯಾವುದೋ ಕಾರ್ಯಕ್ರಮಕ್ಕೆ ಹೋಗಿರುವರೆಂದೇ ಅರ್ಥ. ಅವರು ಜೀವನವೆಲ್ಲಾ ಲವಲವಿಕೆಯಿಂದಿರುವುದಕ್ಕೆ ಕಾರ್ಯಕ್ರಮಗಳೂ ಕಾರಣವಾಗಿರುವಂತೆ ಕಾಣುತ್ತದೆ. ಕನ್ನಡ ಸಾಂಸ್ಕೃತಿಕ ಸಂದರ್ಭದಲ್ಲಿ ಹೆಚ್ಚು ಕಾರ್ಯಕ್ರಮಗಳಲ್ಲಿ ಭಾಗವಹಿಸಿರುವವರಿದ್ದರೆ ಅವರು ಶ್ರೀ ನಿಟ್ಟೂರರು ಮಾತ್ರ.

ಯಾರೇ ಆಗಿರಲಿ, ಯಾವುದೇ ಸಂಘ ಸಂಸ್ಥೆಗೆ ಸೇರಿದವರಾಗಿರಲಿ, ಎಂಥದೇ ವಿಷಯಕ್ಕೆ ಸಂಬಂಧಿಸಿದ್ದಾಗಿರಲಿ ಬಿಡುವಿದ್ದರೆ ಖಂಡಿತ ಒಪ್ಪಿಗೆ ನೀಡುತ್ತಾರೆ. ಸದಾ ಜೇಬಿನಲ್ಲಿಟ್ಟುಕೊಂಡಿರುವ ಪುಟ್ಟ ಡೈರಿಯಲ್ಲಿ ಗುರುತು ಮಾಡಿಕೊಳ್ಳುತ್ತಾರೆ. ರಾಜಧಾನಿ ಬೆಂಗಳೂರಿನಲ್ಲಿ ಯಾವುದಾದರೂ ಮುಖ್ಯ ಕಾರ್ಯಕ್ರಮವಿದೆಯೆಂದರೆ ಅದರಲ್ಲಿ ಶ್ರೀ ನಿಟ್ಟೂರರು ಅಧ್ಯಕ್ಷರೋ ಮುಖ್ಯ ಅತಿಥಿಯೋ ಆಗಿರುತ್ತಾರೆ. ತಮ್ಮ ಪಾತ್ರ ಇಲ್ಲದಿದ್ದರೂ ಇತರರ ಕಾರ್ಯಕ್ರಮಗಳಿಗೆ ಹೋಗಿ ಸ್ವಲ್ಪ ಹೊತ್ತು ಕುಳಿತು ನೋಡಿ, ಕೇಳಿ, ಪರಿಚಿತರೊಡನೆ ಮಾತಾಡಿ ಹಿಂದಿರುಗುತ್ತಾರೆ. ಆಹ್ವಾನ ಪತ್ರಿಕೆ ಇಲ್ಲದಿದ್ದರೂ ದಿನಪತ್ರಿಕೆ ನೋಡಿ ಕಾರ್ಯಕ್ರಮಗಳಿಗೆ ಭಾಗವಹಿಸಿರುವ ಉದಾಹರಣೆಗಳೂ ಸಾಕಷ್ಟಿವೆ. ಸಭೆ ಸಮಾರಂಭಗಳ

ಆಲ್ಬಂಗಳನ್ನು ತಿರುವಿ ಹಾಕಿದರೆ ಅಲ್ಲಿ ಶ್ರೀ ನಿಟ್ಟೂರರ ಭಾವಚಿತ್ರ ಖಂಡಿತವಾಗಿಯೂ ಇರುತ್ತದೆ. ಆಡಿಯೋ, ವೀಡಿಯೋ ಕಣ್ಣುಗಳಲ್ಲೂ ಅವರ ಹಾಜರಿ ಎದ್ದು ಕಾಣುತ್ತದೆ.

ಶ್ರೀ ನಿಟ್ಟೂರರ ಭಾಷಣವೆಂದರೆ ಚುಟುಕು ಭಾಷಣ. ಐದು ನಿಮಿಷ ಅಥವಾ ಹತ್ತು ನಿಮಿಷ. ಹೆಚ್ಚೆಂದರೆ ಹದಿನೈದು ನಿಮಿಷ. ಅಷ್ಟರಲ್ಲಿ ಹೇಳಬೇಕಾದುದನ್ನು ಹೇಳಿ ಮುಗಿಸುತ್ತಾರೆ. ಕಾರ್ಯಕ್ರಮ ಮುಗಿದ ಮೇಲೆ ಯಾರಾದರೂ "ನೀವು ಇನ್ನೂ ಸ್ವಲ್ಪ ಹೊತ್ತು ಮಾತಾಡಬಹುದಿತ್ತು ಸರ್" ಎಂದರೆ, "ನಾನು ಹದಿನೈದು ನಿಮಿಷ ಮಾತಾಡಿದೆ ನಲ್ಲಾ!" ಎನ್ನುತ್ತಾರೆ.

ಶ್ರೀನಿವಾಸರಾಯರ ಭಾಷಣಗಳಲ್ಲಿ ಅವರ ನೆನಪಿನ ಘಟನೆಗಳು, ವ್ಯಕ್ತಿಗಳು ಇಸವಿಗಳು ಪ್ರಧಾನವಾಗಿರುತ್ತವೆ. ಹಲವು ವರ್ಷಗಳ ಹಿಂದಿನ ವಿಷಯಗಳನ್ನು ಕೆದಕಿ, ಹೊರತೆಗೆದು ಮುಂದಿಟ್ಟಾಗ ಇಂದಿನ ಸಭಿಕರಿಗೆ ವಿಸ್ಮಯವಾಗುತ್ತದೆ. ಅವರ ನೆನಪಿನ ಶಕ್ತಿಗೆ ತಲೆದೂಗುವಂತಾಗುತ್ತದೆ. ಅಗಾಧವಾದ ನೆನಪಿನ ಸೆಲೆಯೇ ಶ್ರೀ ನಿಟ್ಟೂರರ ಭಾಷಣದ ಬಂಡವಾಳವಾಗುತ್ತದೆ. ಶ್ರೀ ನಿಟ್ಟೂರರ ಭಾಷಣದಲ್ಲಿ ಆಳಕ್ಕಿಂತ ಹರಹು ಜಾಸ್ತಿ. ವಿಮರ್ಶೆಗಿಂತ ವಿಚಾರಾಸಕ್ತಿ ಜಾಸ್ತಿ. ಮಾತಿನಲ್ಲಿ ಗುಣಗ್ರಾಹಿ ಸ್ವಭಾವ ಅವರದು.

ಶ್ರೀ ನಿಟ್ಟೂರರು ವೇದಿಕೆಯ ಮೇಲೆ ಮಾತಾಡುವಾಗ ಮುಗ್ಧರಂತೆ ಕಾಣುತ್ತಾರೆ. ತೆಳುವಾದ ದೇಹದಲ್ಲಿ ಬೊಜ್ಜು ಬಾಯಿ, ಕೃಶಕೈ ಚಲನಾಟ ಎದ್ದು ತೋರುತ್ತದೆ. ನಗುಮುಖ ಹೆಚ್ಚು. ಗತಿಸಿದ ಹಿರಿಯರ ವಿಷಯ ಪ್ರಸ್ತಾಪವಾದಾಗ (ಉದಾಹರಣೆಗೆ ಎಂ.ಆರ್. ಶ್ರೀನಿವಾಸಮೂರ್ತಿ) ನಿಂತಲ್ಲೇ ಕೈ ಮುಗಿಯುತ್ತಾರೆ. ಭಕ್ತಿ ಗೌರವ ತೋರಿಸುತ್ತಾರೆ. ದೇವರ ವಿಷಯ ಬಂದಾಗಲೂ ಅಷ್ಟೆ. ವಿಶ್ವವಿಖ್ಯಾತ ಸಂಗೀತ ವಿದುಷಿ ಶ್ರೀಮತಿ ಎಂ.ಎಸ್. ಸುಬ್ಬುಲಕ್ಷ್ಮಿಯವರೂ ಹೀಗೇ ಮಾಡುತ್ತಾರೆ. ಹಳೆಯ ತಲೆಮಾರಿನ ಜನರೇ ಹಾಗೆ. ದೊಡ್ಡವರ ಬಗೆಗೆ, ದೊಡ್ಡದರ ಬಗೆಗೆ ಭಕ್ತಿ, ಗೌರವ. ಶ್ರೀ ನಿಟ್ಟೂರರ ಭಾಷಣದ ನಡುವೆ ತಿಳಿಹಾಸ್ಯಕ್ಕೂ ಕೊರತೆಯಿಲ್ಲ. ಅವರ ಆರೋಗ್ಯ ಸುಸ್ಥಿತಿಗೆ ಹಾಸ್ಯಪ್ರಜ್ಞೆಯೂ ಟಾನಿಕ್ಕಾಗಿರುವಂತೆ ಭಾಸವಾಗುತ್ತದೆ. ಅವರ ಭಾಷಣದಲ್ಲಿ ತಾತ್ವಿಕತೆಯ ಭಾರ ಇರುವುದಿಲ್ಲ; ಪ್ರಸ್ತುತ ಸಂದರ್ಭದ ಪರಿಚಯವಿರುತ್ತದೆ. ಬಹುಪಾಲು ಪ್ರೇಕ್ಷಕರಿಗೆ ಅಷ್ಟು ಸಾಕು. ಅವರ ದೀರ್ಘಾಯುಸ್ಸಿನ ಹಿರಿಮೆ ಅವರ ಭಾಷಣದ ಕೊರತೆಯನ್ನು ಮುಚ್ಚಿಹಾಕಿಬಿಡುತ್ತದೆ. ಅವರ ಭಾಷಣಕ್ಕಿಂತಲೂ ಅವರ ಹಾಜರಿಯೇ ಹಲವರಿಗೆ ಸಂತೋಷವನ್ನುಂಟು ಮಾಡುತ್ತದೆ.

ಶ್ರೀನಿವಾಸರಾಯರು ಸಮಾರಂಭಗಳಲ್ಲಿ ಅಧ್ಯಕ್ಷತೆ ವಹಿಸಿದಾಗ ಒಂದು ಕ್ರಮ ಎದ್ದು ಕಾಣುತ್ತದೆ. ಅವರು ಅಧ್ಯಕ್ಷ ಭಾಷಣಕ್ಕೆ ಎದ್ದು ನಿಂತಾಗ ಸಂಪ್ರದಾಯ ಎನ್ನುವಂತೆ,

ಸ್ವಾಗತಿಸಿದ ಸಂದರ್ಭವನ್ನು ಪ್ರಸ್ತಾಪಿಸುತ್ತಾರೆ. ತಮಗಿಂತ ಮೊದಲು ಮಾತಾಡಿದ ಮುಖ್ಯ ಅತಿಥಿಗಳ ಮಾತುಗಳ ಸಾರಾಂಶವನ್ನು ಸೂಚಿಸಿ ಮೆಚ್ಚುಗೆ ವ್ಯಕ್ತಪಡಿಸುತ್ತಾರೆ. ಅನಂತರ ತಮ್ಮ ಮಾತಿಗೆ ಪ್ರವೇಶಿಸುತ್ತಾರೆ. ಎಲ್ಲರನ್ನೂ ಆತ್ಮೀಯ ತೆಕ್ಕೆಗೆ ತೆಗೆದುಕೊಳ್ಳುವುದು. ಎಲ್ಲರಿಗೂ ಬೇಕಾದವರಾಗಿ ನಡೆದುಕೊಳ್ಳುವುದು, ಹಿರಿಯರಾಗಿ ಸುಶಿಕ್ಷಿತ ಸಂಪ್ರದಾಯ ವನ್ನು ಸ್ಥಾಪಿಸುವುದು, ಸಭೆಯ ಕಾರ್ಯಕಲಾಪ ಗಂಭೀರವಾಗಿರುವಂತೆ ನೋಡಿಕೊಳ್ಳುವುದು ಅವರ ಉದ್ದೇಶವಾಗಿರುವಂತೆ ತೋರುತ್ತದೆ.

ಬೆಂಗಳೂರು ಸೆಂಟ್ರಲ್ ಕಾಲೇಜ್ ಹಿರಿಯ ವಿದ್ಯಾರ್ಥಿ ಸಂಘದವರು ಶತಾಯುಷಿ ದ್ವಯರಾದ ಶ್ರೀ ಎ.ಎನ್. ಮೂರ್ತಿರಾವ್ ಮತ್ತು ಶ್ರೀ ಶ್ರೀನಿವಾಸರಾವ್ ಅವರನ್ನು ಒಂದೇ ವೇದಿಕೆಯ ಮೇಲೆ ಸನ್ಮಾನಿಸಿದರು. (೧೨.೧೦.೨೦೦೨) ಆಗ ಶ್ರೀ ನಿಟ್ಟೂರರು ಶ್ರೀ ಮೂರ್ತಿರಾಯರನ್ನು ತೋರಿಸುತ್ತಾ "ನನ್ನ ಮಿತ್ರರಾದ ಮೂರ್ತಿರಾಯರನ್ನು ನಾಸ್ತಿಕರು ಎನ್ನುತ್ತಾರೆ. ಇವರೂ ಹಾಗೆಯೇ ಬರೆದುಕೊಂಡಿದ್ದಾರೆ. ಆದರೆ ಈಗ ಪ್ರಾರ್ಥನೆಯಲ್ಲಿ ವೇದಘೋಷ ಮಾಡಿದಾಗ ಆಸಕ್ತಿಯಿಂದ, ಆಲಿಸಿದರು!" ಎಂದು ಹೇಳಿ ಹಾಸ್ಯದ ಅಲೆ ಎಬ್ಬಿಸಿದರು.

ಕರ್ನಾಟಕ ರಾಜ್ಯ ಸರಕಾರ ಶ್ರೀ ಮೂರ್ತಿರಾಯರಿಗೂ ಶ್ರೀ ಪು.ತಿ.ನರಸಿಂಹಾ ಚಾರ್ಯರಿಗೂ ಏಕಕಾಲದಲ್ಲಿ ಪಂಪ ಪ್ರಶಸ್ತಿಯನ್ನು ಪ್ರಕಟಿಸಿತು. ತಮ್ಮ ಮನೆಗೆ ಬಂದಿದ್ದ ಮೂರ್ತಿರಾಯರನ್ನು ಕುರಿತು ಪು.ತಿ.ನ. ಅವರು ನಿಟ್ಟೂರರಿಗೆ "ನೋಡಿ, ನಮ್ಮ ಸರಕಾರ ನಾಸ್ತಿಕರಾದ ಮೂರ್ತಿರಾಯರಿಗೂ ಆಸ್ತಿಕನಾದ ನನಗೂ ಪಂಪ ಪ್ರಶಸ್ತಿ ನೀಡಿದೆ" ಎಂದರು. ಅದಕ್ಕೆ ನಿಟ್ಟೂರರು "ನಿಮ್ಮಿಬ್ಬರನ್ನೂ ನೋಡಿದರೆ ನನಗೆ ಅಂಥ ವ್ಯತ್ಯಾಸವೇನೂ ಕಾಣುವುದಿಲ್ಲ" ಎಂದರು.

ದೀರ್ಘಕಾಲದಿಂದ ಸಭೆ ಸಮಾರಂಭಗಳಲ್ಲಿ ಕಾಣಿಸಿಕೊಳ್ಳುವ ಶತಾಯುಷಿ ಶ್ರೀನಿವಾಸರಾಯರೆಂದರೆ ಕನ್ನಡ ಜನಸಮುದಾಯಕ್ಕೆ ಬಹಳ ಪ್ರೀತಿ. ರಾಜಧಾನಿ ಬೆಂಗಳೂರಿನ ವಿವಿಧ ಸಾಂಸ್ಕೃತಿಕ ಸಂಸ್ಥೆಗಳು ಅವರನ್ನು ಆತ್ಮೀಯವಾಗಿ ಬರಮಾಡಿ ಕೊಂಡು ಸನ್ಮಾನಿಸಿ ಸಂತೋಷಪಟ್ಟಿವೆ. ಬೆಂಗಳೂರಿನಲ್ಲಿ ಅತ್ಯಧಿಕ ಸನ್ಮಾನಗಳಿಗೆ ಪಾತ್ರ ರಾಗಿರುವವರಲ್ಲಿ ಶ್ರೀ ನಿಟ್ಟೂರರು ಮೊದಲಿಗರಾಗಿದ್ದಾರೆ. ಶತಮಾನ ಸಾಕ್ಷಿಯಾದ ಅವರನ್ನು ಸನ್ಮಾನಿಸುವುದು ತಮ್ಮ ಸಂಸ್ಥೆಯ ಪ್ರತಿಷ್ಠೆಗೆ ಮೆರುಗು ಎಂದು ಭಾವಿಸುತ್ತಾರೆ. ಒಮ್ಮೊಮ್ಮೆ ಅವರು ಸನ್ಮಾನ ಸಮಾರಂಭಕ್ಕೆ ಹಾಜರಾಗಲು ಸಾಧ್ಯವಾಗದಿದ್ದಾಗ ಅವರ ಪರವಾಗಿ ಅವರ ಹಿರಿಯ ಮಗ ಹಾಜರಾಗಿ ಸನ್ಮಾನ ಸ್ವೀಕರಿಸಿರುವುದೂ ಉಂಟು.

ಸಾಹಿತಿಗಳಾದ ಡಿ.ವಿ. ಗುಂಡಪ್ಪ, ಮಾಸ್ತಿ ವೆಂಕಟೇಶ ಅಯ್ಯಂಗಾರ್, ರಾಜಕಾರಿಣಿ

ಗಳಾದ ಶ್ರೀ ಎಚ್.ಕೆ. ವೀರಣ್ಣಗೌಡ ಮೊದಲಾದವರು ಕರ್ನಾಟಕದ ಏಕೀಕರಣವನ್ನು ವಿರೋಧಿಸಿದಾಗ ಶ್ರೀ ಶ್ರೀನಿವಾಸರಾಯರು ಸ್ಪಷ್ಟವಾಗಿ ದನಿಯೆತ್ತಲಿಲ್ಲ. ಆದರೆ, ಏಕೀಕರಣವಾದ ಮೇಲೆ ತಮ್ಮ ನಿಷ್ಠೆಯನ್ನು ಸ್ಪಷ್ಟವಾಗಿ ತೋರಿಸಿಕೊಂಡರು. ಕನ್ನಡಿಗರ ಒಗ್ಗಟ್ಟಿಗೆ ಆಗಾಗ ದನಿಗೂಡಿಸಿದರು. ಅಭಿವೃದ್ಧಿಯ ಕೊರತೆಯಿಂದ ಕರ್ನಾಟಕದ ಮತ್ತೆ ಹೋಳಾಗುವುದನ್ನು ವಿರೋಧಿಸಿದರು. ಕನ್ನಡ ಪರವಾದ ಅನೇಕ ಕಾರ್ಯಕ್ರಮಗಳಲ್ಲೂ ಸಕ್ರಿಯವಾಗಿ ಪಾಲ್ಗೊಂಡರು. ಸಾರ್ವಜನಿಕ ವೇದಿಕೆಯ ಮೇಲೆ ಇಂಗ್ಲಿಷ್ ಭಾಷಣ ಮಾಡುವವರ ನಡುವೆಯೂ ಕನ್ನಡದಲ್ಲಿ ಭಾಷಣ ಮಾಡಿ ತಮ್ಮ ಕನ್ನಡತನವನ್ನು ಪ್ರದರ್ಶಿಸಿದರು. ಪತ್ರಕರ್ತರಾಗಿದ್ದ ಶ್ರೀ ಖಾದ್ರಿ ಶಾಮಣ್ಣನವರೂ ಹೀಗೇ ಮಾಡುತ್ತಿದ್ದರು. ಶ್ರೀ ನಿಟ್ಟೂರರು ಬರೋಡಾದಲ್ಲಿ ನಡೆದ ಹೊರನಾಡು ಕನ್ನಡಿಗರ ಸಮ್ಮೇಳನದ ಅಧ್ಯಕ್ಷರಾಗಿದ್ದರು. ಶ್ರೀಯುತರ ದೀರ್ಘಕಾಲದ ನಾಡು ನುಡಿ ಚಟುವಟಿಕೆಯ ಹಿನ್ನೆಲೆಯಲ್ಲಿ ರಾಜ್ಯ ಸರಕಾರ ರಾಜ್ಯೋತ್ಸವ ಪ್ರಶಸ್ತಿ ನೀಡಿ ಗೌರವಿಸಿತು. (೧೯೯೭).

ಶ್ರೀ ಶ್ರೀನಿವಾಸರಾಯರು ಅಗಾಧ ನೆನಪಿನ ಶಕ್ತಿಗೆ ಹೆಸರಾದವರು. ಒಮ್ಮೆ ರಾಜ್ಯದ ಹಿರಿಯ ಪೊಲೀಸ್ ಅಧಿಕಾರಿಯೊಬ್ಬರು ಶ್ರೀ ನಿಟ್ಟೂರರ ಬಳಿಗೆ ಬಂದು ಪರಿಚಯ ಮಾಡಿಕೊಂಡರು: "ನಮಸ್ಕಾರ ಸರ್, ನಾನು ಕೆ. ಶ್ರೀನಿವಾಸನ್ ಬಸವನಗುಡಿಯವನು...." ಅವರ ಮಾತು ಮುಗಿಯುವ ಮೊದಲೇ ಶ್ರೀ ನಿಟ್ಟೂರರು "ನಿಮ್ಮ ಮನೆ ನಾಗಸಂದ್ರ ರಸ್ತೇಲಿ ಅಲ್ಲವೆ?" ಎಂದುದಲ್ಲದೆ, ಶ್ರೀನಿವಾಸನ್ ಅವರ ಅಕ್ಕಪಕ್ಕದವರ ಮನೆಯ ಹೆಸರನ್ನೂ ಹೇಳಿದರು. ಕೇಳಿದವರಿಗೆ ಸುಸ್ತು.

೧೯೯೧ರಲ್ಲಿ ಅಹಿತಕರ ಘಟನೆಗಳಿಂದ ತೀವ್ರವಾದ ಮಾನಸಿಕ ಒತ್ತಡಕ್ಕೆ ತುತ್ತಾಗಿ ಅನಾರೋಗ್ಯಕ್ಕೆ ತುತ್ತಾದೆ. ಒಮ್ಮೆ ಕಾಲೇಜಿನ ಕೆಲಸ ಮುಗಿಸಿ ಮನೆಗೆ ಹಿಂದಿರುಗುತ್ತಿದ್ದಾಗ, ಬಸವನಗುಡಿಯ ಕ್ಲಬ್ಬಿಗೆ ಬರುತ್ತಿದ್ದ ಶ್ರೀ ನಿಟ್ಟೂರರನ್ನು ಕಂಡು ಮಾಮೂಲಿನಂತೆ 'ನಮಸ್ಕಾರ ಸರ್' ಎಂದೆ. ತಲೆಯೆತ್ತಿ ನೋಡಿ, 'ಓ ಲಿಂಗಯ್ಯನವರು, ಕೆಲವು ದಿನಗಳಿಂದ ಕಾಣಲಿಲ್ಲವಲ್ಲ?" ಎಂದರು. "ಎದೆನೋವಿಗೆ ತುತ್ತಾಗಿದ್ದೆ ಸರ್, ರಜದಲ್ಲಿದ್ದೆ' ಎಂದೆ. "ಎದೆ ನೋವು ಅಂದ್ರೆ ಅಲಕ್ಷಿಸಬಾರದು. ಒಳ್ಳೆ ಡಾಕ್ಟರಿಗೆ ತೋರಿಸಿ, ವಿವರವಾಗಿ ಪರೀಕ್ಷಿಸಿ, ಚಿಕಿತ್ಸೆ ಪಡೆಯಿರಿ" ಎಂದರು. ಅನಂತರ ಸಿಕ್ಕಿದಾಗ ಜ್ಞಾಪಿಸಿಕೊಂಡು, ಆರೋಗ್ಯದ ಬಗೆಗೆ ವಿಚಾರಿಸುತ್ತಿದ್ದರು. ಇಂಥ ಅಂತಃಕರಣದ ಮಾತುಗಳಿಂದ ಪರಿಚಿತರ ಪ್ರೀತಿ ವಿಶ್ವಾಸ ಗಳಿಸುವುದು ಅವರಿಗೆ ರೂಢಿಯಾಗಿತ್ತು.

ಕನ್ನಡದ ಹಿರಿಯ ಸಾಹಿತಿ ಶ್ರೀ ಸಿ.ಕೆ. ನಾಗರಾಜರಾವ್ ಅವರು ಶ್ರೀ ನಿಟ್ಟೂರರ ಸೋದರಳಿಯ. ಈ ನಾಗರಾಜರಾಯರು ಕರ್ನಾಟಕ ಲೇಖಕರ ಸಂಘದ ಅಧ್ಯಕ್ಷರು,

ನಾನು ಉಪಾಧ್ಯಕ್ಷ. ಸಂಘದ ಹಲವು ಕಾರ್ಯಕ್ರಮಗಳಿಗೆ ಶ್ರೀ ನಿಟ್ಟೂರರು ಅತಿಥಿಯಾಗಿ ಬಂದು ಪ್ರೋತ್ಸಾಹಿಸಿದರು. ಶ್ರೀ ನಾಗರಾಜರಾಯರ ಸಾಹಿತ್ಯಕ, ಸಾಂಸಾರಿಕ ಕಾರ್ಯಕ್ರಮಗಳಲ್ಲಿ ಹಿರಿಯರಾಗಿ ಭಾಗವಹಿಸುತ್ತಿದ್ದರು. ನಾನು ಬರೆದ ಸಿ.ಕೆ. ನಾಗರಾಜ ರಾವ್ ಜೀವನ ಚರಿತ್ರೆಯ ಬಿಡುಗಡೆ ಸಮಾರಂಭಕ್ಕೆ ಬಂದು ಆಶೀರ್ವದಿಸಿದರು. ತಮ್ಮ ಸೋದರಳಿಯ ಜೀವನ ಚರಿತ್ರೆ ಬರೆಯಿಸಿಕೊಳ್ಳುವಷ್ಟು ಎತ್ತರಕ್ಕೆ ಬೆಳೆದುದಕ್ಕೆ, ದೊಡ್ಡ ಸಾಹಿತಿಯಾದುದಕ್ಕೆ ಮೆಚ್ಚುಗೆ ಸೂಚಿಸಿದರು. ನನ್ನ ಬರವಣಿಗೆಯನ್ನು ಪ್ರಶಂಸಿದರು.

ಒಮ್ಮೆ ಬೆಂಗಳೂರು ಕನ್ನಡ ಭವನದ ನಯನಕ್ಕೆ ಶ್ರೀ ನಿಟ್ಟೂರರು ಕಾರ್ಯಕ್ರಮ ವೊಂದಕ್ಕೆ ಬಂದರು. ನಾನು ಹತ್ತಿರ ಹೋಗಿ ನಮಸ್ಕಾರ ಹೇಳಿ ಆರೋಗ್ಯದ ಬಗೆಗೆ ವಿಚಾರಿಸಿದೆ. "ಕಾಲಿನ ಶಸ್ತ್ರಕ್ರಿಯೆಯಿಂದ ನಡೆಯುವುದಕ್ಕೆ ಸ್ವಲ್ಪ ತೊಂದರೆಯಾಗಿದೆ. ಉಳಿದಂತೆ ಆರೋಗ್ಯ ಚೆನ್ನಾಗಿದೆ. ಆರೋಗ್ಯ ಸ್ವಲ್ಪ ಕೆಟ್ಟಿತು ಅಂತ ಆಪ್ತರ ಕಾರ್ಯಕ್ರಮ ಗಳಿಗೆ ಬರೋದನ್ನು ನಿಲ್ಲಿಸುವುದಕ್ಕೆ ಆಗುವುದಿಲ್ಲ. ಇನ್ನೂ ಒಂದು ಕಾರ್ಯಕ್ರಮಕ್ಕೆ ಹೋಗಬೇಕು. ಇಲ್ಲಿ ಸ್ವಲ್ಪ ಹೊತ್ತು ಇದ್ದು ಅಲ್ಲಿಗೆ ಹೋಗ್ತೀನಿ!" ಎಂದರು. ಇಂಥದ್ದೆಲ್ಲಾ ಅವರಿಗೆ ಮಾಮೂಲು.

ಶ್ರೀ ನಿಟ್ಟೂರರ ನೆನಪು ಅದ್ಭುತವಾಗಿದ್ದರೂ ಒಮ್ಮೆ ನೆನಪಿನ ಶಕ್ತಿ ಕೈಕೊಟ್ಟ ಉದಾಹರಣೆಯೂ ಇದೆ. ಎಂದಿನಂತೆ ಸಂಜೆ ಯಾವುದೋ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು. ಅವರ ಕಾರು ಬಂದಿರಲಿಲ್ಲ. ರಾತ್ರಿ ಮನೆಗೆ ಹಿಂದಿರುಗುವಾಗ ಬಲ್ಲವ ರೊಬ್ಬರು ತಮ್ಮ ಕಾರಿನಲ್ಲಿ ಕರೆದುಕೊಂಡು ಹೋಗಲು ಒಪ್ಪಿ ಕೂರಿಸಿಕೊಂಡರು. ಪ್ರಯಾಣಿಸಿ ಒಂದು ಮನೆಯ ಹತ್ತಿರ ಕಾರು ನಿಲ್ಲಿಸಲು ಹೇಳಿದರು. ಇಳಿದು ಮನೆಯ ಹತ್ತಿರ ಹೋಗಿ ಕರೆಗಂಟೆ ಒತ್ತಿದರು. ಮನೆಯಾಕೆ ಬಂದು ಬಾಗಿಲು ತೆಗೆದರು. ನಿಟ್ಟೂರರು ನೆಟ್ಟಗೆ ಹಜಾರ ತಲುಪಿದರು. ಮನೆಯಾಕೆಗೆ ಗಾಬರಿ. ಯಾರು? ಏಕೆ ಬಂದಿದ್ದಾರೆ? ಎಂದು ಗಂಡನನ್ನು ಕರೆದರು. ಅವರೂ ಬಂದು ನೋಡಿ, ಯಾರು? ಏನು ಸಮಾಚಾರ? ಎಂದರು. ಆಗ ಶ್ರೀ ನಿಟ್ಟೂರರಿಗೆ ಗೊತ್ತಾಯಿತು, ತಾವು ಬಂದಿರುವುದು ಬೇರೆಯವರ ಮನೆಗೆ ಎಂದು! ಅಚಾತುರ್ಯದ ಬಗೆಗೆ ತಿಳಿಸಿ, ಅಲ್ಲಿಂದ ಹೊರಟು ತಮ್ಮ ಮನೆ ತಲುಪಿದರು. ಒಂದಲ್ಲ ಒಂದು ಸಾರಿ ಮರೆವು ಮನುಷ್ಯನನ್ನು ಆಳುತ್ತದೆ.

ನಾನು ಶ್ರೀ ನಿಟ್ಟೂರರನ್ನು ಕಳೆದ ಮೂವತ್ತು ವರ್ಷಗಳಿಂದಲೂ ಬಲ್ಲೆ. ನೋಡಿದಂದಿ ನಿಂದ ಈವರೆಗೂ ಒಂದೇ ರೀತಿ ಕಾಣುತ್ತಿದ್ದಾರೆ. ಅದೇ ಎತ್ತರ, ಅದೇ ಗಾತ್ರ, ಅದೇ ಚಟುವಟಿಕೆ. ಅವರ ಹೊರ ರೂಪು ಅಷ್ಟೇನೂ ಆಕರ್ಷಕವಾದುದಲ್ಲ; ಸಾಮಾನ್ಯವಾದದ್ದು. ಸಪೂರವಾದ ದೇಹ. ಅಷ್ಟು ಎತ್ತರವೂ ಅಲ್ಲದ ಕುಳ್ಳೂ ಅಲ್ಲದ ಸಾಧಾರಣ ಎತ್ತರ.

ಸಾಮಾನ್ಯ ಕಪ್ಪು ಬಣ್ಣ, ಕೃಶವಾದ ಕೈ ಕಾಲುಗಳು. ಖಾದಿ ಕಚ್ಚೆ ಪಂಚೆ. ಖಾದಿ ಜುಬ್ಬ, ಎಡ ಹೆಗಲ ಮೇಲೆ ಇಳಿಬಿದ್ದ ಶಾಲು. ಒಮ್ಮೊಮ್ಮೆ ಜೋಡಿ ಶಲ್ಯ. ಕೃಶದೇಹವನ್ನು ಮುಚ್ಚಲೋ ಎನ್ನುವಂಥದ್ದು. ಅವೂ ಬಿಳಿ ಬಣ್ಣದವೇ. ಶಾಲುಗಳ ಉಪಯೋಗ ಮಾಡಿಕೊಳ್ಳುವುದು ಕಡಿಮೆ. ನಾಮಕಾವಸ್ಥೆಗೆ ಅವುಗಳ ಅಲಂಕಾರ, ಕುತ್ತಿಗೆಯಲ್ಲಿ ನೇತಾಡುವ ಕನ್ನಡಕ. ಅದನ್ನು ಉಪಯೋಗಿಸುವುದೂ ಕಡಿಮೆ. ಜೇಬಿನಲ್ಲಿ ಚಿಕ್ಕ ನೋಟ್ ಬುಕ್ಕು ಅಥವಾ ಡೈರಿ. ಕೈಯಲ್ಲಿ ದಪ್ಪ ಊರೆಗೋಲು. ಕಾಲಿಗೆ ಎಕ್ಕಡ. ಮುಖದಲ್ಲಿ ನಗೆ. ವೃತ್ತಿಯಲ್ಲಿದ್ದಾಗ ಕುತ್ತಿಗೆ ಮುಚ್ಚುವ ಕೋಟು, ತಲೆಗೆ ಹಾಸನದ ಟೋಪಿ. ಕುತ್ತಿಗೆ ಬಳಸಿದ ಶಲ್ಯ. ಅಪರ ವಯಸ್ಸಿನಲ್ಲಿ ಅದೆಲ್ಲಾ ಇಲ್ಲ. ತಲೆಯಲ್ಲಿ ಕಂಡೂ ಕಾಣದಂಥ ಕ್ರಾಪು. ಮೂಗಿನ ಕೆಳಗೆ ತೆಳುವಾದ ಮೀಸೆ. ಶುಭ್ರತೆಯೊಂದನ್ನು ಬಿಟ್ಟರೆ ಉಡುಪಿನ ಬಗೆಗೆ ಅಂಥ ಗಮನವೇನೂ ಇದ್ದಂತಿಲ್ಲ. ಒಟ್ಟಿನಲ್ಲಿ ವೇಷ ಭೂಷಣ, ಮಾತುಕತೆಯಲ್ಲಿ ಸರಳತೆ, ಸಜ್ಜನಿಕೆ, ಶ್ರೀಸಾಮಾನ್ಯನ ಪಡಿಯಚ್ಚು. ಒಂದೊಂದಾಗಿ ಹಲ್ಲು ಬಿದ್ದರೂ ಕೃತಕ ದಂತಪಂಕ್ತಿಯನ್ನು ಕಟ್ಟಿಸಿಕೊಂಡಿಲ್ಲ. ಹಲ್ಲಿಲ್ಲದ ದವಡೆಯಲ್ಲೇ ಉದ್ದಿನ ವಡೆ ತಿನ್ನುತ್ತಾರೆ, ಮಸಾಲೆದೋಸೆ ಅಗಿಯುತ್ತಾರೆ, ಊಟ ಮಾಡುತ್ತಾರೆ. ಆದರೆ ಆಹಾರದ ಪ್ರಮಾಣ ಮಾತ್ರ ಕಡಿಮೆ. ಕಾಫಿಗೆ ಸಕ್ಕರೆ ಬೇಕು, ಬೇಡವೆಂಬ ಪ್ರಶ್ನೆ ಉದ್ಭವಿಸಿಲ್ಲ. ವಯಸ್ಸು ನೂರಾದರೂ ಕಣ್ಣು ಚೆನ್ನಾಗಿ ಕಾಣಿಸುತ್ತದೆ. ಕಿವಿ ಚೆನ್ನಾಗಿ ಕೇಳಿಸುತ್ತದೆ. ಬೊಚ್ಚುಬಾಯಿಯ ನಗುವೂ ಕಡಿಮೆಯಿಲ್ಲ. ಇಷ್ಟು ಕಾಲ ಬದುಕುತ್ತೇನೆ ಎಂದು ಅವರಿಗೇ ಗೊತ್ತಿರಲಿಲ್ಲವಂತೆ! ವಿಶೇಷವಾದ ಅಂಗಸಾಧನೆ, ಆರೈಕೆ ಇಲ್ಲದೆ ಸಹಜವಾಗಿ ಬದುಕಿದ್ದಾರಂತೆ. ಇಂಥ ಭಾಗ್ಯ ಹೆಚ್ಚು ಜನರಿಗೆ ಇರುವುದಿಲ್ಲ.

ಶ್ರೀ ಶ್ರೀನಿವಾಸರಾಯರ ದೀರ್ಘಜೀವನದ ಹಿನ್ನೆಲೆಯಲ್ಲಿ ಯೋಚಿಸುವಾಗ ಅವರಿಂದ ಸಮಾಜಕ್ಕೆ ಎಷ್ಟು ಲಾಭವಾಗಿದೆ. ಏನು ಲಾಭವಾಗಿದೆ ಎಂದು ಪ್ರಶ್ನಿಸಿದರೆ ಭಿನ್ನಾಭಿಪ್ರಾಯದ ಉತ್ತರ ಹುಟ್ಟಬಹುದು. ಆದರೆ, ಅವರಿಂದ ಸಮಾಜಕ್ಕೆ ಅಪಾಯ ವಾಗಿಲ್ಲ ಎಂಬುದರಲ್ಲಿ ಭಿನ್ನಾಭಿಪ್ರಾಯ ಇರುವುದಿಲ್ಲ ಎಂಬುದು ಅವರನ್ನು ಹತ್ತಿರದಿಂದ ಕಂಡ ಹಿರಿಯರ ಅಂಬೋಣವಾಗಿದೆ. ಶ್ರೀ ನಿಟ್ಟೂರರು ನಮ್ಮ ಸಮಾಜದಲ್ಲಿ ತಾವೇ ಮುಂಚೂಣಿಯಲ್ಲಿ ನಿಂತು ಕೆಲಸ ಮಾಡಿದ್ದು ಕಡಿಮೆ; ಸಾಮಾಜಿಕ ಚಟುವಟಿಕೆಗಳಿಗೆ ಸಂಬಂಧಿಸಿದಂತೆ ದೀರ್ಘಕಾಲ ಸಾಕ್ಷಿಯಾಗಿದ್ದುದು ಹೆಚ್ಚು.

ಶ್ರೀ ನಿಟ್ಟೂರರು ಹಿತಮಿತವಾದ ಬದುಕಿನಿಂದ, ಸಮಾಧಾನ ಚಿತ್ತದಿಂದ ನೂರು ವಸಂತಗಳನ್ನು ಕಂಡರು, ನೂರಾರು ಸಂತಸಗಳನ್ನು ಉಂಡರು. ಬದುಕಿನ ದೀರ್ಘ ಕಾಲಾವಧಿಯಲ್ಲಿ ಹಲವು ಕ್ಷೇತ್ರದ ಜನರನ್ನು, ಘಟನೆಗಳನ್ನು ನೋಡಿ ಸಂತೋಷಪಟ್ಟರು.

ಜನರ ಸುಖ ದುಃಖಗಳಲ್ಲಿ ಭಾಗಿಯಾದರು. ಆನಂದವನ್ನು ಹಂಚಿದರು, ಆನಂದವನ್ನು ಸ್ವೀಕರಿಸಿದರು. ಕಣ್ತುಂಬ ದೇಶವನ್ನು ಜನರನ್ನು ನೋಡಿದರು. ಹಲವು ಸಮಸ್ಯೆಗಳಿಗೆ, ಸಂದರ್ಭಗಳಿಗೆ ಮನಸಾರೆ ಸ್ಪಂದಿಸಿದರು. ಇತರರಿಗೆ ಮಾದರಿಯಾಗಿ ಬದುಕಿದರು; ಹಲವರ ಪ್ರೀತಿಗೆ ಪಾತ್ರರಾದರು. ವಯೋವೃದ್ಧರಾದುದರ ಜೊತೆಗೆ ಜ್ಞಾನವೃದ್ಧರಾಗಿಯೂ ಜನರಿಗೆ ಬೇಕಾದವರಾದರು. ಇಡೀ ಶತಮಾನದ ಸಾಕ್ಷಿಯಾದರು. ಅವರ ಜೀವನ ಪ್ರೀತಿ ಅನನ್ಯವಾದದ್ದು. ಸಾರ್ಥಕ ಜೀವನವನ್ನು ನಡೆಸಿ, ಸಾಮಾಜಿಕ ಪ್ರೀತಿ ವಿಶ್ವಾಸ ಗಳಿಸಿ, ಶತಮಾನದ ಅನುಭವವನ್ನು ಮೈದುಂಬಿಕೊಂಡು, ನೆನಪಿನ ಬುತ್ತಿಯನ್ನು ಸಹೃದಯ ರೊಡನೆ ಹಂಚಿಕೊಂಡು ಆನಂದದಿಂದ ಕಾಲ ಕಳೆದ ಹಿರಿಯ ಚೇತನ ಅವರು.



# ಶತಾಯುಷಿ ನಿಟ್ಟೂರು ಶ್ರೀನಿವಾಸರಾಯರು

. . . . . . . . . . . . . . . . . . . . . . . . ✍ ಎಚ್.ಎಸ್. ಪಾರ್ವತಿ*

ಮಹಾಭಾರತದ ಅರಣ್ಯಪರ್ವದಲ್ಲಿ ಒಂದು ಪ್ರಸಂಗ ಬರುತ್ತದೆ. ಚಿರಂಜೀವಿ ಎನ್ನಿಸಿಕೊಂಡಿದ್ದ ಬಕವಾಲ್ಭ್ಯ ಋಷಿಗಳನ್ನು ದೇವೇಂದ್ರ ಕುತೂಹಲದಿಂದ ಪ್ರಶ್ನಿಸುತ್ತಾನೆ.

ಚಿರಂಜೀವಿಗಳಾಗಿರುವ ನೀವು ವಿಶ್ವದಲ್ಲಿ ನಡೆಯುತ್ತಿರುವ ಅನೇಕ ಘಟನೆಗಳಿಗೆ ಸಾಕ್ಷಿಯಾಗಿದ್ದೀರಿ. ದೀರ್ಘಾಯುಗಳಾಗಿರುವುದರಿಂದ ಮನುಷ್ಯನಿಗೆ ಲಾಭಗಳೇನು? ನಷ್ಟಗಳೇನು?'

ಬಕದಾಲ್ಭ್ಯರು ಉತ್ತರಿಸುತ್ತಾರೆ:

'ದೇವೇಂದ್ರ, ನಿನ್ನ ಈ ಕುತೂಹಲ ಸಹಜವಾದದ್ದೇ ದೀರ್ಘಾಯುಗಳಾದವರು ತಮ್ಮ ಬಂಧುಗಳನ್ನು, ಮಿತ್ರರನ್ನು ಆಪ್ತರನ್ನು ಕಳೆದುಕೊಂಡು ಅವರ ವಿಯೋಗದಿಂದ ನೋಯುತ್ತಾರಾದರೂ ಇದಕ್ಕೆ ಇನ್ನೊಂದು ಮುಖವೂ ಇದೆ. ಸದಾ ಮುಂದುವರಿಯುತ್ತಿರುವ ಈ ಪ್ರಪಂಚದಲ್ಲಿ ಅನೇಕ ಒಳ್ಳೆಯ ಕೆಲಸಗಳು ನಡೆಯುತ್ತಲೇ ಇರುತ್ತವೆ. ಅಂತಹ ಕೆಲಸಗಳನ್ನು, ಆ ಕೆಲಸ ಮಾಡುವ ಜನರನ್ನು ನೋಡುತ್ತಿರುವ ಭಾಗ್ಯ ದೀರ್ಘಾಯುಗಳಿಗೆ ಲಭ್ಯವಾಗುತ್ತಿದೆ. ಅದರಲ್ಲೂ ಪರಾಶ್ರಯವಿಲ್ಲದೆ, ಮಿತಾಹಾರಿಗಳಾಗಿರುವ ದೀರ್ಘಾಯುಗಳು ಪುಣ್ಯವಂತರೇ ಸರಿ.

-ಈಗಲೂ ನಾಡಿನಲ್ಲಿ ನಡೆಯುತ್ತಿರುವ ಸಾರ್ವಜನಿಕ, ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಚಟುವಟಿಕೆಯಿಂದ

---

* ೩೩೬೮, ಸ್ನೇಹ, ೧೩ನೇ ಕ್ರಾಸ್, ಶಾಸ್ತ್ರಿನಗರ
ಬೆಂಗಳೂರು - ೫೬೦ ೦೨೮

ಭಾಗವಹಿಸುತ್ತ ನಮ್ಮೊಡನಿರುವ ಶ್ರೀ ನಿಟ್ಟೂರು ಶ್ರೀನಿವಾಸರಾಯರು ಅಂತಹ ಪುಣ್ಯವಂತ ಶತಾಯುಷಿಗಳಲ್ಲೊಬ್ಬರು.

ಪರತಂತ್ರದಲ್ಲಿ ಬಳಲುತ್ತಿದ್ದ ಭಾರತದಲ್ಲಿ ಜನಿಸಿ, ಸ್ವಾತಂತ್ರ್ಯ ಚಳವಳಿಗಳಲ್ಲಿ ಭಾಗವಹಿಸಿ, ಗಾಂಧೀಜಿಯ ರಚನಾತ್ಮಕ ಕಾರ್ಯಗಳಲ್ಲಿ ಆಸಕ್ತರಾಗಿ ಅವರಿಗೆ ಪ್ರಿಯವಾಗಿದ್ದ ಹಿಂದೀ ಭಾಷಾ ಪ್ರಚಾರ, ಸಾಹಿತ್ಯ ಪ್ರಚಾರ ಮುಂತಾದ ಕಾರ್ಯಗಳನ್ನು ಮಾಡುತ್ತ ಸ್ವಾವಲಂಬಿಗಳಾಗಿ ಬದುಕಿದವರು ನಿಟ್ಟೂರು ಶ್ರೀನಿವಾಸರಾಯರು.

ನಾನು ನಿಟ್ಟೂರು ಅವರನ್ನು ಸುಮಾರು ಅರುವತ್ತು ವರ್ಷಗಳಿಂದ ನೋಡುತ್ತಿದ್ದೇನೆ. ನಾವಿದ್ದ ಮನೆ ಅವರ ಮನೆಗೆ ಹತ್ತಿರವಾಗಿದ್ದುದೇ ಇದಕ್ಕೆ ಮುಖ್ಯ ಕಾರಣ. ಅಲ್ಲದೆ ನಮ್ಮ ಸೋದರಮಾವ ಅಕ್ಕಿಹೆಬ್ಬಾಳು ರಾಮಯ್ಯ ಚಿಕ್ಕಂದಿನಿಂದ ಅವರ ಆಪ್ತ ಸ್ನೇಹಿತರಲ್ಲೊಬ್ಬರು. ಅವರ ಮಗಳು, ನಮ್ಮ ಅಕ್ಕ, ನಿಟ್ಟೂರರ ಹೆಣ್ಣುಮಕ್ಕಳ ಸ್ನೇಹಿತೆಯರಾಗಿದ್ದುದರಿಂದ ಅವರ ಜೊತೆ ಅನೇಕ ಬಾರಿ ನಾನು ಅವರ ಮನೆಗೂ ಹೋಗುತ್ತಿದ್ದೆ. ನಿಟ್ಟೂರರ ಪತ್ನಿ ಪದ್ಮಮ್ಮ ಹೆಚ್ಚು ಕಡಿಮೆ ಪ್ರತಿದಿನ ನಮ್ಮ ಮನೆ ಮುಂದೆಯೇ ದೇವಸ್ಥಾನಕ್ಕೆ ಹೋಗುತ್ತಿದ್ದರು. ಹೀಗಾಗಿ ಅವರ ಮನೆಯವರೆಲ್ಲರ ಪರಿಚಯವಿತ್ತು. ನಾನಾಗ ತುಂಬ ಚಿಕ್ಕವಳಾಗಿದ್ದುದರಿಂದ ನಿಟ್ಟೂರರೊಂದಿಗೆ ಮಾತನಾಡುವ ಧೈರ್ಯ ಇರಲಿಲ್ಲ. ನನಗೆ ನೆನಪಿರುವಂತೆ ಅವರು ಆಗಲೂ ಹೆಚ್ಚು ಕಡಿಮೆ ಈಗಿನಂತೆಯೇ ಇದ್ದರು ಎನ್ನಬಹುದು. ವಯಸ್ಸಿನ ಕಾರಣದಿಂದ ಈಗ ಮುಖದಲ್ಲಿ ಸ್ವಲ್ಪ ಸುಕ್ಕುಗಳು ಬಂದಿರಬಹುದಾದರೂ ಅವರ ಬಾಹ್ಯ ಆಕಾರದಲ್ಲಿ ಒಂದಿಷ್ಟೂ ಬದಲಾವಣೆ ಆಗಿಲ್ಲ. ಶರೀರ ದಪ್ಪವೂ ಆಗಿಲ್ಲ, ತೆಳ್ಳಗೂ ಆಗಿಲ್ಲ. ಅದೇ ನೇರವಾದ ನಡಿಗೆ, ಕೈಯಲ್ಲಿ ಆಗಲೂ ಒಂದು ಕೋಲಿರುತ್ತಿತ್ತು. ಬಹುಶಃ ಈಗ ಆ ಕೋಲನ್ನು ಸ್ವಲ್ಪ ಊರಿ ನಡೆಯಬಹುದು. ಮುಖ ಕಂಡಕೂಡಲೇ ಅದೇ ಪರಿಚಯದ ನಗು, ಯೋಗಕ್ಷೇಮದ ಮಾತು!

ನಿಟ್ಟೂರರು ಹುಟ್ಟಿದ್ದು ಸುಸಂಸ್ಕೃತ, ವಿದ್ಯಾವಂತರ ಮನೆತನದಲ್ಲಿ. ತಂದೆ ಶಾಲೆಯ ಮುಖ್ಯೋಪಾಧ್ಯಾಯರಾಗಿದ್ದರು. ತಾಯಿ ಸೀತಮ್ಮನವರ ಅಣ್ಣ ಪ್ರಸಿದ್ಧರಾದ ಪ್ರೊಫೆಸರ್ ಹಿರಿಯಣ್ಣ. ಎರಡನೆಯ ಸೋದರಮಾವ ಎಂ.ಎನ್. ಕೃಷ್ಣರಾಯರು ಆ ಕಾಲದಲ್ಲಿ ಸೀನಿಯರ್ ಮೆಂಬರ್ ಆಫ್ ಕೌನ್ಸಿಲ್ ಆಗಿದ್ದರು. ಕೆಲಕಾಲ ಅಂದಿನ ಮೈಸೂರು ಸಂಸ್ಥಾನದ ದಿವಾನರೂ ಆಗಿದ್ದರು. ಇವರ ಮಗಳು ಪದ್ಮಾವತಿಯವರೇ ಶ್ರೀನಿವಾಸ ರಾಯರ ಪತ್ನಿ. ಇವರಿಗೆ ಇಬ್ಬರು ಗಂಡುಮಕ್ಕಳು, ಇಬ್ಬರು ಹೆಣ್ಣು ಮಕ್ಕಳು.

ನಿಟ್ಟೂರರು ಶಾಲಾ ಶಿಕ್ಷಣ ಮುಗಿಸಿ ವಕೀಲಿ ಪದವಿ ಪಡೆದರು. ಚಿಕ್ಕಂದಿನಿಂದ

ಪಠ್ಯೇತರ ಚಟುವಟಿಕೆಗಳಲ್ಲಿ ಆಸಕ್ತಿ. ಸೆಂಟ್ರಲ್ ಕಾಲೇಜಿನಲ್ಲಿ ಓದುತ್ತಿದ್ದಾಗಲೇ ಕಾಲೇಜಿನ ಕರ್ನಾಟಕ ಸಂಘದ ಕಾರ್ಯದರ್ಶಿ ಆಗಿದ್ದರು. ಶಿಕ್ಷಣ ಮುಗಿಸಿ ವಕೀಲಿ ಡಿಗ್ರಿ ಪಡೆದ ಕೂಡಲೇ ವೃತ್ತಿ ಜೀವನ ಆರಂಭಿಸಿದರು.

ಬಾಲ್ಯದಿಂದ ಆದರ್ಶ ಜೀವನವನ್ನು ಮೈಗೂಡಿಸಿಕೊಂಡಿದ್ದ ನಿಟ್ಟೂರರನ್ನು ಆಗ ತೀವ್ರವಾಗಿ ನಡೆಯುತ್ತಿದ್ದ ಸ್ವಾತಂತ್ರ್ಯ ಚಳವಳಿ ಆಕರ್ಷಿಸಿದ್ದು ಆಶ್ಚರ್ಯವೇನಿಲ್ಲ. ೧೯೩೦, ೩೨, ೪೨ರಲ್ಲಿ ನಡೆದ ಸ್ವಾತಂತ್ರ್ಯ ಹೋರಾಟದಲ್ಲಿ ಸಕ್ರಿಯವಾಗಿಯೇ ಭಾಗವಹಿಸಿದ್ದರು. ಚಳವಳಿಗಾರರ ಕಛೇರಿಯ ವಹಿವಾಟು ನೋಡಿಕೊಳ್ಳುತ್ತಿದ್ದವರು ಇವರೇ. ಹೆಚ್ಚಾಗಿ ಭೂಗತ ಚಟುವಟಿಕೆಗಳಲ್ಲಿ ಭಾಗವಹಿಸಿದ್ದುದೇ ಹೆಚ್ಚು. ಸೇವಾದಳ ವಿಭಾಗದ ಬೆಂಗಳೂರು ಶಾಖೆಗೂ ಮುಖಂಡರಾಗಿದ್ದರು. ಆದರೂ ಇವರು ಜೈಲಿಗೆ ಹೋಗದಿದ್ದುದೇ ಆಶ್ಚರ್ಯ.

ಗಾಂಧೀಜಿಯ ಬಗ್ಗೆ ಶ್ರದ್ಧೆ, ಅವರ ಆದರ್ಶಗಳ ಬಗ್ಗೆ ನಂಬಿಕೆ ಇದ್ದುದರಿಂದ ಗಾಂಧೀಜಿಯ ರಚನಾತ್ಮಕ ಕೆಲಸಗಳನ್ನು ನಿಟ್ಟೂರರು ಕೈಗೆತ್ತಿಕೊಂಡರು. ಕಾಂಗ್ರೆಸ್ಸಿನ ಸಕ್ರಿಯ ಸದಸ್ಯರಾಗಿದ್ದರು. ಹಿಂದೀ ಭಾಷೆಯ ಪ್ರಚಾರಕ್ಕಾಗಿ ಬಹಳವಾಗಿ ದುಡಿದರು. ೧೯೩೫ರಲ್ಲಿ ಹಿಂದಿಯ ಕಾದಂಬರಿ ಸಾಮ್ರಾಟರೆಂದೇ ಹೆಸರಾಗಿದ್ದ ಪ್ರೇಮಚಂದರು ಅಂದಿನ ಮೈಸೂರು ಸಂಸ್ಥಾನಕ್ಕೆ ಬಂದಿದ್ದಾಗ ನಿಟ್ಟೂರರ ಮನೆಯಲ್ಲೇ ಇಳಿದುಕೊಂಡಿದ್ದರು. ನಿಟ್ಟೂರರ ಕಾರ್ಯಶ್ರದ್ಧೆಯನ್ನು, ದೇಶಭಕ್ತಿಯನ್ನು, ಅವರ ಮನೆಯ ಆತಿಥ್ಯವನ್ನು ಪ್ರೇಮಚಂದ್ ಮುಕ್ತವಾಗಿ ಹೊಗಳಿದ್ದಾರೆ.

ನಿಟ್ಟೂರು ಶ್ರೀನಿವಾಸರಾಯರು ಸತ್ಯ ಶೋಧನ ಪ್ರಕಟಣ ಮಂದಿರವನ್ನು ಆರಂಭಿಸಿದ್ದು ಒಂದು ಸ್ವಾರಸ್ಯವಾದ ಕಥೆಯೇ.

ಮಹಾತ್ಮ ಗಾಂಧಿಯವರು ತಮ್ಮ ಆತ್ಮಕಥೆಯನ್ನು 'ಸತ್ಯ ಶೋಧನೆ' ಎನ್ನುವ ಹೆಸರಿನಲ್ಲಿ ತಮ್ಮ ಮಾತೃಭಾಷೆಯಾದ ಗುಜರಾತಿನಲ್ಲಿ ಬರೆದು ಗುಜರಾತಿನ 'ನವಜೀವನ' ಪತ್ರಿಕೆಯಲ್ಲಿ ಧಾರಾವಾಹಿಯಾಗಿ ಪ್ರಕಟಿಸಿದರು. ವಿ.ಜಿ. ದೇಸಾಯಿಯವರು ಅದನ್ನು ಹಿಂದಿಯಲ್ಲಿ ಅನುವಾದಿಸಿದರು. ಮುಂದೆ ಅದು ಇಂಗ್ಲೀಷಿನ 'ಯಂಗ್ ಇಂಡಿಯಾ'ದಲ್ಲಿ ಧಾರಾವಾಹಿಯಾಗಿ ಪ್ರಕಟವಾಯಿತು. ಅದನ್ನು ಓದಿದ ನಿಟ್ಟೂರರಿಗೆ ಆ ಆತ್ಮಕಥೆಯನ್ನು ಕನ್ನಡಕ್ಕೂ ಅನುವಾದಿಸಬೇಕೆಂಬ ಮನಸ್ಸಾಯಿತು. ಅವರು ತಮ್ಮ ಪತ್ನಿ ಪದ್ಮಾವತಮ್ಮನವರೊಂದಿಗೆ, ಹಿಂದೀ ಮತ್ತು ಇಂಗ್ಲೀಷ್ ಭಾಷೆಗಳ ಆಧಾರದಿಂದ ಕನ್ನಡಕ್ಕೆ ತಂದರು. ಅದು ಪ್ರಸಿದ್ಧ ಸಾಹಿತಿ ಟಿ.ಟಿ. ಶರ್ಮರ 'ವಿಶ್ವ ಕರ್ನಾಟಕ' ಪತ್ರಿಕೆಯಲ್ಲಿ ಧಾರಾವಾಹಿಯಾಗಿ ಪ್ರಕಟವಾಯಿತು. ೧೯೨೭ರಲ್ಲಿ ಗಾಂಧೀಜಿಯವರು ಬೆಂಗಳೂರಿಗೆ

ಭೇಟಿ ಕೊಟ್ಟಿದ್ದಾಗ ಶ್ರೀನಿವಾಸರಾಯರು ಆ ಆತ್ಮಕಥೆಯನ್ನು ಕನ್ನಡದಲ್ಲಿ ಪುಸ್ತಕ ರೂಪದಲ್ಲಿ ತರಲು ಅವರ ಒಪ್ಪಿಗೆ ಪಡೆದರು. ಆದರೆ ಆ ಕಾಲದಲ್ಲಿ ಕನ್ನಡದಲ್ಲಿ ಪ್ರಕಾಶನ ಸಂಸ್ಥೆಗಳೇ ಇರಲಿಲ್ಲ ಎನ್ನಬಹುದು. ಕೇವಲ ಪುಸ್ತಕ ಮಾರಾಟ ಮಾಡುತ್ತಿದ್ದ ಎಂ.ಎಸ್. ರಾವ್ ಎನ್ನುವವರು ಆ ಪುಸ್ತಕ ಹೊರತರಲು ಮುಂದೆ ಬಂದರು. ಆದರೆ ಅವರು ಹಾಕಿದ ನಿಯಮಗಳು ನಿಟ್ಟೂರರಿಗೆ ಒಪ್ಪಿಗೆಯಾಗಲಿಲ್ಲ.

ಆಗ ದಂಪತಿಗಳು ಯೋಚಿಸಿದರು. ನಾವು ಗಾಂಧೀಜಿಯವರ ಆತ್ಮಕಥೆಯನ್ನು ಹಣ ಗಳಿಸಲೆಂದೇನೂ ಅನುವಾದ ಮಾಡಲಿಲ್ಲ. ಗಾಂಧೀಜಿಯವರ ವಿಚಾರಗಳನ್ನು ಕನ್ನಡಿಗರಿಗೆ ತಲುಪಿಸುವದಷ್ಟೇ ನಮ್ಮ ಉದ್ದೇಶವಾಗಿತ್ತು. ಈಗಲೂ ಹಣ ನಾವೇ ಹಾಕಿ ಪುಸ್ತಕ ಪ್ರಕಟಿಸಬಾರದೇಕೆ? ಹಾಗೆಂದೇ ನಿರ್ಧರಿಸಿ ಪುಸ್ತಕ ಪ್ರಕಟಿಸಿದರು. ಪುಸ್ತಕದ ಮೇಲೆ ಅನುವಾದಿಸಿದವರ ಹೆಸರೂ ಇಲ್ಲ. "ಕನ್ನಡಿಗರಿಬ್ಬರು" ಎಂದು ಮಾತ್ರ ಇದೆ. ಪುಸ್ತಕವೇನೋ ಅಚ್ಚಾಯಿತು. ಆದರೆ ಅದರಲ್ಲಿ ಪ್ರಕಾಶನ ಸಂಸ್ಥೆಯ ಹೆಸರೇ ಇಲ್ಲದಿದ್ದರೆ ಹೇಗೆ? ಮೊದಲು ತಮ್ಮ ಪ್ರಕಾಶನ ಸಂಸ್ಥೆಗೆ "ವಿಶ್ವ ಕರ್ನಾಟಕ ಪ್ರಕಟಣ ಮಂದಿರ" ಎಂದೇ ಹೆಸರಿಟ್ಟರು. ಆದರೆ ಇದರಿಂದ ತೊಡಕಾಯಿತು. ಪತ್ರ ವ್ಯವಹಾರ ನಡೆಯುವಾಗ ಇವರಿಗೆ ಬರಬೇಕಾದ ಕಾಗದಗಳೆಲ್ಲ ವಿಶ್ವ ಕರ್ನಾಟಕ ಪತ್ರಿಕೆಗೇ ಹೋಗುವುದು ಸಾಮಾನ್ಯವಾಯಿತು. ಆಗ 'ಅಖಿಲ ಕರ್ನಾಟಕ ಪ್ರಕಟಣ ಮಂದಿರ' ಎಂದು ಹೆಸರಿಡಲು ಯೋಚಿಸಿದರು. ಗಾಂಧೀಜಿಯವರ "ಸತ್ಯ ಶೋಧನೆ' ಪುಸ್ತಕವೇ ಸಂಸ್ಥೆಯ ಮೊದಲ ಪ್ರಕಟಣೆಯಾದ್ದರಿಂದ 'ಅಖಿಲ ಕರ್ನಾಟಕ ಸತ್ಯ ಶೋಧನ ಪ್ರಕಟಣ ಮಂದಿರ' ಎಂದು ಹೆಸರಿಡಲು ಸ್ನೇಹಿತರೊಬ್ಬರು ಸೂಚಿಸಿದರು. ಮುಂದೆ ಅಖಿಲ ಕರ್ನಾಟಕ ಬಿಟ್ಟು ಹೋಗಿ 'ಸತ್ಯ ಶೋಧನ ಪ್ರಕಟಣ ಮಂದಿರ'ವೆಂದೇ ಪ್ರಸಿದ್ಧವಾಯಿತು.

ಮುಂದೆ ನಿಟ್ಟೂರರು ಭಗವದ್ಗೀತೆಗೆ ಗಾಂಧೀಜಿಯವರು ಬರೆದ 'ಅನಾಸಕ್ತಿಯೋಗ' ಎನ್ನುವ ಗ್ರಂಥವನ್ನು ಕನ್ನಡಕ್ಕೆ ತಂದು ಪ್ರಕಟಿಸಿದರು. "ಮಹಿಳೆಯರಿಗಾಗಿ' ಮುಂತಾದ ಇನ್ನು ಕೆಲವು ಪುಸ್ತಕಗಳನ್ನು ಅವರು ಬರೆದಿದ್ದಾರೆ.

ನಿಟ್ಟೂರು ಶ್ರೀನಿವಾಸರಾಯರು ತಮ್ಮ ಪ್ರಕಾಶನ ಸಂಸ್ಥೆಯ ಮೂಲಕ ಕೇವಲ ತಾನು ರಚಿಸಿದ ಪುಸ್ತಕಗಳನ್ನು ಮಾತ್ರ ಪ್ರಕಟಿಸಿಲ್ಲ. ಅಂದಿನ ಅನೇಕ ಜನ ಖ್ಯಾತ ಲೇಖಕರ ಗ್ರಂಥಗಳನ್ನೂ ಪ್ರಕಟಿಸಿದ್ದಾರೆ. ಡಾ|| ಶಿವರಾಮ ಕಾರಂತರ 'ಬಾಲಪ್ರಪಂಚ' ಕಾದಂಬರಿ 'ಸೂಳೆಯ ಸಂಸಾರ' ಪ್ರೊಫೆಸರ್ ವಿ. ಸೀತಾರಾಮಯ್ಯನವರ 'ಗೀತೆಗಳು' (ಕವನ ಸಂಕಲನ) ಜಿ.ಪಿ. ರಾಜರತ್ನಂ ಅವರ 'ರತ್ನನ ಪದಗಳು' ಟಿ.ಎಂ.ಆರ್. ಸ್ವಾಮಿಯವರ 'ಮಕ್ಕಳ ಸಾಹಿತ್ಯ', ಪು.ತಿ.ನ. ಅವರ 'ರಾಮಾಚಾರಿಯ ನೆನಪುಗಳು' ಅಲ್ಲದೆ ಎಂ.ಆರ್.

ಶ್ರೀನಿವಾಸಮೂರ್ತಿ, ಗೊರೂರು ರಾಮಸ್ವಾಮಿ ಅಯ್ಯಂಗಾರ್, ಸಿ.ಕೆ. ವೆಂಕಟರಾಮಯ್ಯ, ಕೈವಾರ ರಾಜಾರಾವ್, 'ಕ್ಷೀರ ಸಾಗರ' ಮುಂತಾದ ಅನೇಕ ಜನ ಪ್ರತಿಭಾವಂತರ ಗ್ರಂಥಗಳು 'ಸತ್ಯ ಶೋಧನ ಪ್ರಕಟಣ ಮಂದಿರದ' ಮೂಲಕ ಪ್ರಕಟವಾಗಿವೆ.

ಸುಮಾರು ೧೯೬೭-೬೮ರಲ್ಲಿ ಈ ಸಂಸ್ಥೆಯನ್ನು ಪ್ರಸಿದ್ಧ ಪ್ರಕಾಶನ ಸಂಸ್ಥೆ 'ಓರಿಯಂಟಲ್ ಲಾಂಗ್‌ಮನ್ಸ್' ಅವರಿಗೆ ವಹಿಸಿಕೊಡಲಾಯಿತು.

ನನಗೆ ತಿಳಿದಿರುವ ಮಟ್ಟಿಗೆ ವಿವಿಧ ಸಂಘ ಸಂಸ್ಥೆಗಳಲ್ಲಿ ಬೇರೆ ಬೇರೆ ಸ್ಥಾನಗಳಲ್ಲಿದ್ದು ಕೊಂಡು ನಿಟ್ಟೂರು ಶ್ರೀನಿವಾಸರಾಯರಂತೆ ಸೇವೆ ಸಲ್ಲಿಸಿದವರು ಅಪರೂಪ. ಇವರು ಅಧ್ಯಕ್ಷರಾಗಿದ್ದ, ಗೌರವಾಧ್ಯಕ್ಷರಾಗಿದ್ದ ಸಂಘ ಸಂಸ್ಥೆಗಳ ದೊಡ್ಡ ಪಟ್ಟಿಯೇ ಇದೆ. ಈಗಲೂ ಗೋಖಲೆ ಸಾರ್ವಜನಿಕ ಸಂಸ್ಥೆಗೆ ಇವರ ಸೇವೆ ಸಲ್ಲುತ್ತಲೇ ಇದೆ. ಇಷ್ಟೇ ಅಲ್ಲ, ಇವರು ಪ್ರೇಕ್ಷಕರಾಗಿ ಭಾಗವಹಿಸಿದ ಸಾಂಸ್ಕೃತಿಕ, ಸಾಹಿತ್ಯಕ ಕಾರ್ಯಕ್ರಮಗಳಿಗೆ ಲೆಕ್ಕವೇ ಇಲ್ಲ. ನಾವು ಆಗಾಗ ಮಾತಾನಾಡಿಕೊಳ್ಳುವುದುಂಟು- 'ಅತಿ ಹೆಚ್ಚು ಕಾರ್ಯಕ್ರಮ ಗಳಿಗೆ ಆಗಮಿಸಿದವರಿಗೆಂದು ನೋಬೆಲ್ ಪ್ರಶಸ್ತಿ ಇಡುವುದಾದರೆ ಅದು ನಮ್ಮ ನಿಟ್ಟೂರರಿಗೇ ಸಲ್ಲಬೇಕು' ಎಂದು.

ವೃತ್ತಿ ಜೀವನದಲ್ಲೂ ನಿಟ್ಟೂರು ಶ್ರೀನಿವಾಸರಾಯರು ಬಹಳ ಮೇಲ್ಮಟ್ಟಕ್ಕೆ ಏರಿದವರು. ಅಡ್ವೊಕೇಟ್ ಜನರಲ್, ಮೈಸೂರು ಹೈಕೋರ್ಟಿನ ನ್ಯಾಯಾಧೀಶ, ಭಾರತದ ಪ್ರಥಮ ಕೇಂದ್ರ ವಿಚಕ್ಷಣ ಆಯೋಗದ ಆಯುಕ್ತ, ಇಂತಹ ಹುದ್ದೆಗಳನ್ನು ಅಲಂಕರಿಸಿದ್ದು ದಲ್ಲದೆ ೧೯೬೫ರಲ್ಲಿ ಕೆಲಕಾಲ ಕರ್ನಾಟಕದ ರಾಜ್ಯಪಾಲರಾಗಿಯೂ ಸೇವೆ ಸಲ್ಲಿಸಿದರು. ಆ ಸಂದರ್ಭದಲ್ಲಿ ಕನ್ನಡದಲ್ಲಿ ಭಾಷಣ ಮಾಡಿದ ಮೊದಲ ಗವರ್ನರ್ ಎಂಬ ಕೀರ್ತಿಗೂ ಪಾತ್ರರಾದರು.

ನಿಟ್ಟೂರರಿಗೆ ಸನ್ಮಾನ ಮಾಡಿ ಗೌರವಿಸಿರುವ ಸಂಘ ಸಂಸ್ಥೆಗಳಿಗೆ ಲೆಕ್ಕವೇ ಇಲ್ಲ. ಇವುಗಳಲ್ಲಿ ಮುಖ್ಯವಾದದ್ದು "ಹಿಂದೀ ಪ್ರಚಾರ ಸಮಿತಿ" ನೀಡಿದ ಗೌರವ ಡಾಕ್ಟರೇಟ್ ಪದವಿ, ಬರೋಡದಲ್ಲಿ ನಡೆದ ಹೊರನಾಡು ಕನ್ನಡಿಗರ ಸಮ್ಮೇಳನದ ಅಧ್ಯಕ್ಷ ಪದವಿ ಇತ್ಯಾದಿ.

ಇಷ್ಟೆಲ್ಲ ಅಧಿಕಾರ, ಗೌರವ ಸಂದಿದ್ದರೂ ನಿಟ್ಟೂರರ-ವಿನಯ, ನಿಗರ್ವಿತನ ಚಕಿತ ಗೊಳಿಸುವಂತಹುದು. ಅವರ ಪರಿಚಯದವರೆಲ್ಲರಿಗೂ ಅವರ ಸರಳತೆಯ ಪರಿಚಯ ಆಗೇ ಇರುತ್ತದೆ. ನನ್ನ ಅನುಭವವನ್ನೇ ಹೇಳುವುದಾದರೆ,

೧೯೯೫ರಲ್ಲಿ ನನ್ನ ಮಗನ ಮದುವೆಯ ಸಂದರ್ಭ. ವಿದೇಶದಿಂದ ಬಂದ ಅವನು

ಹುಡುಗಿಯನ್ನು ನೋಡಿ ಮದುವೆ ಏರ್ಪಡಿಸಬೇಕಾಗಿತ್ತು... ಎಲ್ಲ ಗಡಿಬಿಡಿ, ವೈಯಕ್ತಿಕವಾಗಿ ಕೆಲವರನ್ನಾದರೂ ಸಂಪರ್ಕಿಸುವುದಕ್ಕೂ ಆಗದಷ್ಟು ಸಮಯಾಭಾವ. ಇಂಥ ಪರಿಸ್ಥಿತಿಯಲ್ಲಿ ನಾನು ಸಾಹಿತ್ಯ ಪರಿಷತ್ತಿಗೆ ಒಂದು ಕಾರ್ಯಕ್ರಮಕ್ಕೆ ಹೋದೆ. ಅಲ್ಲಿಗೆ ಬಂದಿದ್ದ ಪರಿಚಿತರಿಗೆ ಆಹ್ವಾನ ಪತ್ರಿಕೆ ಕೊಡುವುದು ಒಂದು ಉದ್ದೇಶ. ಅಲ್ಲಿಗೆ ನಿಟ್ಟೂರರೂ ಬಂದಿದ್ದರು. ನಾನು ತುಂಬಾ ಸಂಕೋಚದಿಂದಲೇ ಅವರಿಗೆ ಆಮಂತ್ರಣ ಪತ್ರಿಕೆ ಕೊಟ್ಟೆ. ಅವರ ಮನೆಗೆ ಫೋನಾದರೂ ಮಾಡಬೇಕು ಎಂದುಕೊಂಡರೂ ಸಾಧ್ಯವಾಗಿರಲಿಲ್ಲ. ಮದುವೆಯ ಸಂಜೆ ಆರತಕ್ಷತೆಗೆ ಮೊದಲು ಬಂದವರು ನಿಟ್ಟೂರು ಶ್ರೀನಿವಾಸರಾಯರು. ನನಗೆ ಆನಂದದ ಜೊತೆಗೆ ಅವರ ಸರಳತೆಯನ್ನು ಕಂಡು ಆಶ್ಚರ್ಯವಾಯಿತು.

ಈಗ ಕೆಲವು ತಿಂಗಳುಗಳ ಹಿಂದೆ ನಿಟ್ಟೂರರು ಮನೆಯಲ್ಲೇ ಜಾರಿ ಬಿದ್ದು ಕಾಲಿಗೆ ನೋವಾಗಿತ್ತು. ಯಾವ ಕಾರ್ಯಕ್ರಮಕ್ಕೂ ಬರುತ್ತಿರಲಿಲ್ಲ. ಕೆಲವು ತಿಂಗಳುಗಳ ನಂತರ ಅವರೊಂದು ಕಾರ್ಯಕ್ರಮಕ್ಕೆ ಬಂದಿದ್ದಾಗ ನಾನು ಅವರ ಆರೋಗ್ಯದ ಬಗ್ಗೆ ವಿಚಾರಿಸಿದೆ.

ಆಗವರು, 'ನನ್ನ ಆರೋಗ್ಯ ಹಾಗಿರಲಿ, ಈಚೆಗೆ ನಿನ್ನ ಆರೋಗ್ಯ ಸರಿಯಾಗಿಲ್ಲ ಅಂತ ನಿಮ್ಮ ಮನೆಯವರು ಅಂದರು, ನೀನು ಹೇಗಿದ್ದೀ?' - ಎಂದಾಗ ನಾನು ಮೂಕಳಾದೆ.

ನಿಟ್ಟೂರುರವರ ಸೆನಪಿನ ಶಕ್ತಿಯಂತೂ ಅಗಾಧ. ಅರುವತ್ತು ವರ್ಷಗಳ ಹಿಂದೆ ತಮ್ಮ ಜೊತೆ ಚಳವಳಿಯಲ್ಲಿ ಭಾಗವಹಿಸಿದ್ದ ಸರ್ದಾರ್ ವೆಂಕಟರಾಮಯ್ಯ, ಎಚ್.ಆರ್. ವೆಂಕಟರಾಮು, ದೊಡ್ಡಮನೆಯ ಗಣೇಶ ಹೆಗ್ಗಡೆ ಮುಂತಾದ ಅನೇಕರನ್ನು ಅವರು ಮಾಡಿದ ಕೆಲಸಗಳನ್ನು ವಿವರವಾಗಿ ಜ್ಞಾಪಿಸಿಕೊಂಡರು.

ಶ್ರೀನಿವಾಸರಾಯರು ಅನೇಕ ಸಂಗೀತ ತರಬೇತಿಗಳಲ್ಲೂ ಕಾಣಸಿಗುತ್ತಾರೆ. ನಿಮಗೆ ಸಂಗೀತದಲ್ಲಿ ಆಸಕ್ತಿಯೇ? ಎಂದು ಕೇಳಿದಾಗ, ಆಸಕ್ತಿ ಎಂದರೆ ಸಂಗೀತದ ಶಾಸ್ತ್ರಭಾಗವೇನೋ ನನಗೆ ಗೊತ್ತಿಲ್ಲ- ಸಂಗೀತದ ರಸಾಸ್ವಾದನೆಗೆ ಸಂಗೀತದ ಜ್ಞಾನದ ಆವಶ್ಯಕವೇನೂ ಇಲ್ಲ,' - ಎಂದರು.

ಬಹಳ ವರ್ಷಗಳ ಹಿಂದೆಯೇ ನಿಟ್ಟೂರರ ಇಬ್ಬರು ಹೆಣ್ಣು ಮಕ್ಕಳಿಗೂ ಅಂತರ್ಜಾತಿಯ ವಿವಾಹ ನಡೆಯಿತು. 'ಆ ಬಗ್ಗೆ ನಿಮ್ಮ ಮನೆಯಲ್ಲಿ ವಿರೋಧವೇನೂ ಬರಲಿಲ್ಲವೆ?' - ಎಂದು ಪ್ರಶ್ನಿಸಿದಾಗ: 'ನನಗಂತೂ ಈ ಜಾತಿ, ಪಂಥಗಳಲ್ಲಿ ಯಾವತ್ತೂ ನಂಬಿಕೆಯಿಲ್ಲ. ನನ್ನ ಶ್ರೀಮತಿಯವರು ಕೂಡಾ ಅಷ್ಟೇನೂ ಅಸಮಾಧಾನಗೊಳ್ಳಲಿಲ್ಲ. 'ಹೊಂದಿಕೆಯಾಗುತ್ತದೆಯೇ ಯೋಚಿಸಿ'- ಎಂದಷ್ಟೇ ಹೇಳಿದರು, ಎಂದರು. ಸಮಾಜ

ಸುಧಾರಣೆ ಬಗೆಗೆ ಸಾವಿರ ಮಾತಾಡುವುದಕ್ಕಿಂತ ಇಂತಹ ಮನೋಭಾವವನ್ನು ಬೆಳೆಸಿ ಕೊಳ್ಳುವುದು ಆವಶ್ಯಕ ಅಲ್ಲವೇ'

ಸಾಮಾನ್ಯವಾಗಿ ವಯಸ್ಸಾದವರಿಗೆಲ್ಲ ಒಂದು ದೌರ್ಬಲ್ಯ ಇರುತ್ತದೆ. ಚಿಕ್ಕಂದಿನಲ್ಲಿ ತಾವು ಎಷ್ಟೇ ತಾಪತ್ರಯ ಪಟ್ಟಿದ್ದರೂ, 'ಆ ಕಾಲ ಎಷ್ಟು ಚೆನ್ನಾಗಿತ್ತು. ಈಗೆಲ್ಲ ಕೆಟ್ಟುಹೋಗಿದೆ. ಜನರಂತೂ ಹಾಳಾಗಿ ಹೋಗಿದ್ದಾರೆ'- ಹಾಗೇ ಹೀಗೇ ಎನ್ನುವ ಗೊಣಗಾಟ. ಆದರೆ ಒಂದು ಶತಮಾನ ಬಾಳಿರುವ ನಿಟ್ಟೂರು ಶ್ರೀನಿವಾಸರಾಯರ ನಿಲುವೇ ಬೇರೆ. 'ಮಂಗಳ' ವಿಶೇಷ ಸಂಚಿಕೆಗಾಗಿ ಕೊಟ್ಟಿರುವ ಸಂದರ್ಶನದಲ್ಲಿ ಅಂದು ಮತ್ತು ಇಂದಿನ ನ್ಯಾಯ ವ್ಯವಸ್ಥೆಯನ್ನು ವಿಶ್ಲೇಷಿಸುತ್ತ, ಅವರೆನ್ನುತ್ತಾರೆ.

'ಹಿಂದಿನ ಕಾಲದಲ್ಲಿ ಪ್ರತಿಯೊಂದು ಕಡೆಯಲ್ಲೂ ಜಮೀನ್ದಾರಿಕೆ ಪದ್ಧತಿ ರೂಢಿ ಯಲ್ಲಿತ್ತು. ಇದರಿಂದಾಗಿ ಬಹಳಷ್ಟು ಕೆಲಸಗಾರರು ನ್ಯಾಯವಂಚಿತರಾಗುತ್ತಿದ್ದರು. ನಮ್ಮ ದೇಶದ ಸಂವಿಧಾನ ರೂಪುಗೊಂಡ ಮೇಲೆ ಮಾನವ ಹಕ್ಕುಗಳಿಗೆ ಸಂಬಂಧಿಸಿದಂತೆ ಜನರಲ್ಲಿ ಪ್ರಜ್ಞೆ ಮೂಡಿದೆ. ಇಂಡಸ್ಟ್ರಿಯಲ್ ಮತ್ತು ಲೇಬರ್ ಆಕ್ಟ್‌ಗಳು ಬಹಳಷ್ಟು ಪ್ರಕರಣಗಳಲ್ಲಿ ಕೆಲಸಗಾರರಿಗೆ ಸೂಕ್ತ ನ್ಯಾಯ ವ್ಯವಸ್ಥೆ ದೊರಕಿಸಿ ಕೊಟ್ಟಿದೆ.'

ನಿಟ್ಟೂರು ಶ್ರೀನಿವಾಸರಾಯರಂತಹ ಪ್ರಗತಿ ಪರ ಮನೋಭಾವದ ಆದರ್ಶ ವ್ಯಕ್ತಿತ್ವದ ಹಿರಿಯರು ಬಹುಕಾಲ ಬದುಕಿದ್ದು ದೇಶದ ಜನತೆಗೆ ಮಾರ್ಗದರ್ಶನ ಮಾಡುವಂತಾಗಲಿ.

❑



# ನೂರರ ನಿಟ್ಟೂರರಿಗೆ ನಮ್ರ ನಮನಗಳು

. . . . . . . . . . . . . . . . . . . . . . . . ✍ *ಮಾಸ್ಟರ್ ಹಿರಣ್ಣಯ್ಯ**

ಒಂದು ಸಾಮಾನ್ಯ ವೃತ್ತಿ ನಾಟಕ ಸಂಸ್ಥೆ. ಅದರಲ್ಲೂ ಸಮಾಜದಲ್ಲಾಗಲೀ, ಕುಟುಂಬಸ್ಥರಲ್ಲಾಗಲೀ, ವಿದ್ಯಾವಂತ-ಗೌರವಾನ್ವಿತರ ಗುಂಪುಗಳಲ್ಲಾಗಲೀ, ಅಷ್ಟೇನೂ ಪ್ರವೇಶ-ಪ್ರಾಮುಖ್ಯತೆಗಳನ್ನು ಪಡೆಯದೇ, ತನ್ನದೇ ಆದ ಮೈಲಿಗೆಯ ಪ್ರಾಕಾರದಲ್ಲೇ ಉಳಿದು, ಬೆಳೆದು ಬರುತ್ತಿದ್ದು, ಕ್ರಮೇಣ ಮೈಲಿಗೆ ಕಳೆದು 'ಕಲಾವಂತಿಕೆ'ಯ ಉಡುಗೆ ತೊಟ್ಟು, ಜನಸಾಮಾನ್ಯರ ಹಾಗೂ ಮಲಿನವಾಗುತ್ತಿರುವ ಸಾಮಾಜಿಕ-ರಾಜಕೀಯ ವ್ಯವಸ್ಥೆಗಳಿಗೆ ಹಿಡಿವ ಕನ್ನಡಿಯಂತೆ ರಂಗಕಲೆ ರೂಪುಗೊಂಡ ಕಾಲ ಅದು. ಅಂಥಾ ಹಸನಾದ ಕಾಲದಲ್ಲಿ, ಕರ್ನಾಟಕದ ರಾಜಧಾನಿಯಲ್ಲಿ-ಯಾರ ಹಂಗಿಗೂ, ಯಾವ ಗುಂಗಿಗೂ ಒಳಪಡದೇ, ನಿಚ್ಚಳವಾದ 'ಪ್ರಜಾಪ್ರಭುತ್ವದ' ಪ್ರಭುವಾದ, ಸಾಮಾನ್ಯ ಪ್ರಜೆಯ ಅಂತರಾಳದ ಕೂಗಿಗೆ ಧ್ವನಿಯಾಗಿ, ಶೋಷಣೆಗೆ ಸ್ವರವಾಗಿ ನಡೆಯುತ್ತಿತ್ತು, ನಮ್ಮ 'ಲಂಚಾವತಾರ' ನಾಟಕ-ಬೆಂಗಳೂರಿನ ರೈಲ್ವೆ ನಿಲ್ದಾಣದ ಎದುರಿನ (ಇಂದಿನ ಸಿಟಿ ಬಸ್ಸ್ ನಿಲ್ದಾಣವಾಗಿರುವ ಬಯಲಿನಲ್ಲಿ) ಕೆಂಪಾಂಬುಧಿಕೆರೆ-ಸುಭಾಷ ನಗರದ ಮೈದಾನದಲ್ಲಿ, ನಮ್ಮ ಸ್ವಂತ ರಂಗಮಂದಿರದಲ್ಲಿ. ವೃತ್ತಿ ನಾಟಕ ಸಂಸ್ಥೆಗಳ ಸಾಂಪ್ರದಾಯಕ ಸ್ಥಿತಿ-ಗತಿಗೆ ಹಿಡಿದ ಕನ್ನಡಿಯಂತೆ ನಿಂತಿತ್ತು, ಆ ರಂಗದ ಮಂದಿರ. ಸುತ್ತಾ ಅರ್ಧ ಮಣ್ಣಿನ ಗೋಡೆ, ಇನ್ನರ್ಧ ತಡಿಕೆ, ಮೇಲೆ ಹೊದಿಸಿದ ತಾತಾತೂತು ಜಿಂಕ್ಷೀಟು.

---

* 'ರಂಗಭೂಮಿ', # ೯೭೯, ೧೩ನೇ ಅಡ್ಡರಸ್ತೆ
ಬನಶಂಕರಿ ೨ನೇ ಹಂತ, ಬೆಂಗಳೂರು - ೫೬೦೦೭೦

ಕೆಳಗೆ ಮಳೆಗಾಲದಲ್ಲಿ ಭೂಜಲ ಮೇಲೆ ಬಂದು, ಪುಟ್ಟ ಕೆರೆಯೋಪಾದಿಯಲ್ಲಿ ನಿಂತ ನೀರಿನಲ್ಲಿ, ಕಾಲೂರಿ ಕೂತ ಕಬ್ಬಿಣದ ಕುರ್ಚಿಗಳು. ಅನ್ನದಾತರಿಗೆ ಓಡಾಡಲು ರೆಡ್ ಕಾರ್ಪೆಟ್ಟಿನಂತೆ ಹಾಸಿದ ಜಿಂಕ್ಷೀಟುಗಳು. ಇನ್ನು ನೆಲದಲ್ಲಿ ಅರ್ಧ ಚಾಪೆ-ಉಳಿದರ್ಧ ಭಾಗ ಕೆಮ್ಮಣ್ಣು ಸಾರಿಸಿದ ನೆಲ. ನೆಲಕ್ಕಿಂತ ಚಾಪೆ ಉತ್ತಮವೆಂಬುವವರು, ಅದರ ಎರಡರಷ್ಟು ಹಣ, ಅಂದರೆ ನೆಲ ಒಂದು ರೂ. ಆದರೆ, ಇದಕ್ಕೆ ಎರಡು ರೂ. ತೆರಬೇಕು. ಅದಕ್ಕೂ ಹೆಚ್ಚು ಸುಖ ಬೇಡುವವರು, ಇನ್ನೊಂದು ರೂ. ಹೆಚ್ಚು ತೆತ್ತಲ್ಲಿ, ಮುಂದಿನ ೩-೪ ಕುರ್ಚಿಯ ಸಾಲು ಮೀಸಲು. ಜೋರು ಮಳೆ ಬಂದಲ್ಲಿ, ಕೆಳಗೆ ನಿಂತ ನೀರು ಹೆಚ್ಚು ಹಣ ತೆತ್ತವರಿಗೆ ಕಾಲು ತೊಳೆಯಲು. ಆದರೆ, ಹಿಂದಿನವರಿಗೆ ಜಿಂಕ್ಷೀಟಿನಿಂದಾ ಸಂಪ್ರೋಕ್ಷಣೆ. ಒಟ್ಟಿನಲ್ಲಿ ಯಾರೂ ನೆನೆಯದೆ (ಮನಸ್ಸಿನಲ್ಲಿ ನಾಟಕವನ್ನು, ಮೈಮೇಲೆ ಮಳೆಯನ್ನು) ಹೊರಗೆ ಹೋಗುವಂತೆಯೇ ಇಲ್ಲಾ. ಇಷ್ಟೆಲ್ಲಾ ವಿವರಿಸಲು ಕಾರಣ, ಇಂಥಾ ಪರಿಸರದಲ್ಲಿ, ಬೆಂಗಳೂರಿನಂಥಾ ಅತ್ಯಾಧುನಿಕ ಪಟ್ಟಣದಲ್ಲಿ, ನಮ್ಮ ಲಂಚಾವತಾರ ನಾಟಕ ಶತದಿನೋತ್ಸವಗಳನ್ನು ದಾಟಿ ನಡೆಯುತ್ತಾ, ಸಮಾಜದ ಹಾಗೂ ಸರ್ಕಾರದ ತ್ರಿವಿಧ ಅಂಗಗಳಾದ ಶಾಸಕಾಂಗ, ಕಾರ್ಯಾಂಗ, ಮತ್ತು ನ್ಯಾಯಾಂಗದ, ಅಲ್ಲದೆ ಸಂಪರ್ಕ ಮಾಧ್ಯಮದ ಸಕಲಾಂಗಗಳ, ಮುಖ್ಯಾತಿಮುಖ್ಯರೆಲ್ಲರೂ ಬಂದುನೋಡಿ, ಆನಂದಾಶ್ಚರ್ಯ ಗಳನ್ನು ಪಟ್ಟು, ನಮ್ಮನ್ನು ಹರಸುತ್ತಾ-ತಿದ್ದುತ್ತಾ ನಡೆದಿದ್ದ ಕಾಲವದು.

ಇದ್ದಕ್ಕಿದ್ದಂತೆ ಒಂದು ದಿನ ಸುದ್ದಿ ಬಂತು, ಕರ್ನಾಟಕ ರಾಜ್ಯದ ಗೌರವಾನ್ವಿತ ಹಂಗಾಮಿ ರಾಜ್ಯಪಾಲರೂ, ಕರ್ನಾಟಕ ರಾಜ್ಯದ ಉಚ್ಚ ನ್ಯಾಯಾಲಯದ ಶ್ರೇಷ್ಠ ನ್ಯಾಯಾಧೀಶರೂ ಆಗಿರುವ ಸನ್ಮಾನ್ಯ ಶ್ರೀ ನಿಟ್ಟೂರು ಶ್ರೀನಿವಾಸರಾಯರು ಸಕುಟುಂಬ ಸಹಿತರಾಗಿ, ನಾಟಕಾವಲೋಕನಕ್ಕೆ ಬರುತ್ತಿದ್ದಾರೆ ಎಂದು. ನಮಗೆಲ್ಲಾ ಒಂದೆಡೆ ಸಡಗರ, ಮತ್ತೊಂದೆಡೆ ಕೈಕಾಲಾಡದ ಭೀತಿ-ಆತಂಕ. ಹೇಳಲಾರದ ದುಗುಡ ದುಮ್ಮಾನಗಳು. ಏನೂ ತೋಚದಂತೆ ಮಾಡಿಬಿಟ್ಟಿದೆ. ಕಾರಣ ಬರುತ್ತಿರುವವರು ಶ್ರೇಷ್ಠ ನ್ಯಾಯಮೂರ್ತಿಗಳು ಹಾಗೂ ಕಾರ್ಯಾಂಗದ ಅಧಿಪತಿಗಳು. ಅಂದಿನ ರಾಜ್ಯ ಸರ್ಕಾರ ನಮ್ಮ ಲಂಚಾವತಾರದ ಬಗ್ಗೆ ಮುನಿದಿತ್ತು. ನಾಟಕ ಪ್ರದರ್ಶನವನ್ನೇ ರದ್ದು ಪಡಿಸುವ ಹುನ್ನಾರ ನಡೆದು, ಆ ಮಸೂದೆ ವಿಧಾನಸಭೆಯಲ್ಲಿ ಬಹುಮತವಿಲ್ಲದೆ ಬಿದ್ದು ಹೋಗಿ, ಸರ್ಕಾರ ಅದನ್ನು ನ್ಯಾಯಾಲಯಕ್ಕೆ ಒಯ್ದಿದ್ದ ಕುತೂಹಲದ ಕಾಲ ಅದು. ಬರುತ್ತಿರುವವರನ್ನು ನೆನೆದರೆ ಹೇಗಿರಬೇಕು ನಮ್ಮ ಸ್ಥಿತಿ?

ಇಂತಹ ನಮ್ಮ ದುಸ್ಥಿತಿಗೆ-ದುಗುಡಕ್ಕೆ ಮಾನ್ಯ ನಿಟ್ಟೂರರ ಒಂದೇ ಒಂದು ಸೂಚನೆಯ ಮಾತು, ನಿರಾಳತೆಯನ್ನು ತಂದಿತ್ತು ಸಂತೈಸಿತು. 'ನಾನೊಬ್ಬ ಭಾರತೀಯ ಸಾಮಾನ್ಯ

ಪ್ರಜೆಯಾಗಿ, ಕಲಾಪ್ರೇಮಿಯಾಗಿ, ಮಾಮೂಲೀ ಉತ್ಸುಕ ಪ್ರೇಕ್ಷಕನಾಗಿ ಮಾತ್ರಾ ನಾಟಕ ನೋಡಲು ಬರುತ್ತಿದ್ದೇನೆಯೇ ವಿನಃ, ಮತ್ಯಾವ ಮುಖವಾಡವನ್ನೂ ಹೊತ್ತಾಗಲೀ, ಪೂರ್ವಾಗ್ರಹ ಪೀಡೆಯನ್ನು ಇಟ್ಟುಕೊಂಡಾಗಲೀ ಬರುತ್ತಿಲ್ಲಾ. ನೀವು ಎಂದಿನಂತೆ ಯಾವ ಉದ್ವೇಗ-ಉದ್ರೇಕಗಳಿಗೂ ಒಳಗಾಗದೇ, ನಿತ್ಯದಂತೆ ನಾಟಕವಾಡಿ' ಎಂದು ಆಡಿದ ಆ ಪುಣ್ಯಾತ್ಮರನ್ನು ಮನದಲ್ಲೇ ವಂದಿಸಿ, ನಾಟಕಾರಂಭ ಮಾಡಿದೆವು. ಆರಂಭಕ್ಕೆ ಪೂರ್ವ, ಒಂದು ವಿನಂತಿಯನ್ನು ಮಾಡಿಕೊಂಡೆ. ಶ್ರೀಯುತರು ಕೊಂಡಿದ್ದ ಮುಂದಿನ ೪-೫ ಸೀಟಿನ ಹಣವನ್ನು ಹಿಂದಕ್ಕೆ ಪಡೆಯಬೇಕೆಂದು ಕೋರಿದೆ. ಆ ಕೋರಿಕೆಯನ್ನು ಆರಂಭದಲ್ಲಿ ಅತ್ಯಂತ ಮೃದುವಾಗಿ ಬೇಡವೆಂದರೂ, ಕಡೆಗೊಮ್ಮೆ ನನ್ನ ಹಠಕ್ಕೆ-ಒತ್ತಾಯಕ್ಕೆ ಮಣಿದು ೨೫ ರೂ.ಗಳನ್ನು ಹಿಂದಕ್ಕೆ ಪಡೆದರು. ನನಗೇನೋ ಒಂದು ಬಗೆಯ ತೃಪ್ತಿ-ಆನಂದ ಆಯ್ತು ನಿಜ. ಆದರೆ ಅವಕ್ಕೆ ಅರ್ಧ ದಿನದಷ್ಟೇ ಆಯಸ್ಸು ಇದ್ದುದು. ಕಾರಣ ಮರುದಿನ ಮಧ್ಯಾಹ್ನ ರಾಜಭವನದ ಡವಾಲಿಯವನು ಹಿಂತಿರುಗಿಸಿದ ಲಕೋಟೆಯಲ್ಲಿತ್ತು, ಒಂದು ಮನತುಂಬಿ ಮಾಡಿದ್ದ ಆಶೀರ್ವಾದದ ಪತ್ರ ಮತ್ತು ನೆನ್ನೆ ಹಿಂದಕ್ಕೆ ಪಡೆದಿದ್ದ ೨೫ ರೂಗೆ ಬದಲಾಗಿ, ಮಾನ್ಯರ ಸ್ವಂತ ಖಾತೆಯ ಬ್ಯಾಂಕಿನ ಚೆಕ್ ಒಂದು ನೂರು ರೂ ಗಳಿಗೆ. ನನ್ನನ್ನು ಪ್ರಶ್ನಿಸುತ್ತಿತ್ತು-ಗೆದ್ದೆಯೋ, ಸೋತೆಯೋ ಎಂದು. ನಾನು ಮನಸ್ಸಿನಲ್ಲೇ ಅಂದುಕೊಂಡೆ, ಇದು ಒಂದು ಬಗೆಯ ಸೋಲಿನಲ್ಲಿನ ಗೆಲುವು ಇದ್ದಂತೆ ಎಂದು. ದೇವದೇವನ ಪಾದದ್ವಯಗಳಲ್ಲಿ ಯಾವುದು ಗೆಲುವಿಂದು-ಯಾವುದು ಸೋಲಿಂದು. ಅದಕ್ಕೇ ಇಂದಿಗೂ ಆ ಪತ್ರ ಮತ್ತು ಚೆಕ್ಕನ್ನು ಲ್ಯಾಮಿನೇಟ್ ಮಾಡಿಸಿ, ಫ್ರೇಂ ಹಾಕಿಸಿ ಕಾಪಾಡಿಕೊಂಡಿದ್ದೇನೆ. ಅದು ನನ್ನ ಭಾಗಕ್ಕೆ ಕವಿಯೋರ್ವನು ಹೇಳಿರುವಂತೆ 'ಅರಸರ್ ಕೊಡುವ ರನ್ನ ಕಂಕಣಮದಿರಲ್ಕೆ, ರಸಿಕರು ಆಸ್ವಾದಿಸಿ ಕೊಡುವ ಕಂಕಣವೇ ಕವಿಗೆ ಕಂಕಣ' ಎಂಬಂತೆ.

ಇದು ನಡೆದು ೩೦ ವಸಂತಗಳೇ ಉರುಳಿದ್ದರೂ, ನಮ್ಮಿಬ್ಬರ ಮಧ್ಯೆ ಈಗಲೂ ಹಚ್ಚ ಹಸಿರಾಗಿ, ಪದೇ ಪದೇ ಉಲ್ಲೇಖಿತವಾಗುತ್ತಾ ಉಳಿದಿರುವ ದಿವ್ಯ ಸ್ಮರಣೆ. ಅಂದಿನಿಂದ ಇಂದಿನವರೆಗೂ ದಶಕಗಳ ಕಾಲವೇ ಕರಗಿ ಹೋಗಿದ್ದರೂ, ನಮ್ಮಿಬ್ಬರ ಬದುಕಿನ ಕೃಷ್ಣಾ-ಕಾವೇರಿಗಳಲ್ಲಿ ಅದೆಷ್ಟೋ ಅಘಟನೆ ಘಟನಾವಳಿಗಳ ನೀರು ಹರಿದು ಹೋಗಿದ್ದರೂ, ಇಂದಿಗೂ ನಮ್ಮಿಬ್ಬರ ಭೇಟಿ ಅದಾಗ, ಆರಂಭದ ಮಾತು ಈ ಘಟನೆ ಯಿಂದಲೇ. ಎಷ್ಟು ಸೊಗಸು - ಎಂಥಾ ನನಸು.

ಸನ್ಮಾನ್ಯರ ತೀರದ ಸುವಿಚಾರ ದಾಹ, ಸುಜ್ಞಾನಾಸಕ್ತಿ ವಿನಯಪೂರಿತ ವ್ಯಕ್ತಿತ್ವಕ್ಕೆ, ಮಣಿಮಕುಟ ಪ್ರಾಯವಾದ ನಿರಾಡಂಬರ ಸರಳ ಜೀವನ, ಇಂದಿನ ಯುವ ಪೀಳಿಗೆಗೆ

ಮರೆಯಲಾರದ-ಮರೆಯಬಾರದ ಮೇಲ್ಪಂಕ್ತಿ. ಎಲ್ಲಿ ಒಂದು ಚಿಂತನಶೀಲ, ವಿಚಾರಪೂರಿತ ಸಭೆ ನಡೆದಿದೆ ಅಂದರೆ, ಅಲ್ಲಿ ಮುಂದಿನ ಸಾಲಿನಲ್ಲಿ ಕೈಗೋಲಿನ ಮೇಲೆ ಮುಖ ಊರಿ ಕೂತು, ಆಸಕ್ತಿಯಿಂದ, ಏಕಾಗ್ರ ಚಿತ್ತದಿಂದ ಆಲಿಸುತ್ತಿರುವ ನಿಟ್ಟೂರರನ್ನು ನೀವು ಖಂಡಿತಾ ನೋಡಬಹುದು. ಅವರ ೯೯ರ ಹರೆಯದಲ್ಲೂ ಅದನ್ನು ನಾನು ಕಂಡಿದ್ದೇನೆ. ಒಂದೊಂದು ದಿನ ಎರಡೆರಡು ಅಂಥಾ ಸಭೆಗಳಲ್ಲೂ ಅವರನ್ನು ಕಂಡ ನಾನು ಸಖೇದಾಶ್ಚರ್ಯದಿಂದ 'ಆಯಾಸವಾಗುವುದಿಲ್ಲವೇ ಸ್ವಾಮಿ' ಎಂದಾಗ, ಮುಖದ ಮೇಲಿನ ಮಂದಹಾಸ, ಮುಗುಳ್ನಗು ಮರು ಪ್ರಶ್ನೆ ಹಾಕುತ್ತಿತ್ತು "ಯಾರಿಗೆ ಆಯಾಸ" ಅಂತ. ಅದನ್ನು ನೋಡಿ ನಾನು ಎಷ್ಟೋ ಸಾರಿ ಅಂದುಕೊಂಡಿದ್ದೇನೆ-ಹೇಳಿಯೂ ಇದ್ದೇನೆ, ಮನುಷ್ಯನ ಕಲಿಕೆಗೆ ಸಾವೇ ಸರಹದ್ದು ಎಂದು. ಕಾರಣ ನಾವು ಸಾಯುವುದನ್ನೂ ಕಲಿಯಲೇಬೇಕಲ್ಲಾ, ಯಾರಿಗೆ ತಾನೇ ಸತ್ತು ಅಭ್ಯಾಸವಿರುತ್ತೆ ಹೇಳಿ? ಕಲಿಕೆಗೆ ಕೊನೆಯಿಲ್ಲ, ಆಸಕ್ತಿಗೆ ಅಂತ್ಯವಿಲ್ಲ. ಉತ್ಸಾಹ ಉಡುಗಿಲ್ಲ, ಮನಸ್ಸಿಗೆ ಮುಪ್ಪಿಲ್ಲ, ದೇಹಕ್ಕೆ ದಣಿವಿಲ್ಲ, ಈ ಎಲ್ಲದರ ಅಭಿವ್ಯಕ್ತಿ ನಮ್ಮ-ನಿಮ್ಮ ನಿಟ್ಟೂರರು ಎಂದರೆ ಅತಿ ಕಮ್ಮಿಯೇ ಹೇಳಿದಂತೆ ಎಂದು ನನ್ನ ಭಾವನೆ.

ಕರ್ನಾಟಕ ರಾಜ್ಯದ ನ್ಯಾಯಾಂಗ ಶಿಖರವನ್ನೂ, ಕಾರ್ಯಾಂಗದ ಅತ್ಯುನ್ನತ ಪದವಿಯನ್ನೂ, ಅತ್ಯಂತ ಯಶಸ್ವಿಯಾಗಿ, ಅನ್ಯರಿಗೆ ಅನುಕರಣೀಯವಾಗಿ, ಸಕಲರಿಗೂ ಪ್ರಾತಃ ಸ್ಮರಣೀಯವಾಗಿ, ನಿಭಾಯಿಸಿ ತೋರಿಸಿರುವ ಮಾನ್ಯ ನಿಟ್ಟೂರರನ್ನು ಸಂಪರ್ಕಿಸಿದವರೆಲ್ಲಾ, ಪ್ರತಿ ಭೇಟಿಯಲ್ಲೂ, ಪ್ರತಿ ನುಡಿಯಲ್ಲೂ, ಪ್ರತಿ ನಡೆಯಲ್ಲೂ, ಮಹಾನ್ ಮಾನವತೆಯ ಸಂದೇಶವನ್ನು, ಆದರ್ಶಗಳನ್ನು, ಹೊತ್ತು ಬರುವುದರಲ್ಲಿ ಸಂದೇಹವೇ ಇಲ್ಲ. ಅವರ ಕಾಲದವರು ನಾವು-ಅವರೊಡನೆ ಸಂಭಾಷಿಸಿದವರು ನಾವು, ಅವರನ್ನು ಕಂಡು ಕೈ ಮುಗಿದು ಹರಕೆ ಹೊತ್ತವರು ನಾವು ಎಂದು ಹೇಳಿಕೊಳ್ಳುವ ಸೌಭಾಗ್ಯವಂತರು ನಾವು. ಇದಕ್ಕಿಂತಾ ಹಿರಿದಾದ ಹೆಮ್ಮೆ ಬೇಕೆ? ಅದೇ ನಮ್ಮ ಶ್ರೇಷ್ಠ ಹಿರಿಮೆ-ಅದೇ ನಮ್ಮ ಈ ಜನ್ಮದ ದೊಡ್ಡ ಗರಿಮೆ.

ನಮ್ಮೆಲ್ಲರ ಶ್ರೇಷ್ಠ ಮಾನವತಾವಾದಿ ಸನ್ಮಾನ್ಯ ನಿಟ್ಟೂರರನ್ನು 'ಶ್ರೀಮಾತಾ' ಹರಸಲಿ. 'ಕ್ರಿಯಾ ಸಿದ್ಧಿಸ್ಸತ್ವೆ ಭವತಿ ಮಹತಾನ್ನೋಪಕರಣೆ' ಎಂಬ ಆರ್ಯೋಕ್ತಿಯ ಅವತಾರ ಪುರುಷ ಶ್ರೀ ನಿಟ್ಟೂರರು ನಿತ್ಯ ನಿರಂತರ ಆರೋಗ್ಯ ಭಾಗ್ಯ ಪರಿಪೂರ್ಣರಾಗಿ ನಮ್ಮೊಂದಿಗೆ ನಡೆಯುತ್ತಲೇ ಬರಲಿ ಎಂದು ಬಯಸುತ್ತಾನೆ ಈ ಸಜ್ಜನ ವಿಧೇಯ.



ನಿರ್ಮಲ ಮನಸ್ಸಿನ ನಿರಂತರ ಜ್ಞಾನದಾಹಿ :

## ನ್ಯಾಯಮೂರ್ತಿ ಶ್ರೀ ನಿಟ್ಟೂರು ಶ್ರೀನಿವಾಸರಾಯರು.

. . . . . . . . . . . . . . . . . . . . . . . . . . ✍ *ಪ್ರೊ|| ದೊಡ್ಡ ರಂಗೇಗೌಡ**

ನಮ್ಮ ನಲ್ಮೆಯ "ಬೆಂಗಳೂರು ಮಹಾನಗರ"ದಲ್ಲಿ ನಾನು ಕಳೆದ ನಾಲ್ಕು ದಶಕಗಳಿಂದಲೂ ನ್ಯಾಯಮೂರ್ತಿ ಶ್ರೀ ನಿಟ್ಟೂರು ಶ್ರೀನಿವಾಸರಾಯರನ್ನು ನೋಡುತ್ತಾ ಬಂದಿದ್ದೇನೆ. ಸರಳ ಜೀವನಕ್ಕೆ ಮತ್ತೊಂದು ಹೆಸರು ನಮ್ಮ ನಿಟ್ಟೂರು ಅವರು. ಜನೋಪಕಾರಿ ಶ್ರೀ ದೊಡ್ಡಣ್ಣ ಶೆಟ್ಟರ ಶ್ರೀ.ಲ.ನ. ಧರ್ಮಸಂಸ್ಥೆಯ ಕಟ್ಟಡದಲ್ಲಿ ಇದ್ದ ಅವರ ಕಾರ್ಯಾಲಯಕ್ಕೆ ಅವರ ಇರುವಿಕೆಯಿಂದ ಒಂದು ಮಹಾನ್ ಘನತೆಯೇ ಪ್ರಾಪ್ತವಾಗಿತ್ತು. ಅವರು ಎಂಥ ಸರಳ ವ್ಯಕ್ತಿ ಎಂದರೆ ಯಾರು ಬೇಕಾದರೂ ಅವರನ್ನು ಮಾತಾಡಿಸಬಹುದು. ಎಲ್ಲರ ಜೊತೆಯಲ್ಲೂ ಅಕ್ಕರೆಯಿಂದಲೇ ಅವರು ಮಾತಾಡುತ್ತಾರೆ. ಅವರ ಮಾತಿನಲ್ಲಿ ನಾನಂತೂ ಜೀವನ ಪ್ರೀತಿಯನ್ನೂ ಜನ ಪ್ರೀತಿಯನ್ನೂ ಸಮೃದ್ಧವಾಗಿಯೇ ಕಂಡಿದ್ದೇನೆ. ಅವರ ಜೊತೆ ಸಂಭಾಷಣೆಗೆ ನಾವು ತೊಡಗಿದರೆ ನಮ್ಮ ಜ್ಞಾನಕೋಶವೇ ವಿಸ್ತಾರವಾಗುತ್ತದೆ. ತಮಗೆ ಗೊತ್ತಿರುವ ಸಂಗತಿಗಳನ್ನು ಇತರರಿಗೆ ತಿಳಿಸುವುದರಲ್ಲಿ ಅವರು ಯಾವತ್ತೂ ಶ್ರೀಗುರುವಿನ ಸ್ಥಾನದಲ್ಲೇ ಇದ್ದಾರೆ. ಅವರ ತಿಳಿವಳಿಕೆ ಅಪಾರ ವಾರಿಧಿಯ ಹಾಗೆ. ಓದುವುದು, ಅರಿವಿನ ಪರಿಧಿಯನ್ನು ವಿಸ್ತರಿಸುವುದು, ಅಭಿರುಚಿಯನ್ನು ನಿರಂತರವಾಗಿ ಬೆಳೆಸಿಕೊಳ್ಳುವುದು, ಇತರರು



* ೯೮/೧, ಸನ್ನಿಧಿ, ೨ನೇ ಕ್ರಾಸ್
ಡಾ. ಮಾಸ್ತಿ ವೆಂಕಟೇಶ ಅಯ್ಯಂಗಾರ್ ರಸ್ತೆ
ಗವೀಪುರ ಬಡಾವಣೆ, ಬೆಂಗಳೂರು - ೫೬೦೦೧೯

ಹೇಳುವುದನ್ನು ತಾವು ಸಾವಧಾನದಿಂದ ಕೇಳುವುದು ಅವರ ಜಾಯಮಾನ. ಹೀಗಾಗಿ ಅವರು ಯಾವಾಗಲೂ -"ತುಂಬಿದ ಕೊಡ". ಜ್ಞಾನಮುಖಿ ಅಷ್ಟೇ ಅಲ್ಲ "ಸದಾ ಸಾಹಿತ್ಯ ಮುಖಿ". ಸಭೆ ಸಮಾರಂಭಗಳಲ್ಲಿ ಅವರು ಇಳಿವಯಸ್ಸಿನಲ್ಲೂ ಪಾಲ್ಗೊಳ್ಳುತ್ತಾರೆ- ಸಕ್ರಿಯವಾಗಿ. ವೇದಿಕೆಯ ಮೇಲೆ ಅವರು ಎಂದೂ ಎಲ್ಲೂ ಬುರುಡೆ ಹೊಡೆದವರಲ್ಲ. ಯದ್ವಾತದ್ವಾ ರೈಲು ಬಿಟ್ಟವರಲ್ಲ! ಸಭೆಯ ವಿಷಯಕ್ಕೆ ಅನುಗುಣವಾಗಿಯೇ ಅವರು ನಿರರ್ಗಳವಾಗಿ ಮಾತನಾಡಿರುವುದನ್ನು ಅನೇಕ ಬಾರಿ ಸಹೃದಯ ಪ್ರೇಕ್ಷಕನಾಗಿ ಕೇಳಿಸಿ ಕೊಂಡಿದ್ದೇನೆ. ಅವರ ಅಪರಂಜಿ ವಿಚಾರಗಳಿಗೆ ತಲೆದೂಗಿದ್ದೇನೆ. ಅವರ ಘನ ವ್ಯಕ್ತಿತ್ವಕ್ಕೆ ಮನಸಾರೆ ಮಣಿದಿದ್ದೇನೆ. ಅವರು ಎಲ್ಲೇ ಮಾತಾನಾಡುತ್ತಿರಲಿ, ಅಲ್ಲಿ ಅವರು ಎಂದೂ ಬಣ್ಣ ಕಟ್ಟಿ ಮಾತಾಡಿದ್ದನ್ನು ಕಂಡಿಲ್ಲ. ವಿಷಯಗಳು ನೇರ; ಸ್ಪಷ್ಟ. ಖಚಿತತೆ ಅವರ ಮಾತಿನ ಶೈಲಿ, ಯಾವ ಗೊಂದಲವೂ ಅಲ್ಲಿರಲಿಕ್ಕೆ ಸಾಧ್ಯವೇ ಇಲ್ಲ. ತನ್ನ ಅಂತರಂಗದ ಅಭಿಪ್ರಾಯಗಳನ್ನು ಸರಿಯಾಗಿ ಅಭಿವ್ಯಕ್ತಿಸಬೇಕೆಂಬುದೇ ಅವರ ಶ್ರದ್ಧಾವಂತ ಕಾಳಜಿ. ಇತರರು ತನ್ನ ಅನ್ನಿಸಿಕೆಗಳನ್ನು ತಿಳಿಯಬೇಕೆಂಬುದೇ ಅವರ ಅಪ್ಪಟ ಪ್ರಾಮಾಣಿಕತೆ. ನಿಟ್ಟೂರು ಸಭೆಯಲ್ಲಿ ಅಧ್ಯಕ್ಷ ಪೀಠದಿಂದ ಮಾತನಾಡುತ್ತಾರೆಂದರೆ ಅದು ಆ ವಿಷಯದ ಮೇಲೆ ಅಥೆಂಟಿಕ್ ಅಭಿಪ್ರಾಯವಾಗಿರುತ್ತದೆ. ಅಧಿಕೃತತೆಯ ಮುದ್ರೆ ಅವರ ಮಾತಿಗೆ ಇದ್ದೇ ಇರುತ್ತದೆ. ಇದು ಅವರು ರೂಢಿಸಿಕೊಂಡು ಬಂದ ಸಂವಹನದ ಸರಿಯಾದ ಧಾಟಿ. ನಿಟ್ಟೂರು ಅವರು ಜಗತ್ತಿನ ಎಲ್ಲ ಆಗುಹೋಗುಗಳನ್ನು ತಿಳಿದುಕೊಂಡು ತಮ್ಮದೇ ಆದ ಖಚಿತವಾದ ಸ್ವೋಪಜ್ಞ ಅಭಿಪ್ರಾಯವನ್ನು ಅವರು ರೂಪಿಸಿಕೊಂಡಿರುತ್ತಾರೆ. ಅದು ಅವರ ಸುದೀರ್ಘ ಚಿಂತನ-ಮಂಥನಗಳಿಂದ ತರ್ಕಬದ್ಧವಾಗಿ ಮೂಡಿದ್ದು. ನಿಟ್ಟೂರರು ಎಲ್ಲೇ ಆಗಲಿ, ಎಂದೇ ಆಗಲಿ ಅಭಿಪ್ರಾಯ ಹೇಳಲು ಆತುರ ಪಟ್ಟಿದ್ದನ್ನು ನಾನು ನೋಡಿಯೇ ಇಲ್ಲ. ಅಲ್ಲಿ ಯಾವುದೇ ಆವೇಶವಿರುವುದಿಲ್ಲ. ಸಮದರ್ಶಿಯ ಹಾಗೆ ಅವರ ಮಾತು ತೂಕಬದ್ಧವಾಗಿರುತ್ತದೆ; ತರ್ಕಬದ್ಧವಾಗಿರುತ್ತದೆ; ಹೃದಯವಂತಿಕೆಯಿಂದಲೂ ಕೂಡಿರುತ್ತದೆ. ಅದು ನಿಟ್ಟೂರು ವ್ಯಕ್ತಿತ್ವದ ಛಾಪು.

ನಾನು ಅವರನ್ನು ಸಾಕಷ್ಟು ಸಾರಿ ಸಮಾರಂಭಗಳ ಅಧ್ಯಕ್ಷತೆಗೆ ಆಹ್ವಾನಿಸಿದ್ದೇನೆ. ಪುಸ್ತಕಗಳ ಬಿಡುಗಡೆಗೆ ಕರೆದಿದ್ದೇನೆ. ಉತ್ಸವಗಳ ಉದ್ಘಾಟನೆಗೆ ಕರೆದಿದ್ದೇನೆ. ದೂರವಾಣಿ ಯಲ್ಲೇ ಆ ದಿನ ಆ ವೇಳೆಗೆ ತಾವು ಬಿಡುವಿದ್ದಲ್ಲಿ ಒಪ್ಪಿಕೊಳ್ಳುವ ಸಾಚಾ ವ್ಯಕ್ತಿ ಅವರು. ಯಾವ ಪೋಜೂ ಇಲ್ಲ, ಎಳ್ಳಷ್ಟೂ ಡಂಭಾಚಾರವಿಲ್ಲ. ಅವರು ಸುಳ್ಳು ಹೇಳಿದ್ದನ್ನೇ ನಾನು ನೋಡಿಲ್ಲ. ಅವರನ್ನು ಹತ್ತಿರದಿಂದ ಬಲ್ಲವನಾಗಿ ನಾನು ಈ ಮಾತನ್ನು ಆತ್ಮೀಯತೆ ಯಿಂದ ಬರೆಯುತ್ತಿದ್ದೇನೆ.

ಸಭೆಗಳ ಅಧ್ಯಕ್ಷರಾಗಿ ಅವರ ಕಾರ್ಯ ನಿರ್ವಹಣೆ ಅತ್ಯಂತ ಉತ್ತಮ ಮಟ್ಟದ್ದು. ಎಲ್ಲರೂ ಮಾತನಾಡುವುದನ್ನೂ ಸಾವಧಾನವಾಗಿ ಕೇಳಿಸಿಕೊಳ್ಳುತ್ತಾರೆ. ಅವರ ನೆನಪಿನ ಶಕ್ತಿ ಅತ್ಯದ್ಭುತ. ಅವರು ಯಾವುದೇ ಚೀಟಿಯಲ್ಲಿ ಒಂದು ಅಂಶವನ್ನೂ ಗುರುತು ಹಾಕಿಕೊಳ್ಳದೆಯೇ ಸರಿಯಾಗಿ ಕರಾರುವಾಕ್ಕಾಗಿ ಅಂಕಿ ಅಂಶಗಳ ಸಮೇತ ಗಣಕ ಯಂತ್ರದಂತೆ (ರೆಡಿ ರೆಕನರ್) ಉಲ್ಲೇಖಿಸಬಲ್ಲರು. ಇದು ಅವರ ಚುರುಕು ಶ್ರವಣೇಂದ್ರಿಯದ ಹಾಗೂ ಚೂಪು ಬುದ್ಧಿಮತ್ತೆಯ ಫಲ. ಒಂದು ಸಾರಿ ಒಬ್ಬ ಪ್ರತಿಭಾವಂತರ ಪರಿಚಯವಾದರೆ ಮುಗಿಯಿತು, ಮತ್ತೆ ಅವರ ಜೀವನದಲ್ಲಿ ಎಷ್ಟು ಸಾರಿ ಅವರ ಭೇಟಿಯಾದರೂ ಇನ್ಷಿಯಲ್ ಸಮೇತ ಅವರ ಹೆಸರನ್ನು (ಜ್ಞಾಪಕ ಶಕ್ತಿ ಅನನ್ಯ) ಪ್ರೀತಿಯಿಂದ ಕರೆಯುತ್ತಾರೆ. ಅವರ ಸಂಬೋಧನಾ ರೀತಿಯೂ "ಜಂಟಲ್‌ಮನ್ ಬಿಹೇವಿಯರ್" ರೀತಿಯೇ. ಅವರ ನಾಗರಿಕಪ್ರಜ್ಞೆ ಇತರರಿಗೆ ಮಾರ್ಗದರ್ಶಿಯಾಗಿರುವಂಥದ್ದು. ಅವರನ್ನು ನಾವು ಅನುಕರಿಸಿದರೆ ಒಳ್ಳೆಯದು ಎಂಬಷ್ಟು ಅದು ಆದರ್ಶಪ್ರಾಯವಾಗಿರುತ್ತದೆ. ಅವರದು ಅಪೂರ್ವ ಸಹಜ ನಡವಳಿಕೆ. ಅಲ್ಲಿ ಯಾವುದೇ ಎಗ್ಗಿರುವುದಿಲ್ಲ. ಮಗುವಿನ ಹಾಗೆ ಮುಗ್ಧ ಮನಸ್ಸು ಅವರದು. ಹತ್ತಿರದಿಂದ ಬಲ್ಲವರೇ ಬಲ್ಲರು ಅವರ ಗಾಂಭೀರ್ಯದ ಒಡನಾಟ. ಅದು ಅವರ ಶುದ್ಧ ಅಂತಃಕರಣವನ್ನೇ ನಿಚ್ಚಳವಾಗಿ ಸಾರುತ್ತದೆ.



ತಮಗೆ ಸರಿ ಎಂದು ಮನವರಿಕೆಯಾದರೆ ಸಾಕು-ಯಾರಿಂದಲೂ ಹೇಳಿಸಿಕೊಳ್ಳದೆ ಒತ್ತಾಯ ಮಾಡಿಸಿಕೊಳ್ಳದೆ-ತಮ್ಮ ಅಭಿಪ್ರಾಯವನ್ನು ಸಾರ್ವಜನಿಕರಿಗೆ ತಿಳಿಯಪಡಿಸುವುದು ಅವರ ಆಸಕ್ತಿಯ ಜಾಯಮಾನ.

ಯಾವ ಸಾಹಿತಿ ತಮ್ಮ ಕೃತಿಯನ್ನು ಪ್ರೀತಿಯಿಂದ ಕೊ[illegible]ರೂ ಮರೆಯದೆ ಓ[illegible], ಸಾಹಿತಿಗೆ ತಮ್ಮ ಪ್ರತಿಕ್ರಿಯೆ ತಿಳಿಸುವ ಪರಿಪಾಠ ಅವರದು. ಅದು ಉಡಾಫೆಯ[illegible]ಲ್ಲ, ನಿಟ್ಟೂರರ ಜೀವನ ವಿಧಾನ. ಓದುವುದು ಅವರಿಗೆ ಅತ್ಯಂತ ಪ್ರಿಯವಾದ ವಿಷಯ. ದುಂಬಿಯ ಹಾಗೆ ಜ್ಞಾನ ಸೌರಭವನ್ನು ಸದಾ ಹೆಕ್ಕಿ ಹೆಕ್ಕಿ ವಿದ್ಯೆಯ ಸಂಚಯ ಮಾಡಿಕೊಳ್ಳುವ "ಮಧುವ್ರತ" ಅವರು.

ಅವರು ಒಳ್ಳೆಯ ಮಾತುಗಳನ್ನೇ ಆಡುತ್ತಾರೆ. ಅದು ಅವರ ನಿಲುವು. ಅವರ [illegible] ದೃಷ್ಟಿಕೋನ, ಇತ್ಯಾತ್ಮಕ ನೋಟ ಅವರದು. ಟೀಕಿಸುವ ಸಂದರ್ಭವಿದ್ದಾಗಲೂ ಅವರು ಮೃದುವೇ, ಉಗ್ರವಲ್ಲ. ಸಾಧು ಸ್ವಭಾವ. ಹಾಗೆಂದು ಅವರು ಎಲ್ಲೂ ಹೇಳಬೇಕಾ[illegible]ನ್ನು ಹೇಳದೆ ಬಿಟ್ಟಿಲ್ಲ.

ನಿಟ್ಟೂರರು ನಿರಂತರವಾಗಿ ಸಮಾಜಮುಖಿಗಳು. ಸಾರ್ವಜನಿಕ ಜೀವನದ[illegible]

ಪಾಲ್ಗೊಳ್ಳುವಿಕೆ ನೂರಕ್ಕೆ ನೂರು ಪಾಲು ನಿಷ್ಠೆಯಿಂದ ಕೂಡಿದ್ದು. ಅವರು ಸತ್ಯವ್ರತ; ಧೀಮಂತ; ಸ್ನೇಹಜೀವಿ. ಗೋಲ್‌ಮಾಲ್ ಎಳ್ಳಷ್ಟೂ ಇರದ ಪ್ರಾಮಾಣಿಕ ವ್ಯಕ್ತಿ.

ಅವರು ಪ್ರತಿಭಾವಂತರಿಗೆ ಅನೇಕ ಸಹಾಯ ಮಾಡಿದ್ದಾರೆ. ಆ ನಿಟ್ಟಿನಲ್ಲಿ ಅವರದು "ವರದ ಹಸ್ತ". ದುರ್ಬಲ ವರ್ಗದಿಂದ ಬಂದ ಪ್ರತಿಭಾವಂತರಿಗೆ ಅವರ ಶಿಫಾರಸ್ಸು ಪತ್ರಗಳೇ ತವನಿಧಿಗಳು. ಸೂರ್ಯತೇಜಸ್ಸಿನಂತೆ ಆ ಪ್ರಭಾವ ಪ್ರಖರ. ಅವರ ಕಾಗದಕ್ಕೆ ಸಮಾಜದಲ್ಲಿ ಸರ್ಕಾರದಲ್ಲಿ ಅಷ್ಟು ಮನ್ನಣೆ, ಹಾಗೆಂದು ಎಂದೂ ಅವರು ಯಾರನ್ನೂ ಸತಾಯಿಸಿಲ್ಲ. ತಿರುಗಿಸಿಕೊಂಡಿಲ್ಲ ಮತ್ತೆ ಮತ್ತೆ. ಒಬ್ಬ ಶ್ರೀಸಾಮಾನ್ಯನಂತೆಯೇ ಅವರು ನಡೆದುಕೊಳ್ಳುತ್ತಾರೆ, ಬಿಂಕವಿಲ್ಲ. ಅವರು ಸಲಹೆಗಾರರಾಗಿರುವ ಸಂಸ್ಥೆಗಳು ನಿಜಕ್ಕೂ ಪುಣ್ಯ ಮಾಡಿವೆ. ಅವು ಉಚ್ಛ್ರಾಯ ಸ್ಥಿತಿಗೆ ಬರಲು ನಿಟ್ಟೂರರ ಮಾರ್ಗದರ್ಶನ ಜ್ಞಾನಧಾರೆಯೇ ಸರಿ, ಲೆಕ್ಕ ಪತ್ರಗಳಲ್ಲಿ ಅವರು ಕರಾರುವಾಕ್ಕು, ಶುದ್ಧ ಹಸ್ತರು, ಸದಾ ಅವರು ಸ್ವದೇಶಿ ಪ್ರಿಯರು. ಉಜ್ವಲ ರಾಷ್ಟ್ರಾಭಿಮಾನಿಗಳು. ದೇಶದ ಬಗೆಗೆ ಅವರ ಮಾತು ಬತ್ತದ ತೊರೆ, ಅಲ್ಲಿ ಶುದ್ಧ ಚರಿತ್ರೆಯೇ ಅಡಗಿರುತ್ತದೆ.

ಅವರಲ್ಲಿ ತಿಲಮಾತ್ರವೂ ದುರಾಸೆಯಿಲ್ಲ. ಸಭೆಗೆ ಬಂದಾಗ ತಿಂಡಿ ಕೊಟ್ಟರೆ ಎಷ್ಟು ಬೇಕೊ ಅಷ್ಟೇ ಸ್ವೀಕರಿಸುವುದು. ತಟ್ಟೆಯಲ್ಲಿ ಬಿಡುವ ಪದ್ಧತಿಯೇ ಇಲ್ಲ. ಹೆಚ್ಚಾಗಿ ಹಾಕಿಸಿಕೊಳ್ಳುವುದೇ ಇಲ್ಲ.

ಸಭೆಗಳಲ್ಲಿ ಅವರು ಶ್ರೀಸಾಮಾನ್ಯನಂತೆ ನಿಂತೇ ಮಾತಾಡುತ್ತಾರೆ. ತಾನು ಹಿರಿಯನೆಂಬ ಗರ್ವವಿಲ್ಲ. ವಯೋವೃದ್ಧರಾದರೂ ಇತರರಂತೆ ತಾನೂ ಒಬ್ಬ ಎಂಬ ಸ್ವ-ವಿಮರ್ಶೆ ಎಂಥವರಿಗೂ ಅನುಕರಣೀಯ. ಈ ಜ್ಞಾನವೃದ್ಧರು ನೂರು ಶ್ರಾವಣ ಕಂಡದ್ದು ಒಂದು ಅಪೂರ್ವ ದಾಖಲೆ. ಈಗಲೂ ಅವರ ಜ್ಞಾಪಕ ಶಕ್ತಿ ಚೆನ್ನಾಗಿದೆ, ಮಾತು ಸ್ಪಷ್ಟವಾಗಿದೆ, ಎಲ್ಲೂ ಅಪ್ಪಿ ತಪ್ಪಿಯೂ ಜುಗುಳುವುದಿಲ್ಲ. ಇಂಥ ಸರಸ್ವತಿಯ ವರಪುತ್ರರನ್ನು ಕಂಡಾಗ, ಪ್ರಾಮಾಣಿಕರನ್ನು ಈ ಶತಮಾನದಲ್ಲೂ ಕಣ್ಣಾರೆ ಕಾಣುತ್ತಿರುವುದೇ ಒಂದು ಸೋಜಿಗ. ಇದು ಅವರ ಜೀವನ ಸಾಧನೆಯೇ. ಇಂಥ ಹಿರಿಮೆಯ ಹಿರಿಯರು ನಮ್ಮ ಸಂಸ್ಕೃತಿಯ ಮೇರು ಶಿಖರ. ಭಾರತೀಯತೆಯ ಪುಟಬಂಗಾರ. ಅವರ ಧೋರಣೆ "ವಿಶ್ವಮಾನವ ಪ್ರಜ್ಞೆ"ಯನ್ನು ಉಳ್ಳದ್ದು. ನಿಟ್ಟೂರುರವರು ನಮ್ಮ ನಾಡಿನ ಆಚಾರ್ಯಪುರುಷ, ನಮ್ಮ ಸುತ್ತಾ ಅಗಣಿತ ಬಡಾಯಿಗಳೇ ಎಲ್ಲೆಲ್ಲೂ ಹೆಜ್ಜೆ ಹೆಜ್ಜೆಗೂ ಕಾಣಿಸುತ್ತಿರುವಾಗ ಈ "ಶಕ ಪುರುಷ" ಮಾನವೀಯತೆಯ ಸಾಕಾರ ಮೂರ್ತಿ. ಇಂಥವರನ್ನು ಕುರಿತು ಬರೆಯುವ ದೆಂದರೆ ನನ್ನ ಲೇಖನಿಯ ಭಾಗ್ಯ.

❑

# ವಿಶ್ವಮಾನವತೆಯತ್ತ - ನಿಟ್ಟೂರು ಶ್ರೀನಿವಾಸರಾಯರು

. . . . . . . . . . . . . . . . . . . . . . . ✍ *ನಿರ್ಮಲಾ ಸಿ. ಯಲಿಗಾರ್**

ಅಪರಮಿತ ದೇಶಭಕ್ತ, ಹಿರಿಯ ಗಾಂಧಿವಾದಿ, ನ್ಯಾಯವಾದಿ, ಕನ್ನಡಪ್ರೇಮಿ-ಹೀಗೆ ಅವರ ಪರಿಚಯದ ಕೊಂಡಿಗಳು ಬೆಳೆಯುತ್ತಾ ಹೋಗುತ್ತವೆ. ಅವರೇ ನ್ಯಾಯವಾದಿ ನಿಟ್ಟೂರು ಶ್ರೀನಿವಾಸರಾಯರು.

ಮಗುವಿನಂತಹ ಮನಸ್ಸಿನಲ್ಲೆ ಅಪಾರ ನಿಷ್ಠುರ ನ್ಯಾಯ ವಾದಿತನ, ಈ ಶತಾಯು ಬೆಳೆದು ಬಂದ.... ನಡೆದು ಬಂದಲ್ಲಿಯ ಹೆಜ್ಜೆಗುರುತುಗಳತ್ತ ನೋಟ ಹರಿಸುವ ಕಿರು ಪ್ರಯತ್ನವೇ ಈ ಲೇಖನ.

೧೯೧೯ರಲ್ಲಿ ಶಿವಮೊಗ್ಗದಿಂದ ಬೆಂಗಳೂರಿಗೆ ಬಂದ ನಿಟ್ಟೂರರನ್ನು ಸೆಳೆದದ್ದು ಸ್ವಾತಂತ್ರ್ಯ ಚಳವಳಿ, ಗಾಂಧೀ ತತ್ವಗಳು. ಕನ್ನಡ ಚಳವಳಿ ಇತ್ಯಾದಿ....ನಂತರ.. ನ್ಯಾಯವಾದಿ ವೃತ್ತಿ ಇವರ ಕನ್ನಡ ಪ್ರೇಮವನ್ನು ಬಿ.ಎಂ.ಶ್ರೀ., ಡಿ.ವಿ.ಜಿ., ಎ.ಆರ್. ಕೃಷ್ಣಶಾಸ್ತ್ರಿ, ವೆಂಕಟಯ್ಯ, ಮಾಸ್ತಿಯಂತಹ ಹಿರಿಯ ಸಾಹಿತಿಗಳು ಮೆಚ್ಚಿಕೊಂಡಿದ್ದಾರೆ. ಕನ್ನಡಕ್ಕಾಗಿ ದುಡಿಯುತ್ತಿದ್ದ. Central College ಕನ್ನಡ ಸಂಘ ಪ್ರಕಟಿಸುತ್ತಿದ್ದ "ಪ್ರಬುದ್ಧ ಕರ್ನಾಟಕ' ಎಂಬ ಪತ್ರಿಕೆಯ ಕಟ್ಟುಗಳನ್ನು ಸೈಕಲ್ ಮೇಲೆ ಹೊರಿಸಿ ಎಲ್ಲ ಕಡೆ ಸುತ್ತಿ ಚಂದಾ ವಸೂಲಿ ಮಾಡಿದ್ದನ್ನು ಡಿ.ವಿ.ಜಿ.ಯವರು ತಮ್ಮ ಉಪನ್ಯಾಸವೊಂದರಲ್ಲಿ ಸ್ಮರಿಸಿ ಕೊಂಡಿದ್ದಾರೆ. ೧೯೩೪ರಲ್ಲಿ ಡಿವಿಜಿಯವರು ವಸಂತ

---

* ೪೪, ಮೊದಲ ಮಹಡಿ, ನ್ಯೂ ಮೌಂಟನ್ ಸ್ಟ್ರೀಟ್
ಜಯನಗರ ಮೊದಲ ಹಂತ (ಪೂರ್ವ). ಬೆಂಗಳೂರು - ೫೬೦ ೦೧೧

ಸಾಹಿತ್ಯೋತ್ಸವ ಪ್ರಾರಂಭಿಸಿದಾಗ ಆ ಯೋಜನೆಯ ನಿರ್ವಹಣೆಯನ್ನು ನಿಟ್ಟೂರರೇ ವಹಿಸಿದ್ದರೆಂಬುದನ್ನು ಇಲ್ಲಿ ಮರೆಯುವಂತಿಲ್ಲ. ಮಾಸ್ತಿಯವರು ಪರಿಷತ್ತಿನ ಅಧ್ಯಕ್ಷ ರಾದಾಗ ಶ್ರೀನಿವಾಸರಾಯರು ಪ್ರಾಂತೀಯ ಸಮಿತಿಯ ಅಧ್ಯಕ್ಷರಾಗಿ ಪರಿಷತ್ತಿನ ಸಂದೇಶಗಳನ್ನು ಗ್ರಾಮಾಂತರ ಪ್ರದೇಶಕ್ಕೆ ಕೊಂಡೊಯ್ಯುವ ಮಹತ್ತರ ಸೇವೆಯನ್ನು ಸಲ್ಲಿಸಿದ್ದಾರೆ. ಬೆಂಗಳೂರಿನಲ್ಲಿ "ಸತ್ಯ ಶೋಧನ " ಪುಸ್ತಕ ಭಂಡಾರ ಪ್ರಾರಂಭಿಸಿದ್ದು ಕನ್ನಡ ಪುಸ್ತಕ ಪ್ರಕಟಣಾ ಲೋಕಕ್ಕೆ ನಿಟ್ಟೂರರ ಕೊಡುಗೆಯನ್ನು ಸಾರುತ್ತದೆ ಅಷ್ಟೇ ಅಲ್ಲ ನಿಟ್ಟೂರರ ಸಾಹಸ ಪ್ರವೃತ್ತಿಯನ್ನು ತೋರಿಸುವುದರ ಜೊತೆಗೆ ಅವರ ಕನ್ನಡ ಪ್ರೇಮ, ಕೇವಲ ಮಾತಿನದ್ದಲ್ಲ ಎಂಬುದಕ್ಕೆ ಸಾಕ್ಷಿ. ಶಿವರಾಮ ಕಾರಂತರ 'ಬಾಲ ಪ್ರಪಂಚ' ಎಂಬ ಗ್ರಂಥ ಪ್ರಕಟಿಸಿರುವುದು, ಮಾಸ್ತಿ, ಶ್ರೀನಿವಾಸಮೂರ್ತಿ, ವೀಸೀ, ಗೊರೂರು, ರಾಜರತ್ನಂ ಮುಂತಾದ ಲೇಖಕರ ಕೃತಿಗಳು ಇವರ ಶ್ರಮದಿಂದ ಪ್ರಕಾಶಗೊಂಡವು. ೧೯೪೭ರ ಸ್ವಾತಂತ್ರ್ಯೋತ್ಸವ ದಿನದಂದು ರಾಜ್ಯದ ಜನತೆಗೆ ಕನ್ನಡದಲ್ಲಿ ಸಂದೇಶವನಿತ್ತ ಪ್ರಥಮ ರಾಜ್ಯಪಾಲರಾದರು. ಇದನ್ನು ಕುರಿತು ಕುವೆಂಪು ಅವರು 'ನನ್ನ ಹೊಟ್ಟೆಗೆ ಅನ್ನಹಾಲು ಹೊಯ್ದಂತಾಯಿತು, ಕನ್ನಡದೀ ನೆಲದ ಜನಕೆ ಕನ್ನಡದ ಸಂದೇಶವನ್ನು ನೀವು ಕೊಟ್ಟಿರೆಂಬುದನೋದಿ' ಎಂದು ಪ್ರಾರಂಭವಾಗುವ ಪದ್ಯವನ್ನು ರಚಿಸಿ ತಮ್ಮ ಸಂತೋಷ ವನ್ನು ವ್ಯಕ್ತಪಡಿಸಿದ್ದಾರೆ. ನಿಟ್ಟೂರರು ಸ್ಥಾಪಿಸಿದ ಸಂಘ ಸಂಸ್ಥೆಗಳು ಹಲವಾರು. ಜೊತೆಗ ಅವರು ಸೇವೆ ಸಲ್ಲಿಸಿದ ಸಂಘ ಸಂಸ್ಥೆಗಳನ್ನು ಹೆಸರಿಸುವುದಾದರೆ: ಗಾಂಧೀ ಸ್ಮಾರಕ ನಿಧಿ, Gandhi Peace Foundation ಬೆಂಗಳೂರಿನ Institute for Social and Economic Change, ಭಾರತೀಯ ವಿದ್ಯಾಭವನ, Mythic Society, National Education Society , ದೆಹಲಿಯ Institute for Constitutional & Parliamentary Studies Law Institute ಧಾರವಾಡದ Institute for Historical Study ಮುಂತಾದ ಅನೇಕ ಸಂಘಗಳಲ್ಲಿ ಸಕ್ರಿಯವಾಗಿ ಭಾಗವಹಿಸಿದ್ದಾರೆ, ತಮ್ಮ ಸೇವೆಯನ್ನು ಸಲ್ಲಿಸಿದ್ದಾರೆ. ಇಂದಿಗೂ ಹಲವಾರು ಸಂಘ ಸಂಸ್ಥೆಗಳಿಗೆ ಸೇವೆ ಸಲ್ಲಿಸು ತ್ತಿದ್ದಾರೆ.

ನಿಟ್ಟೂರರ ಬುದ್ಧಿಶಕ್ತಿ ಅಪರೂಪವಾದದ್ದು. ಅವರ ಸ್ಮರಣ ಶಕ್ತಿ ವಿಸ್ಮಯಕರ ವಾದದ್ದು. ಅವರ ಓದಿನ ವಿಸ್ತಾರ, ಆಳ ಚಿಂತನೆ ಎಲ್ಲವೂ ನಮ್ಮಲ್ಲಿ ಆಶ್ಚರ್ಯವನ್ನುಂಟು ಮಾಡುತ್ತದೆ. ಅವರ ಸ್ನೇಹಿತ ವರ್ಗ ಅಸಂಖ್ಯಾತ. ದೇಶದ ಪ್ರಮುಖನಾಯಕರಿಂದ ಹಿಡಿದು ಬಡರೈತನವರೆಗೆ ಅವರ ಸ್ನೇಹದ ವಿಸ್ತಾರ. ಚೆನ್ನಾಗಿರುವ ಕಾಫಿ ಇಷ್ಟಪಡುವ ಇವರು ದಿನಕ್ಕೆ ಇಂತಿಷ್ಟೇ ದೂರ ನಡೆಯಬೇಕೆಂದು ನಿಯಮವನ್ನು ಪಾಲಿಸುತ್ತಿದ್ದಾರೆ. ಬಸ್ಸು ಕಾರುಗಳಿಗೆ ಕಾಯದೇ ನಡೆದುಕೊಂಡು ಹೋಗುವುದೇ ಅವರಿಗೆ ಪ್ರಿಯ.

ಜೀವನದಲ್ಲಿ ಕಷ್ಟ, ಶ್ರಮ, ರೋಗಗಳಿಗೆ ವಿಚಲಿತವಾಗದ ಅಗಮ್ಯ ಮನಃಶಕ್ತಿ ಇವರ ಸ್ವತ್ತು.

ನಿಟ್ಟೂರರ, ಜೀವನಕ್ರಮ, ಸಾರ್ಥಕ್ಯ ಬದುಕಿನ ಬಗ್ಗೆ ನಮ್ಮಲ್ಲಿ ಕಾಡುವ ಹಲವಾರು ಪ್ರಶ್ನೆಗಳಿಗೆ ಉತ್ತರ ಈ ರೀತಿ ದೊರೆಯುತ್ತವೆ.

೧. ಅದಮ್ಯವಾದ ತಮ್ಮ ಜೀವನೋತ್ಸಾಹ ಕಾರಣವಾದ ಅಂಶಗಳು ಯಾವವಿರಬಹುದು? ಎಂಬುದಕ್ಕೆ ನಿಟ್ಟೂರರ ಉತ್ತರ ಜೀವನ ಉತ್ಸಾಹದೊಂದಿಗಿರಬೇಕು. ಬಾಲ್ಯದಲ್ಲಿ ನನಗೆ ಅಂದರೆ ನನ್ನ ಮೇಲೆ ಹೆಚ್ಚಿನ ಪ್ರಭಾವ ಬೀರಿದವರು ತಂದೆ ಶಾಮಣ್ಣನವರು. ಅವರು ನನಗೆ ಪಠ್ಯಪುಸ್ತಕಗಳ ಜೊತೆಗೆ ಇತರ ಗ್ರಂಥಗಳನ್ನು ಓದಲು ಪ್ರೋತ್ಸಾಹಿಸಿದರು. ನನ್ನ ತಂದೆಯವರಿಂದಲೇ ನನಗೆ ಇತರ ದೇಶಗಳ ಸಾಹಿತ್ಯ, ಸಂಸ್ಕೃತಿ, ಜನಜೀವನ, ಇತಿಹಾಸ ಇವುಗಳಲ್ಲಿ ಆಸಕ್ತಿ ಹುಟ್ಟಿರಬಹುದು. ನನ್ನ ತಂದೆ 'ಹೊಸ ವಿಷಯಗಳಲ್ಲಿ ನಾವು ಯಾವಾಗಲೂ ಆಸಕ್ತಿ ವಹಿಸಬೇಕು'' ಎನ್ನುತ್ತಿದ್ದರು. ನನ್ನ ಸೋದರಮಾವನವರಾದ ಪ್ರೊ|| ಎಂ. ಹಿರಿಯಣ್ಣನವರು, ಹಾಗೆಯೇ ಸರ್.ಎಂ. ವೆಂಕಟರಾವ್, ವಿ. ಸೀತಾರಾಮಯ್ಯ ಅವರ ಆದರ್ಶಗಳು ನನ್ನ ಮೇಲೆ ಪ್ರಭಾವ ಬೀರಿವೆ. ನಾನು ೧೯೧೯ರಲ್ಲಿ ಸ್ವಾತಂತ್ರ್ಯದ ಹೋರಾಟದ ಸಮಯ ಆ ಕಾಲ ಉತ್ಸಾಹದ ಕಾಲ, ಆ ಸಮಯದಲ್ಲಿ ಗಾಂಧೀಜಿಯವರ ಮತ್ತು ಇತರ ಹೋರಾಟಗಾರರ ಉತ್ಸಾಹವನ್ನು ಕಣ್ಣಾರೆ ಕಾಣುವ, ಅದರಲ್ಲಿ ಪಾಲ್ಗೊಳ್ಳುವ ಅವಕಾಶ ನನಗೆ ದೊರಕಿತು.

ತಮ್ಮ ಹೆಸರು ಕನ್ನಡದ ಪುನರುಜ್ಜೀವನ ಚರಿತ್ರೆಯಲ್ಲಿ ಪ್ರಮುಖವಾದದ್ದು, ಇದಕ್ಕೆ ಪ್ರೇರಣೆ ಎಲ್ಲಿಂದಾ? ಎಂಬ ವಿಚಾರಕ್ಕೆ ನಿಟ್ಟೂರರ ಉತ್ತರ...

ಈ ವಿಷಯದ ಬಗ್ಗೆ ಚಿಕ್ಕಂದಿನಿಂದಲೂ ಆಸಕ್ತಿ ಇತ್ತು. ನಾನು ಶಿವಮೊಗ್ಗದಲ್ಲಿ ಓದುತ್ತಿದ್ದಾಗಲೇ ನನ್ನ ಗುರುಗಳಾದ ಎಂ.ಆರ್. ಶ್ರೀನಿವಾಸಮೂರ್ತಿಯವರು ವಿಜ್ಞಾನದ ಉಪಾಧ್ಯಾಯರಾಗಿದ್ದರು. ಅವರು ಕನ್ನಡದ ಏಳಿಗೆಯತ್ತ ನಮ್ಮ ಗಮನ ಸೆಳೆದಿದ್ದರು. ಸಾಹಿತ್ಯ ಪರಿಷತ್ತು, ಸೆಂಟ್ರಲ್ ಕಾಲೇಜು, ಕನ್ನಡ ಸಂಘ ಆಗ ತಾನೇ ಪ್ರಾರಂಭವಾಗಿದ್ದವು. ಅಲ್ಲಿಯ ಕಾರ್ಯಕ್ರಮಗಳಿಗೆ ನಾನು ಹೋಗುವ ಭಾಗ್ಯ ದೊರಕಿತು. ಕನ್ನಡದ ಕೆಲಸದಿಂದ ಜೀವನೋತ್ಸಾಹ ದೊರೆಯಿತು. ಶಿವರಾಮ ಕಾರಂತರ 'ಬಾಲ ಪ್ರಪಂಚ' ಗ್ರಂಥ ಪ್ರಕಟಿಸುವ ಭಾಗ್ಯ ದೊರಕಿತು. ಕನ್ನಡ ನಾಡಿನ ಜನರ ಪ್ರೀತಿ ವಿಶ್ವಾಸಕ್ಕೆ ಪಾತ್ರವಾದದ್ದು ನನ್ನ ಅಂತರಂಗದ ಐಶ್ವರ್ಯವಾಗಿ ಇಂದೂ ನಿಂತಿದೆ ಅನ್ನುತ್ತಾರೆ.

ಗಾಂಧಿಜೀಯವರ ನಿಮ್ಮ ಸಂಪರ್ಕ ಮತ್ತು ಪ್ರಭಾವ?

ಗಾಂಧಿ ದೇಹಾರಾಗ್ಯದ ನಿಮ್ಮಿತ್ತ ಬೆಂಗಳೂರಿನಲ್ಲಿ ನಂದಿ ಬೆಟ್ಟದಲ್ಲಿದ್ದಾಗ ನಾನು ೨೪ ಗಂಟೆಕಾಲ ಗಾಂಧೀಯವರ ಚಟುವಟಿಕೆಯನ್ನು ಗಮನಿಸುವ ಅವಕಾಶ ದೊರಕಿತು. ಒಂದು ನಿಮಿಷವನ್ನೂ ಸಹ ಪೋಲು ಮಾಡದೇ ಶಿಸ್ತಿನ ಜೀವನ ನಡೆಸುತ್ತಿದ್ದದ್ದು ಅವರ ಹಿತಮಿತ ನುಡಿಗಳು. ತಮ್ಮ ಸುತ್ತಮುತ್ತಲಿನ ಜನ ಕೆಲಸ ಮಾಡದೇ ಹೋದರೆ ತಾವೇ ಖುದ್ದಾಗಿ ಕೆಲಸ ಮಾಡುತ್ತಿದ್ದದ್ದು. ನೈರ್ಮಲ್ಯದ ವಿಷಯಕ್ಕೆ ಅವರು ಕೊಟ್ಟಿರುತ್ತಿದ್ದ ಗಮನ ಇವೆಲ್ಲವುಗಳನ್ನು ಈಗಷ್ಟೆ ನಡೆದುಹೋದ ಹಾಗೆ ನಿಟ್ಟೂರರು ನೆನಪಿಸಿ ಕೊಳ್ಳುತ್ತಾರೆ.

ತುಂಬಾ ಸರಳವೆನಿಸುವ ಜೀವನ ಸಿದ್ಧಾಂತಗಳನ್ನು ಅದರಿಂದಲೇ ಜೀವನ ಸಾರ್ಥಕ್ಯವನ್ನು ಪಡೆದುಕೊಂಡವರು ನಿಟ್ಟೂರು ಶ್ರೀನಿವಾಸರಾಯರು. "ಮರ್ತ್ಯಲೋಕ ವೆಂಬುದು ಬೇರಿಲ್ಲ ಕಾಣಿರೋ ಸತ್ಯವನು ನುಡಿವುದೇ ಮರ್ತ್ಯಲೋಕ, ಆಚಾರವೇ ಸ್ವರ್ಗ, ಅನಾಚಾರವೇ ನರಕ, ಇದನ್ನು ಪಾಲಿಸಿ ಇಲ್ಲಿ ಸಲ್ಲುವವರು ಎಲ್ಲೆಲ್ಲೂ ಸಲ್ಲುವರು. ಇಲ್ಲಿ ಸಲ್ಲದವರು ಎಲ್ಲಿಯೂ ಸಲ್ಲರು ಎಂಬ ತತ್ವವನ್ನು ನಿಷ್ಠೆಯಿಂದ ಪಾಲಿಸಿಕೊಂಡು ಬಂದವರು.

ವಿಶ್ವಮಾನವನಾಗುವ ಕನಸನ್ನು ಹೊತ್ತು ಈ ಒಂದು ಕ್ರಾಂತಿಕಾರಿ ವಿಚಾರ ಮೊದಲು ಮಾನವನ ಎದೆಯಾಂತರಾಳದಿಂದ ಪ್ರಾರಂಭವಾಗಬೇಕು. ನಂತರ ಕುಟುಂಬ, ಸಮಾಜ, ನಾಡು, ಭಾಷೆ, ದೇಶ ನಂತರ ವಿಶ್ವ....ಹೀಗೆ ತನ್ನ ವಿಸ್ತಾರವನ್ನು ಹೆಚ್ಚಿಸುತ್ತಾ ಹೋಗಬೇಕು ಎಂಬುವ ನಂಬಿಕೆಯಲ್ಲಿ ವಿಶ್ವಾಸವನ್ನಿಟ್ಟವರು.

ಇಂತಹ ವಿಶ್ವಮಾನವ ನಮ್ಮೆಲ್ಲರ ಮಧ್ಯೆ ಇರುವುದು ನಮ್ಮ ಭಾಗ್ಯ. ಇಂತಹ ಭವ್ಯ ವ್ಯಕ್ತಿತ್ವದ ಕಾಂತಿ, ಪರಿಮಳ, ನೆರಳು ಎಲ್ಲರಿಗೂ ದೊರೆಯುವಂತಾಗಲಿ. ದೀಪದಿಂದ ದೀಪ ಬೆಳಗುವಂತೆ, ನೂರರ ನಿಟ್ಟೂರರಂತಹ ನೂರಾರು, ಸಾವಿರಾರು ನಿಟ್ಟೂರರು ನಮ್ಮ ಮಧ್ಯ ಮೂಡಿಬರಲಿ ಎಂಬ ಆಶಯ.



## "ಜೀವನದರ್ಶಿ"

(ನ್ಯಾಯಮೂರ್ತಿ ನಿಟ್ಟೂರು)

. . . . . . . . . . . . . . . . . . . . . . . ✍ ಕೆ.ಎಸ್. ಎಲ್. ಸ್ವಾಮಿ (ರವಿ)*

- ನಿಟ್ಟೂರು ಶ್ರೀನಿವಾಸರಾಯರ ಬಗ್ಗೆ ಬರೆಯುವ ಅರ್ಹತೆ ನನಗಿಲ್ಲ. ನಿಟ್ಟೂರರ ಜೀವಿತ ಅವಧಿಯಲ್ಲಿ ನಾನೂ ಇದ್ದೆ ಎಂಬ ಹೆಗ್ಗಳಿಕೆ ನನ್ನದು. ಏಕೆಂದರೆ ಅವರ ಜೀವನ ಚರಿತ್ರೆಯ ದಾಖಲಾತಿಯ ಸಂದರ್ಭದಲ್ಲಿ ನನ್ನ ಹೆಸರೂ ದಾಖಲೆಯನ್ನು ಸೇರುವುದಲ್ಲ ಅದೇ ನನ್ನ ಪುಣ್ಯ. ಭಾಗ್ಯ.
- ಪ್ರತಿನಿತ್ಯ ಪ್ರಾತಃಕಾಲ ಸೂರ್ಯೋದಯ ಹೇಗೆ ತಪ್ಪದೋ ಹಾಗೆ ಪ್ರತಿ ಸಂಜೆ ಬೆಂಗಳೂರಿನ ಯಾವುದೇ ಧಾರ್ಮಿಕ, ಸಾಂಸ್ಕೃತಿಕ ಸಾಮಾಜಿಕ-ಕಾರ್ಯಕ್ರಮದಲ್ಲಿ ನಿಟ್ಟೂರು ಶ್ರೀನಿವಾಸರಾಯರ ದರ್ಶನ ಭಾಗ್ಯ ಖಚಿತ.
- ಅತ್ಯಂತ ಸರಳ, ಸಹಜ, ಸಾಧಾರಣ ರೀತಿಯಲ್ಲಿ ಅವರು ನಡೆದು ಬಂದಿರುವ ದಾರಿ ಪ್ರತಿಯೊಬ್ಬ ಮಾನವನಿಗೂ ಅನುಕರಣನೀಯ.
- ಅವರ ತಿಳುವಳಿಕೆ, ನಡವಳಿಕೆ ಆದರ್ಶಪ್ರಾಯ.
- ಅವರ ತಾಳ್ಮೆ, ಸಹನೆ, ಮೃದುಸ್ವಭಾವ, ಅವರ ಜ್ಞಾನಶಕ್ತಿ, ಅವರ ನೆನಪಿನ ಕಣಜದಿಂದ ಮರೆಯದಿರುವ ವ್ಯಕ್ತಿಗಳು, ವ್ಯಕ್ತಿ ವಿಚಾರಗಳು ಅವರ್ಣನೀಯ.
- ಅವರ ಸಮಯ ಪ್ರಜ್ಞೆ, ಶಿಸ್ತು, ನಿಯಮ, ನಿಷ್ಠೆಗಳು ಎಲ್ಲರೂ ಅಭ್ಯಾಸ ಮಾಡಬೇಕಾದ ಕಾಲನಿಯಮ.

---

* ೧೭೨೪, ೭ನೇ ಕ್ರಾಸ್, ೬ನೇ 'ಬಿ' ಮುಖ್ಯರಸ್ತೆ, ಆರ್.ಪಿ.ಸಿ.ಬಡಾವಣೆ ವಿಜಯನಗರ, ಬೆಂಗಳೂರು - ೫೬೦ ೦೪೦

- ಅವರ ಅರಿವಿಗೆ, ಬದುಕಿಗೆ, ನಮ್ಮ ನುಡಿ ನಮನವೇ ವಿನಹ ಬೇರಾವ ರೀತಿಯಲ್ಲೂ ಯಾವ ಸ್ತರದಲ್ಲೂ ಹೊಗಳುವುದು ಹೆಚ್ಚು ಮಾತಾಡುವುದು ಅವರಿಗೆ ರುಚಿಸುವುದಿಲ್ಲ.
- ಭಾರತದ ಅತ್ಯುತ್ತಮ, ಕರ್ನಾಟಕದ ಅತಿ ಶ್ರೇಷ್ಠ ದೇವಮಾನವರು ಇನ್ನಷ್ಟು ಬದುಕಿ ಹರಸಲಿ....ಪ್ರಣಾಮಗಳು.....



# ನಾ ಕಂಡ ನಿಟ್ಟೂರು ಶ್ರೀನಿವಾಸರಾಯರು

.................... ✍ *ಎನ್.ವಿ. ಅನಂತರಾಮಯ್ಯ**

"ನಿಟ್ಟೂರು ಶ್ರೀನಿವಾಸರಾಯರು" ಎಂಬ ಹೆಸರನ್ನು ಕೇಳಿದ ಕೂಡಲೇ, ಶಾಂತತೆ, ಶತಾಯುಷ್ಯ ಸರಳತೆ, ಸೌಜನ್ಯ, ಪಾಂಡಿತ್ಯವುಳ್ಳ ಒಬ್ಬ ವ್ಯಕ್ತಿಗಳು ಕಣ್ಣುಗಳ ಮುಂದು ಬಂದು ನಿಲ್ಲುತ್ತಾರೆ. ಇವರೇ ಶ್ರೀನಿವಾಸರಾಯರು. ಇವರು ಶ್ಯಾಮಲ ವರ್ಣದವರೂ, ನೀಳಕಾಯರೂ, ತೀಕ್ಷ್ಣಬುದ್ಧಿಯುಳ್ಳವರೂ ಆಗಿದ್ದಾರೆ. ಇವರು ಬ್ರಾಹ್ಮಣರಲ್ಲಿ, ಸ್ಮಾರ್ತರೂ, ಉಲುಚು ಕಮ್ಮಿಯೆಂಬ ಒಳಪಂಗಡಕ್ಕೆ ಸೇರಿದವರೂ, ಆತ್ರೇಯಸ ಗೋತ್ರೋತ್ಪನ್ನರೂ ಆಗಿರುತ್ತಾರೆ. ಈ ಲೇಖಕನಾದ ನಾನೂ ಕೂಡ ಅದೇ ಪಂಗಡ ಮತ್ತು ಅದೇ ಗೋತ್ರದವನಾಗಿರುತ್ತೇನೆ. ನನಗೆ ಒಂದು ರೀತಿಯಲ್ಲಿ ಬಂಧುಗಳೂ ಆಗಿರುತ್ತಾರೆ. ನಿಟ್ಟೂರು ಎಂಬ ಗ್ರಾಮವು ತುಮಕೂರು ಜಿಲ್ಲೆಯ, ಗುಬ್ಬಿ ತಾಲ್ಲೂಕಿಗೆ ಸೇರಿದೆ. ನನ್ನ ಜನ್ಮಭೂಮಿಗೂ, ನಿಟ್ಟೂರಿಗೂ ೧೫ ಕಿ.ಮೀ. ಮಾತ್ರ ದೂರವಿದೆ.

ಇವರು ೨೪-೮-೧೯೦೨ರಲ್ಲಿ ಜನಿಸಿದರು. ತಾಯಿಯವರ ಹೆಸರು ಸೀತಮ್ಮನೆಂದೂ, ತಂದೆಯವರ ಹೆಸರು ಶ್ಯಾಮಣ್ಣ ಎಂದೂ ಆಗಿದೆ. ತಿರುಪತಿಯ ಶ್ರೀನಿವಾಸಸ್ವಾಮಿಯು ಮನೆ ದೇವರಾದುದರಿಂದ, ಅದೇ ಹೆಸರು ಇವರಿಗೆ ಇಡಲ್ಪಟ್ಟಿದೆ. ಕಾಲ ಕಾಲಕ್ಕೆ ಜಾತಕರ್ಮ, ನಾಮಕರಣ, ಅನ್ನಪ್ರಾಶನ ಮುಂತಾದ ಎಲ್ಲ ಸಂಸ್ಕಾರಗಳೂ ಮಾಡಲ್ಪಟ್ಟಿವೆ. ಪ್ರಾಥಮಿಕ

---

* ನಂ. ೪೦, ಅಂಚೆ ಕಛೇರಿ ಹಿಂಭಾಗ, ರಾಮಮೂರ್ತಿ ನಗರ
ಬೆಂಗಳೂರು - ೫೬೦ ೦೧೬

ವಿದ್ಯಾಭ್ಯಾಸದಿಂದ ಹಂತ ಹಂತವಾಗಿ ಮೇಲೇರುತ್ತಾ ವಿಜ್ಞಾನದಲ್ಲಿ ಪದವೀಧರರಾದರು. ಸರ್ಕಾರೀ ಉದ್ಯೋಗಕ್ಕೆ ಆಸೆಪಡದೆ, ನ್ಯಾಯಶಾಸ್ತ್ರವನ್ನು ಓದಿ ಅಡ್ವೊಕೇಟರಾದರು. ಆ ಮೇಲೆ ಒಳ್ಳೆಯ ಅಧಿಕಾರಸ್ಥರೂ ಸುಸಂಸ್ಕೃತರೂ, ವಿದ್ಯಾವಂತರೂ ಆದ ಎಂ.ಎನ್. ಕೃಷ್ಣರಾಯರ ಪುತ್ರಿಯ ಪಾಣಿಗ್ರಹಣ ಮಾಡಿದರು.

ಇವರು, ತಮ್ಮ ಕಾರ್ಯದಕ್ಷತೆ, ನಿಸ್ಪೃಹತೆ, ಶೀಘ್ರತೆ ಮುಂತಾದ ಗುಣಗಳಿಂದ ಪ್ರಸಿದ್ಧರಾದರು. ಇದರಿಂದ ನ್ಯಾಯಾಲಯದಲ್ಲಿ ನ್ಯಾಯಾಧೀಶರ ಸ್ಥಾನವು ದೊರಕಿತು. ಕ್ರಮೇಣ ಉಚ್ಚ ನ್ಯಾಯಾಲಯದ ಮುಖ್ಯನ್ಯಾಯಾಧೀಶರೂ ಆಗಿ, ಒಮ್ಮೆ ಹಂಗಾಮಿ ರಾಜ್ಯಪಾಲರೂ ಆದರು. ನಮ್ಮ ಬಂಧುಗಳ ಪೈಕಿ ಇಷ್ಟು ಉನ್ನತ ಪದವಿಗೆ ಏರಿದವರು ಯಾರೂ ಇಲ್ಲ.

ಇವರ ಜ್ಞಾಪಕ ಶಕ್ತಿಯು ಅಸಾಧಾರಣವಾದುದು. ಮೇಧಾಶಕ್ತಿಯೂ ಅಷ್ಟೇ. ಸಂಸ್ಕೃತದಲ್ಲಿ ಒಂದು ಗಾಥೆಯಿದೆ ಗಾಥೆಯೆಂದರೆ ಲೋಕೋಕ್ತಿ. ಅದು ಈ ರೀತಿ ಇದೆ.

"ಅತ್ಯಂತ ಮತಿ ಮೇಧಾವೀ ತ್ರಯಾಣಾಮೇ ಕರ್ಮತ್ನುತೇ ।
ಅಲ್ಪಾಯುಷೋ ದ್ರರಿದ್ರೂವಾಹಸಪತ್ಯೋಸಂಶಯಃ ॥

ಅದನ್ನು ಗಾದೆ ಎಂದೂ ಹೇಳಬಹುದು. ತುಂಬಾ ಬುದ್ಧಿವಂತನಾದವನಿಗೆ ಮೂರು ಕೊರತೆಗಳ ಪೈಕಿ ಯಾವುದಾದರೂ ಒಂದು ಕೊರತೆ ಇರುತ್ತದೆಯಂತೆ. ಅವು ಯಾವುವೆಂದರೆ ೧) ಅಲ್ಪಾಯುಸ್ಸು ೨) ದಾರಿದ್ರ್ಯ ೩) ಸಂತಾನಹೀನತೆ. ಶ್ರೀನಿವಾಸರಾಯರ ವಿಷಯದಲ್ಲಿ ಈ ಗಾದೆಯು ಸುಳ್ಳಾಗಿದೆ. ಅಂದರೆ ಅವರು ಮೇಧಾವಿಯಾಗಿದ್ದರೂ, ದೀರ್ಘಾಯುಷ್ಮಂತರೂ, ಶ್ರೀಮಂತರೂ, ಯೋಗ್ಯಪುತ್ರವಂತರೂ ಆಗಿದ್ದಾರೆ. ಇಷ್ಟೇ ಅಲ್ಲ, ಆರೋಗ್ಯವಂತರೂ ಆಗಿದ್ದಾರೆ. ಅಂಗಾಂಗಗಳೂ ಅವರ ಹತೋಟಿಯಲ್ಲಿವೆ.

ಭಾರತೀಯ ವಿದ್ಯಾಭವನದಲ್ಲಿ ನಡೆದ ಇವರ ಸನ್ಮಾನ ಸಮಾರಂಭದಲ್ಲಿ ನಾನು ಒಂದು ಪ್ರಶ್ನೆಯನ್ನು ಕೇಳಿದೆನು. 'ಏನೆಂದರೆ ದೀರ್ಘಾಯಸ್ಸು ವರವೊ, ಶಾಪವೋ" ಎಂದು ಅದಕ್ಕೆ ಅವರು "ವರ" ಎಂದರು. ಕಾರಣ ಅವರ ನಿತ್ಯಾನುಭವ, ಪ್ರತಿದಿನವೂ ಅವರಿಗೆ ಸನ್ಮಾನವಿದ್ದೇ ಇರುತ್ತದೆ. ಸಾಕಷ್ಟು ಧನವೂ ಇದೆ. ಮಕ್ಕಳೂ ಚೆನ್ನಾಗಿ ನೋಡಿಕೊಳ್ಳುತ್ತಾರೆ. ಅದೇ, ದಾರಿದ್ರ್ಯ, ಪಾರ್ಶ್ವವಾಯು ಮುಂತಾದ ರೋಗಪೀಡಿತನಾದವನಿಗೆ ದೀರ್ಘಾಯಸ್ಸು ಶಾಪವಾಗಿ ಕಾಣುತ್ತದೆ. ಇದರಂತೆಯೇ "ಪಾಪೀ ಚಿರಾಯು; ಸುಕೃತೀ ಗತಾಯುಃ" ಎಂಬ ಗಾದೆಗೂ ಇದೇ ದಾರಿ. ಇವರ ನೂರನೆಯ ಹುಟ್ಟುಹಬ್ಬದ ದಿನದಂದು ನಮ್ಮ ಉಲುಚುಕಮ್ಮೆ ಬ್ರಾಹ್ಮಣ ಮಹಾಸಭೆಯಲ್ಲಿ ಸನ್ಮಾನವಾಯಿತು.

ಪ್ರಾರಂಭದಲ್ಲಿ ನಾನೇ ವೇದ ಮಂತ್ರಗಳ ಪೂರ್ವಕ ಪ್ರಾರ್ಥನೆ ಮಾಡಿದೆನು. ಆಗ ನಾನು "ಶ್ರೀನಿವಾಸರಾಯರೇ, ಇಂಗ್ಲೀಷ್ ವರ್ಷದ ಲೆಕ್ಕಾಚಾರದಂತೆ ವರ್ಷಕ್ಕೆ ೩೬೫ ದಿನ ಬರುತ್ತದೆ. ನಮ್ಮ ಸೌರಮಾನದಂತೆ ೩೬೦ ದಿನವಾಗುತ್ತದೆ. ಚಾಂದ್ರಮಾನದಂತೆ ವರ್ಷಕ್ಕೆ ೩೫೦ ದಿನವೇ ಆಗುತ್ತದೆ. ಆದುದರಿಂದ ನಿಮಗೆ ೧೦೦ ವರ್ಷ ತುಂಬಿ, ಮೇಲೆ ೫೦೦ ದಿನಗಳಾಗಿವೆಯಲ್ಲವೇ?" ಎಂದು ಪ್ರಶ್ನೆ ಮಾಡಿದೆ.

ಅದಕ್ಕೆ ಅವರು ಕೂಡಲೇ "೩ ವರ್ಷಕ್ಕೊಮ್ಮೆ ಅಧಿಕ ಮಾಸ ಬಂದು ೩೦ ದಿನಗಳು ಸೇರಿಕೊಳ್ಳುತ್ತವೆ. ಜನವರಿ ೧೪ನೇ ತಾ|| ಉತ್ತರಾಯಣ ಬರುತ್ತದೆ. ಈ ಎಲ್ಲ ಕಾರಣಗಳಿಂದ ಅಜಗಜಾಂತರವಾದ ವ್ಯತ್ಯಾಸವೇನೂ ಇಲ್ಲ" ಎಂದು ತಡವರಿಸದೇ ಹೇಳಿಬಿಟ್ಟರು. ಇದನ್ನೇ "ಪ್ರತಿಭೆ" ಎನ್ನುವುದು. ಇದರಿಂದ ಇವರ ಆಳವಾದ ಜ್ಞಾನ ಮತ್ತು ಅನುಭವವನ್ನು ಊಹಿಸಬಹುದು.

ಇವರು ಸರ್ಕಾರಿ ಸೇವೆಯಿಂದ ನಿವೃತ್ತರಾದ ಮೇಲೆ, ಪೊರೆ ಬಿಟ್ಟ ಹಾವಿನಂತೆ ತಮ್ಮ ದೈನಂದಿನ ಚಟುವಟಿಕೆಗಳನ್ನು ಇನ್ನೂ ಹೆಚ್ಚಿಸಿಕೊಂಡರು. ಡಿ.ವಿ.ಜಿ., ಎಂ.ಆರ್. ಶ್ರೀನಿವಾಸಮೂರ್ತಿ ಮುಂತಾದ ಉದ್ದಾಮ ಪಂಡಿತರ ಸಂಗಡ ಬೆರೆಯತೊಡಗಿದರು. ಡಿ.ವಿ.ಜಿ.ಯವರು ಸ್ಥಾಪಿಸಿದ ಗೋಖಲೆ ಸಾರ್ವಜನಿಕ ಸಂಸ್ಥೆಗೆ ಆಜೀವ ಸದಸ್ಯರಾಗಿ, ಅದರ ಅವಿಭಾಜ್ಯ ಅಂಗವಾದರು. ಜೀವನ ಯಾತ್ರೆಯಲ್ಲಿ ಸರಳ ಜೀವನ, ಹಾಗೂ ಉಚ್ಚವಿಚಾರ ಮಂಥನದಲ್ಲಿ ತೊಡಗಿದರು. ಒಂದು ದೃಷ್ಟಿಯಿಂದ ಭಗವದ್ಗೀತೆಯಲ್ಲಿ ಹೇಳಿರುವ ಸ್ಥಿತಪ್ರಜ್ಞನಂತೆಯೇ ಆದರು. ಸಮುದ್ರವು ದೊಡ್ಡ ನದಿ ಬಂದರೂ ಸರಿ, ಸಣ್ಣ ಕಾಲುವೆ ಬಂದರೂ ಸರಿ ಎರಡನ್ನೂ ಸ್ವಾಗತಿಸುವಂತೆ, ಧನಿಕರು, ದರಿದ್ರರು ಯಾರೇ ಆಹ್ವಾನಿಸಿದರೂ ಸಂತೋಷದಿಂದ ಸಕಾಲಕ್ಕೆ ಬಂದು, ಮಿತವಾಗಿ ಆಹಾರ ಸ್ವೀಕರಿಸಿ, ಆಶೀರ್ವದಿಸಿ ಹೋಗುತ್ತಾರೆ. 'ನಗರದಲ್ಲಿ ಇಂದು' ಎನ್ನುವ ಕಾರ್ಯಕ್ರಮದಲ್ಲಿ ಇವರ ಹೆಸರು ಇದ್ದೇ ಇರುತ್ತದೆ. ವಿಜಯ ಕರ್ನಾಟಕ ಪತ್ರಿಕೆಯವನು, ಇವರ ಭಾವಚಿತ್ರವನ್ನು ಹಾಕಿಬಿಡುತ್ತಾರೆ. ಅಂತು ದೇವಋಣ, ಋಷಿಋಣ, ಪಿತೃಋಣ ಎಂಬ ಮೂರು ಋಣಗಳನ್ನು ತೀರಿಸಿರುತ್ತಾರೆ. ಇವರು ಹಾಲು ಕುಡಿದಿರುವಷ್ಟು ನಾವು ನೀರು ಕುಡಿದಿಲ್ಲ. ನಾವೂ ಇವರಂತೆಯೇ ಆಗುವ ಹಾಗೆ ದೇವರು ಅನುಗ್ರಹಿಸಲಿ ಎಂದು ದೇವರನ್ನು ಪ್ರಾರ್ಥಿಸುತ್ತೇನೆ. ಇಂತಹ ಪುಣ್ಯಾತ್ಮರಿಂದ ಕರ್ನಾಟಕ ಮಾತೆ ಮತ್ತು ಭಾರತ ಮಾತೆಯು ಸುಪುತ್ರವತಿಯಾಗಿದ್ದಾಳೆಂದು ಹೇಳಿ ಲೇಖನಿಗೆ ಬಿಡುವು ಕೊಡುತ್ತೇನೆ.

❑

# ಮಾರ್ಗದರ್ಶಕ ನಿಟ್ಟೂರು

. . . . . . . . . . . . . . . . . . . . . . ✍ *ಡಾ|| ಹೊ. ಶ್ರೀನಿವಾಸಯ್ಯ**

**ಪರಿಚಯ**

ಮಲ್ಲೇಶ್ವರದ ೧೧ನೇ ಅಡ್ಡರಸ್ತೆ ವೆಸ್ಟ್‌ಪಾರ್ಕ್‌ನಲ್ಲಿ ಇದ್ದ ದಿವಂಗತ ಸಿದ್ದವನಹಳ್ಳಿ ಕೃಷ್ಣಶರ್ಮರ ಮನೆ ಸ್ವಾತಂತ್ರ್ಯ ಪೂರ್ವದಲ್ಲಿ ಎಲ್ಲಾ ರಾಜಕೀಯ ನಾಯಕರುಗಳಿಗೆ, ಗಾಂಧೀವಾದಿಗಳಿಗೆ, ಸಾಹಿತಿಗಳಿಗೆ, ಪತ್ರಕರ್ತರಿಗೆ, ಸಮಾಜಸೇವಕರಿಗೆ ಮತ್ತು ಯುವಕರಿಗೆ ಒಂದೆಡೆ ಸೇರಲು ಆಕರ್ಷಣೀಯವಾದ ಸ್ಥಳವಾಗಿತ್ತು. ಎದುರಿಗೆ ಕೃಷ್ಣದೇವರ ಗುಡಿ. ದೊಡ್ಡ ಮನೆಯ ಹಿಂದಿನ ಮನೆ (ಔಟ್‌ಹೌಸ್) ಗೊರೂರು ರಾಮಸ್ವಾಮಿ ಅಯ್ಯಂಗಾರ್ ಮತ್ತು ರಾಜರತ್ನಂ, ಟಿ.ಪಿ. ಕೈಲಾಸಂ, ಬುರ್ಲಿ ಬಿಂದುಮಾಧವ, ಹೈದ್ರಾಬಾದ್ ರಾಮಾಚಾರ್, ಸಿದ್ದಲಿಂಗಯ್ಯ, ಕೆ.ಟಿ. ಭಾಷ್ಯಂ, ಕೆ.ಸಿ. ರೆಡ್ಡಿ ಮತ್ತು ಕೆಂಗಲ್ ಹನುಮಂತಯ್ಯನವರು ಅಲ್ಲದೇ ಇನ್ನೂ ಅನೇಕ ಹಿರಿಯ ನಾಯಕರುಗಳು ಈ ಸಣ್ಣ ಮನೆಗೆ ಬಂದು ಹೋಗುತ್ತಿದ್ದರು. ನಾನು ಅವರ ಮನೆಯಲ್ಲಿ ಇದ್ದಾಗ ಈ ನಾಯಕರುಗಳಿಗೆಲ್ಲಾ ನನ್ನನ್ನು ಗಾಂಧೀ ಸಾಹಿತ್ಯ ಸಂಘದ ನಮ್ಮ ಹುಡುಗ ಎಂದು ಸಿದ್ದವನಹಳ್ಳಿಯವರು ಪರಿಚಯಿಸುತ್ತಿದ್ದರು. ನನಗೆ ಈ ವ್ಯಕ್ತಿಗಳ ಜೊತೆಗೆ ಮಾತನಾಡಲು ಅವಕಾಶ ಸಿಗುತ್ತಿತ್ತು. ಹೀಗೆ ಸಿದ್ದವನಹಳ್ಳಿ ಕೃಷ್ಣಶರ್ಮರ ಮನೆಗೆ ಬರುತ್ತಿದ್ದವರಲ್ಲಿ ನಿಟ್ಟೂರು ಶ್ರೀನಿವಾಸರಾಯರೂ ಒಬ್ಬರು. ನಾವು ಅವರನ್ನು ಗಾಂಧೀ ಸಾಹಿತ್ಯ ಸಂಘದ ಕಾರ್ಯಕ್ರಮಕ್ಕೆ ಕರೆಯುತ್ತಿದ್ದುದು

---

* ೧೦೨, ೬ನೇ ಅಡ್ಡರಸ್ತೆ, ಮಲ್ಲೇಶ್ವರ
ಬೆಂಗಳೂರು - ೫೬೦ ೦೦೩

ರೂಢಿ. ೧೯೪೨ರಿಂದ ಮಲ್ಲೇಶ್ವರದ ಶ್ರೀ ರಾಮಮಂದಿರದಲ್ಲಿ ಗಾಂಧೀಜಯಂತಿ ಆಚರಿಸುತ್ತಿದ್ದೆವು. ಈ ಸಂದರ್ಭದಲ್ಲೆಲ್ಲಾ ನಿಟ್ಟೂರುರವರು ಅನೇಕ ಸಾರಿ ಅತಿಥಿಗಳಾಗಿ ಬಂದಿದ್ದಾರೆ. ಆ ಸಂದರ್ಭದಲ್ಲಿ ಇವರ ಪರಿಚಯ ಚೆನ್ನಾಗಿ ಆಗಿತ್ತು.

**ಗಾಂಧೀ ಜಯಂತಿ :**

ಆಗಿನ ಕಾಲದಲ್ಲಿ ಗಾಂಧೀ ಸಾಹಿತ್ಯ ಮತ್ತು ರಾಷ್ಟ್ರೀಯ ಸಾಹಿತ್ಯ ಪುಸ್ತಕಗಳು ದೊರೆಯುತ್ತಿದ್ದುದು ಕೋಟೆ ಎದುರಿಗಿದ್ದ ಸತ್ಯ ಶೋಧನ ಪುಸ್ತಕ ಭಂಡಾರದಲ್ಲಿ. ಸಿದ್ದವನಹಳ್ಳಿ ಕೃಷ್ಣಶರ್ಮರ ಪುಸ್ತಕಗಳು ಅಲ್ಲೇ ಸಿಗುತ್ತಿದ್ದುದು. ಗಾಂಧೀಜಯಂತಿಯ ವೇಳೆಯಲ್ಲಿ ಒಂದು ವಾರ ಖಾದಿವಸ್ತ್ರ ಮತ್ತು ಪುಸ್ತಕಗಳನ್ನು ಮನೆಮನೆಗೆ ತೆಗೆದುಕೊಂಡು ಹೋಗಿ ಮಾರಲಾಗುತ್ತಿತ್ತು. ಪುಸ್ತಕವನ್ನು ಸತ್ಯ ಶೋಧನ ಭಂಡಾರದಿಂದಲೂ ಮತ್ತು ಖಾದಿಯನ್ನು ಸರ್ವೋದಯ ಸಂಘದಿಂದಲೂ ತೆಗೆದುಕೊಂಡು ಹೋಗಿ ಮಾರಲಾಗುತ್ತಿತ್ತು. ಆ ಸಮಯದಲ್ಲಿ ನಿಟ್ಟೂರುರವರು ಯುವಕರಿಗೆ ರಚನಾತ್ಮಕ ಕಾರ್ಯದಲ್ಲಿ ಭಾಗವಹಿಸಲು ಪ್ರೋತ್ಸಾಹ ನೀಡಿ, ಪುಸ್ತಕಗಳನ್ನು ಮಾರಲು ಉತ್ತೇಜನ ನೀಡಿದರು. ಸೋಡಿಯಿಂದ ಬರುವ ಹಣವನ್ನು ಗಾಂಧೀ ಜಯಂತಿ ಕಾರ್ಯಕ್ರಮಕ್ಕೆ ಉಪಯೋಗಿಸಲಾಗುತ್ತಿತ್ತು. ಖಾದಿ ಮತ್ತು ಪುಸ್ತಕವನ್ನು ಹುಡುಗರು ತಂದಿದ್ದಾರೆಂದು, ಯಾವ ಮನೆಯವರೂ ಬೇಡವೆಂದು ಹಿಂದಕ್ಕೆ ಕಳುಹಿಸುತ್ತಿರಲಿಲ್ಲ.

**ಪ್ರಾಕೃತಿಕ ಚಿಕಿತ್ಸಾ ಪರಿಷತ್:**

ನಿಟ್ಟೂರುರವರು ಮಲ್ಲೇಶ್ವರದ ಪ್ರಕೃತಿ ಚಿಕಿತ್ಸಾ ಕೇಂದ್ರದ ಸಮಾರಂಭಗಳಿಗೆ ಬರುತ್ತಿದ್ದರು. ಪುದುಕೋಟೆಯ ಪ್ರಕೃತಿ ಚಿಕಿತ್ಸಾ ತಜ್ಞ ಲಕ್ಷ್ಮಣ ಶರ್ಮರು ಮತ್ತು ಅವರ ಮಕ್ಕಳಾದ ಪುದುಕೋಟೆ ತ್ಯಾಗರಾಜ ಶರ್ಮ ಮತ್ತು ದೆಹಲಿಯ ಗಣೇಶ್‌ಶರ್ಮಾ, ಚಂಡೀಘರ್‌ದಿಂದ ರಾಮಚಂದ್ರಶರ್ಮ ಮತ್ತು ಸ್ವಾಮಿನಾಥನ್‌ರವರು ಬೆಂಗಳೂರಿಗೆ ಬಂದಿದ್ದಾಗ ನಿಟ್ಟೂರುರವರು ಎಲ್ಲಾ ಸಭೆಗಳಿಗೆ ಹಾಜರಾಗುತ್ತಿದ್ದರು. ಅವರೊಂದಿಗೆ ಚರ್ಚಿಸುತ್ತಾ ಇದ್ದರು. ಮತ್ತು ಯುವಕರ ಚಟುವಟಿಕೆಗಳಿಗೆ ಪ್ರೋತ್ಸಾಹ ನೀಡುತ್ತಿದ್ದರು. ಇವರೊಂದಿಗೆ ಡಿ.ಎಂ. ಚಂದ್ರಶೇಖರ್ ಅವರು ಪ್ರಕೃತಿ ಜೀವನ ಕೇಂದ್ರಕ್ಕೆ ಬಂದು ಎಲ್ಲಾ ರೀತಿಯ ಪ್ರೋತ್ಸಾಹ ನೀಡುತ್ತಿದ್ದರು. ೧೯೬೧ರಲ್ಲಿ ಹೈದ್ರಾಬಾದ್‌ನ ವೆಂಕಟ್‌ರಾವ್‌ರವರು ಈ ಕೇಂದ್ರಕ್ಕೆ ಭೇಟಿನೀಡಿ ಪ್ರೋತ್ಸಾಹಿಸಿ ದಕ್ಷಿಣಭಾರತ ಪ್ರಕೃತಿ ಚಿಕಿತ್ಸಾ ಸಮ್ಮೇಳನ ನಡೆಸಲು ಏರ್ಪಾಟು ಮಾಡಿಸಿದರು. ಮಲ್ಲೇಶ್ವರದ ಗಾಂಧೀ ಸಾಹಿತ್ಯ ಸಂಘದಲ್ಲಿ ನಡೆಸಲಾಯಿತು. ನಿಟ್ಟೂರು ಮತ್ತು ಡಿ.ಎಂ. ಚಂದ್ರಶೇಖರ್‌ರವರೂ ಭಾಗವಹಿಸಿದರು. ಈ ಸಮ್ಮೇಳನವು ಚೆನ್ನಾಗಿ ನಡೆದಿದ್ದರಿಂದ ಶ್ರೀ ವೆಂಕಟರಾವ್‌ರವರು ಕರ್ನಾಟಕದಲ್ಲಿ

ಪ್ರಾದೇಶಿಕ ಪ್ರಕೃತಿ ಚಿಕಿತ್ಸಾ ಪರಿಷತ್ ಪ್ರಾರಂಭಿಸಲು ಉತ್ತೇಜಿಸಿದರು. ಈ ಕೆಲಸದಲ್ಲಿ ಒಲವು ಇದ್ದವರನ್ನೆಲ್ಲಾ ಒಂದು ಸಭೆ ಕರೆದು ಚರ್ಚಿಸಿದಾಗ ನಿಟ್ಟೂರು ಮತ್ತು ಡಿ.ಎಮ್. ಚಂದ್ರಶೇಖರ್ ಭಾಗವಹಿಸಿ ಅನೇಕ ಉಪಯುಕ್ತ ಸಲಹೆ ನೀಡಿದರು. ಡಿ.ಎಂ. ಚಂದ್ರಶೇಖರ್‌ರವರನ್ನು ಅಧ್ಯಕ್ಷರಾಗಲು ಕೇಳಿಕೊಂಡಾಗ, ಅವರು ಅಧಿಕಾರದಲ್ಲಿ ಇದ್ದುದ್ದರಿಂದ ಪರಿಷತ್ತಿಗೆ ನಿಟ್ಟೂರುರವರನ್ನು ಅಧ್ಯಕ್ಷರಾಗಲು ಒಪ್ಪಿಸಿದರು. ನಿಟ್ಟೂರು ಸಂತೋಷದಿಂದ ಒಪ್ಪಿ ಈ ಪ್ರಕೃತಿ ಚಿಕಿತ್ಸೆ ಬೆಳೆಯಲು ಸಹಕರಿಸುವುದಾಗಿ ಹೇಳಿದರು. ಚಂದ್ರಶೇಖರ್‌ರವರು ನಿವೃತ್ತರಾಗುವವರೆಗೆ ಅಧ್ಯಕ್ಷನಾಗಿರುವುದಾಗಿ ಹೇಳಿದರು. ನಾನು ಪರಿಷತ್ತಿನ ಕಾರ್ಯದರ್ಶಿಯಾದ ಮೇಲೆ ನಿಟ್ಟೂರುರವರ ಜೊತೆ ಸಮೀಪದಿಂದ ಮಾತನಾಡುವ ಅವಕಾಶ ನನಗೆ ದೊರೆಯಿತು. ಪ್ರಕೃತಿ ಚಿಕಿತ್ಸಾ ಪರಿಷತ್ತನ್ನು ಕಟ್ಟಿ ಬೆಳೆಸುವ ಕೆಲಸದಲ್ಲಿ ಆಸಕ್ತಿ ಹೆಚ್ಚಾಗಿತ್ತು. ನಿಟ್ಟೂರುರವರಂತಹ ಹಿರಿಯರೊಡನೆ ಹೇಗೆ ಕೂಡಿ ಕೆಲಸ ನಿಭಾಯಿಸುವುದು ಎಂಬ ಹೆದರಿಕೆ ಇತ್ತು. ಆದರೆ ಆ ಹೆದರಿಕೆ ಬರುಬರುತ್ತಾ ದೂರವಾಯಿತು. ನಾನು ಪರಿಷತ್ತಿನ ಕಾರ್ಯನಿರ್ವಾಹಕ ಸಮಿತಿ ಸಭೆ ಕರೆಯುವುದಕ್ಕೆ ಮುನ್ನ ದೂರವಾಣಿಯಲ್ಲಿ ಸಂಪರ್ಕಿಸಿ ವಿಷಯ ತಿಳಿಸುತ್ತಿದ್ದೆ. ಅವರ ಮಾತು ಮೃದು. ಎಲ್ಲಾ ವಿಷಯಗಳನ್ನು ವಿವರವಾಗಿ ತಿಳಿದುಕೊಳ್ಳುತ್ತಿದ್ದರು. ಸಭೆಗೆ ೮ ದಿವಸ ಮುಂಚೆ ನೋಟೀಸು ಕೊಡುವುದು ಮತ್ತು ವರದಿ ಒಪ್ಪಿಸುವುದರಲ್ಲಿ ನಿಯಮಾವಳಿಗೆ ಅನುಸಾರವಾಗಿ ಇರಬೇಕು ಎಂದು ತಿಳಿಸುತ್ತಿದ್ದರು. ಅವರು ಸಿಟ್ಟು ಮಾಡಿಕೊಂಡಿದ್ದೇ ಇಲ್ಲ. ಲೆಕ್ಕಗಳನ್ನು ಆದಾಯ ಇಲಾಖೆಗೆ ಕಳುಹಿಸಲು ಅವರೇ ದೂರವಾಣಿ ಮೂಲಕ ಕೇಳುತ್ತಿದ್ದರು. "ನೀವು ಬಹಳ ಕೆಲಸಗಳನ್ನು ಅಂಟಿಸಿಕೊಂಡಿದ್ದೀರಿ, ಆದರೆ ಲೆಕ್ಕ ಪತ್ರಗಳನ್ನು ಸಮಯಕ್ಕೆ ಸರಿಯಾಗಿ ಸಮಿತಿಯ ಒಪ್ಪಿಗೆ ಪಡೆದು ಇಲಾಖೆಗೆ ಕಳುಹಿಸಿಬಿಡಿ" ಎಂದು ಕಿವಿಮಾತು ಹೇಳುತ್ತಿದ್ದರು, ಅಷ್ಟೇ ಮೃದುವಾಗಿ. ನಾನು ನಿಧಾನವಾದುದಕ್ಕೆ ಕ್ಷಮೆ ಕೇಳಿದರೆ "ಪರವಾಗಿಲ್ಲ ನಾವು ಸರ್ಕಾರದ ನಿಯಮಗಳನ್ನು ಪಾಲಿಸಿ ಎಲ್ಲರಿಗೂ ಮಾದರಿಯಾಗೋಣ ಅಷ್ಟೇ. ಚಿಂತೆಯಿಲ್ಲ, ನಿಮ್ಮ ಕೆಲಸ ಮುಗಿಸಿಕೊಂಡು ಈ ಕೆಲಸ ಮಾಡಿ. ನಾನು ಸುಮ್ಮನೆ ಜ್ಞಾಪಿಸಿದೆ" ಎನ್ನುತ್ತಿದ್ದರು. ಇದು ಎಚ್ಚರಿಕೆ ಗಂಟೆಗಿಂತ ದೊಡ್ಡದಾಗಿ ಕಾಣುತ್ತಿತ್ತು. ಇದರಿಂದ ಸಭೆಯ ನಡವಳಿಕೆ ಮತ್ತು ಲೆಕ್ಕ ಪತ್ರಗಳ ವಿಚಾರಗಳಲ್ಲಿ ಬಹಳ ಹುಷಾರಾಗಿರುತ್ತಿದ್ದೆ. ನಿಟ್ಟೂರರ ಮಾತಿನಲ್ಲಿ ಕೋಪವೆಂದೂ ಇರುತ್ತಿರಲಿಲ್ಲ. ಪ್ರೀತಿ ಮತ್ತು ವಿಶ್ವಾಸದಿಂದಲೇ ನಮ್ಮಿಂದ ಕೆಲಸ ತೆಗೆದುಕೊಳ್ಳುತ್ತಿದ್ದರು. ಇವರ ಜ್ಞಾಪಕ ಶಕ್ತಿ ಅದ್ಭುತವಾಗಿತ್ತು. ಇವರು ಹಳೆಯ ಸ್ನೇಹಿತರನ್ನೆಲ್ಲಾ ಜ್ಞಾಪಿಸಿಕೊಂಡು ಕೇಳುತ್ತಿದ್ದರು. ಸಭೆಗೆ ೧೦ ನಿಮಿಷ ಮುಂಚೆಯೇ ಕಾರು, ಬಸ್ಸು, ಆಟೋರಿಕ್ಷಾ ಯಾವುದರಲ್ಲಾದರೂ ಸರಿ ಹಾಜರಿ. ಬಂದವರನ್ನೆಲ್ಲಾ ಮಾತನಾಡಿಸಿ ಮುಂದಿನ ಆಸನದಲ್ಲಿ ಕುಳಿತುಕೊಳ್ಳುವುದು

ರೂಢಿ. ಇವರು ಪ್ರಕೃತಿ ಚಿಕಿತ್ಸಾ ತಜ್ಞರಲ್ಲದಿದ್ದರೂ, ಪರಿಷತ್‌ನ ಸಭೆಗಳಲ್ಲಿ ಎಲ್ಲಾ ವಿಷಯಗಳ ಬಗ್ಗೆಯೂ ಕೂಲಂಕಶವಾಗಿ ಚರ್ಚಿಸುತ್ತಿದ್ದರು.

೧೯೭೧ರಲ್ಲಿ ಪ್ರಕೃತಿ ಚಿಕಿತ್ಸಾ ಸಲಹಾ ಸಮಿತಿ ರಚನೆ: ೧೯೭೧ರಲ್ಲಿ ಕರ್ನಾಟಕ ಸರ್ಕಾರ ಕೆ.ಸಿ. ರೆಡ್ಡಿಯವರ ಅಧ್ಯಕ್ಷತೆಯಲ್ಲಿ ಪ್ರಕೃತಿ ಚಿಕಿತ್ಸಾ ಸಲಹಾ ಸಮಿತಿ ರಚಿಸಿತು. ಕರ್ನಾಟಕದಲ್ಲಿ ಪ್ರಕೃತಿ ಚಿಕಿತ್ಸೆ ಪದ್ಧತಿಯನ್ನು ಬೆಳೆಸುವ ಉದ್ದೇಶ ಈ ಸಮಿತಿಯ ರಚನೆಯದ್ದಾಗಿತ್ತು. ಈ ಸಮಿತಿಯಲ್ಲಿ ನಾನು ಸದಸ್ಯನಾಗಿದ್ದೆ. ಇದಾದ ನಂತರ ೧೯೭೬ ರಲ್ಲಿ ನಿಟ್ಟೂರುರವರ ಜೊತೆಯಲ್ಲಿ ಕೆಲಸ ಮಾಡುವ ಅವಕಾಶ ಸಿಕ್ಕಿತು. ಅನೇಕ ಸಲಹೆಗಳನ್ನು ಸಮಿತಿಯು ಸರ್ಕಾರಕ್ಕೆ ನೀಡಿತು. ಕರ್ನಾಟಕದಲ್ಲಿ ಪ್ರಕೃತಿ ಚಿಕಿತ್ಸೆ ದೊಡ್ಡದಾಗಿ ಬೆಳೆಯಲು ನಿಟ್ಟೂರರ ಕೊಡುಗೆ ಮಹತ್ವವಾದುದು.

೧೯೮೦ರ ಪ್ರಕೃತಿ ಚಿಕಿತ್ಸಾ ಸಮ್ಮೇಳನ : ೧೯೮೦ರಲ್ಲಿ ಕರ್ನಾಟಕ ಪ್ರಾಕೃತಿಕ ಚಿಕಿತ್ಸಾ ಪರಿಷತ್ತು, ಪ್ರಕೃತಿ ಜೀವನದ ಕೇಂದ್ರದ ಆಶ್ರಯದಲ್ಲಿ ಗಾಂಧೀ ಸಾಹಿತ್ಯ ಸಂಘದಲ್ಲಿ ಅಖಿಲ ಕರ್ನಾಟಕ ಪ್ರಕೃತಿ ಚಿಕಿತ್ಸಾ ಸಮ್ಮೇಳನವನ್ನು ನಡೆಸಿತು. ಆ ಸಮ್ಮೇಳನದ ಸ್ವಾಗತ ಸಮಿತಿಗೆ ನಿಟ್ಟೂರುರವರೇ ಅಧ್ಯಕ್ಷರು. ಈ ಸಮ್ಮೇಳನವು ಉಪಯುಕ್ತವಾಗಿ ನಡೆಯಲು ಪ್ರೋತ್ಸಾಹಿಸಿದರು. ಈ ಸಮ್ಮೇಳನಕ್ಕೆ ಹುಬ್ಬಳ್ಳಿಯ ವೆಂಕಟೇಶ ಮಾಗಡಿಯವರು ಅಧ್ಯಕ್ಷರು.

೧೯೮೧ರಲ್ಲಿ ಅಖಿಲ ಭಾರತ ಪ್ರಕೃತಿ ಚಿಕಿತ್ಸಾ ಸಮ್ಮೇಳನ : ೧೯೮೧ರ ಹುಬ್ಬಳ್ಳಿಯ ಅಖಿಲ ಭಾರತ ಪ್ರಕೃತಿ ಚಿಕಿತ್ಸಾ ಸಮ್ಮೇಳನದ ಸ್ವಾಗತ ಸಮಿತಿಯ ಅಧ್ಯಕ್ಷರಾಗಿದ್ದರು ನಿಟ್ಟೂರುರವರು. ೩ ದಿನಗಳ ಕಾಲ ನಡೆದ ಸಮ್ಮೇಳನ ಯಶಸ್ವಿಯಾಗಲು ೨ ದಿನ ಮುಂಚೆಯೇ ಹುಬ್ಬಳ್ಳಿಯಲ್ಲಿ ಇದ್ದು ಎಲ್ಲಾ ಸಲಹೆ ಸೂಚನೆಗಳನ್ನು ನೀಡಿ ಈ ಸಮ್ಮೇಳನ ಯಶಸ್ವಿಯಾಗಲು ಸಹಕಾರ ನೀಡಿದರು. ಸ್ವಾಗತ ಸಮಿತಿಯ ಅಧ್ಯಕ್ಷ ಭಾಷಣದಲ್ಲಿ ಕರ್ನಾಟಕದಲ್ಲಿ ಪ್ರಕೃತಿ ಚಿಕಿತ್ಸೆಯ ಬೆಳವಣಿಗೆಯ ಬಗ್ಗೆ ವಿವರ ನೀಡಿದರು.

೧೯೮೪ರಲ್ಲಿ ಅಖಿಲ ಭಾರತ ಪ್ರಕೃತಿ ಚಿಕಿತ್ಸಾ ಸಮ್ಮೇಳನ : ೧೯೮೪ರಲ್ಲಿ ಅಖಿಲ ಭಾರತ ಪ್ರಕೃತಿ ಚಿಕಿತ್ಸಾ ಸಮ್ಮೇಳನ ಬೆಂಗಳೂರಿಗೆ ಸಮೀಪವಿರುವ ಕುಂಬಳಗೋಡಿನ ನಿತ್ಯಾನಂದನಗರದಲ್ಲಿರುವ ಶ್ರೀ ಶ್ರೀ ಶ್ರೀ ಬಾಲಗಂಗಾಧರನಾಥ ಅಂತರರಾಷ್ಟ್ರೀಯ ಶಾಲೆಯ ವಾತಾವರಣದಲ್ಲಿ ನಡೆಸಲು ಶ್ರೀಗಳು ಆಶೀರ್ವದಿಸಿದರು. ೨೦೦ಕ್ಕು ಮೀರಿ ಪ್ರತಿನಿಧಿಗಳು ಭಾರತದ ಎಲ್ಲಾ ಪ್ರಾಂತ್ಯದಿಂದ ಭಾಗವಹಿಸಿದ್ದು, ಶ್ರೀಗಳೇ ಎಲ್ಲಾ ಪ್ರತಿನಿಧಿಗಳಿಗೂ ಊಟ ಮತ್ತು ವಸತಿ ಸೌಕರ್ಯವನ್ನು ಒದಗಿಸಿದ್ದರು. ಈ ಸಮ್ಮೇಳನದ ಸ್ವಾಗತ ಸಮಿತಿ ಅಧ್ಯಕ್ಷರು ನಿಟ್ಟೂರುರವರು. ಅವರ ಸಲಹೆ ಮತ್ತು ಮಾರ್ಗದರ್ಶನ

ಸಮ್ಮೇಳನ ಯಶಸ್ವಿಯಾಗಲು ಸಹಕಾರಿಯಾಯಿತು. ಎಲ್ಲಾ ಕಾರ್ಯಕ್ರಮ ಮತ್ತು ಗೋಷ್ಠಿಗಳಲ್ಲಿ ಭಾಗವಹಿಸಿ ಪ್ರತಿನಿಧಿಗಳನ್ನು ಅವರೇ ಸ್ವಾಗತಿಸಿದರು. ಇವರನ್ನು ಮಾತನಾಡಿಸದ ಪ್ರತಿನಿಧಿಯೇ ಇಲ್ಲ. ಇವರ ಸರಳತೆ, ಈ ವಯಸ್ಸಿನಲ್ಲಿ ಇವರ ಕುತೂಹಲ, ನಗುಮೊಗ ಮತ್ತು ಇವರ ಉತ್ಸಾಹ ಎಲ್ಲರನ್ನು ಆಕರ್ಷಿಸಿತು.

**ಬಿ.ಎಂ.ಶ್ರೀ. ಶತಮಾನೋತ್ಸವ :** ಬಿ.ಎಂ.ಶ್ರೀ. ಅವರ ಶತಮಾನೋತ್ಸವ ಅವರ ಹುಟ್ಟೂರಾದ ಬೆಳ್ಳೂರಿನಲ್ಲಿ ನಡೆಯಿತು. ಜಿ. ನಾರಾಯಣರವರ ನಾಯಕತ್ವದಲ್ಲಿ ಬೆಳ್ಳೂರಿನ ಸಮೀಪವಿರುವ ಆದಿಚುಂಚನಗಿರಿ ಜಗದ್ಗುರು ಶ್ರೀ ಶ್ರೀ ಶ್ರೀ ಬಾಲಗಂಗಾಧರ ನಾಥ ಸ್ವಾಮೀಜಿಯವರ ಆಶೀರ್ವಾದದಿಂದ ಒಳ್ಳೆಯ ಕಾರ್ಯಕ್ರಮಗಳನ್ನು ಏರ್ಪಡಿಸ ಲಾಗಿತ್ತು. ಮಾಸ್ತಿ ವೆಂಕಟೇಶ ಅಯ್ಯಂಗಾರ್ ಮತ್ತು ನಿಟ್ಟೂರು ಶ್ರೀನಿವಾಸರಾವ್, ಎಂ.ವಿ. ಸೀತಾರಾಮಯ್ಯ, ಪು.ತಿ. ನರಸಿಂಹಾಚಾರ್ ಮತ್ತು ಸಚಿವರಾದ ಚಂದ್ರಶೇಖರ್‌ರವರು ಈ ಸಮಾರಂಭದಲ್ಲಿ ಭಾಗವಹಿಸಿದ್ದರು. ಒಂದು ದಿನ ಮುಂಚಿತವಾಗಿ ಆದಿಚುಂಚನಗಿರಿ ಯಲ್ಲಿನ ಅತಿಥಿಗೃಹದಲ್ಲಿ ಇರಲು ಅವಕಾಶ ಕಲ್ಪಿಸಲಾಗಿತ್ತು. ಇಲ್ಲಿಯ ಎಲ್ಲಾ ವ್ಯವಸ್ಥೆಯನ್ನು ಮತ್ತು ಜವಾಬ್ದಾರಿಯನ್ನು ನನಗೆ ಶ್ರೀಗಳು ವಹಿಸಿದ್ದರು. ಮಧ್ಯಾಹ್ನದ ಭೋಜನ ವ್ಯವಸ್ಥೆ ಅತಿಥಿಗೃಹದಲ್ಲೇ ಏರ್ಪಾಟಾಗಿತ್ತು. ಅಲ್ಲಿಗೆ ಕೆಲವರು ಊಟಕ್ಕೆ ಬ್ರೆಡ್ಡು ಮುಂತಾದವುಗಳನ್ನು ತಂದಿದ್ದರು. ಮಾಸ್ತಿ ವೆಂಕಟೇಶ ಅಯ್ಯಂಗಾರ್ ಮತ್ತು ನಿಟ್ಟೂರುರವರು ಮಾತ್ರ ಏನನ್ನೂ ತಂದಿರಲಿಲ್ಲ. ಶ್ರೀಗಳು ಅತಿಥಿಗಳಿಗೆ ಸೊಗಸಾದ ಭೋಜನದ ಏರ್ಪಾಟು ಮಾಡಿದ್ದರು. ಅಲ್ಲಿನ ಸಂಸ್ಕೃತ ಕಾಲೇಜಿನ ವಿದ್ಯಾರ್ಥಿಗಳು ಊಟ ಬಡಿಸಿದರು. ಹೆಸರುಬೇಳೆ ಪಾಯಸ ತುಂಬಾ ಚೆನ್ನಾಗಿತ್ತು. ಆಗ ನಿಟ್ಟೂರು ಮತ್ತು ಮಾಸ್ತಿಯವರು ಊಟ ಮಾಡದೇ ಇರುವ ಅತಿಥಿಗಳಿಗೆ ಹಾಸ್ಯ ಮಾಡಲಾರಂಭಿಸಿದರು. 'ಇಂತಹ ಊಟ ಮಾಡಲು ನಿಮಗೆ ಅದೃಷ್ಟವಿಲ್ಲ, ಕಡೇ ಪಕ್ಷ ಪಾಯಸವನ್ನಾದರೂ ಕುಡಿದು ನೋಡಿ' ಎಂದು. ಕೆಲವರು ರುಚಿ ನೋಡಿ ನಿಜವಾಗಿಯೂ ರುಚಿಯಾಗಿದೆ ಎಂದು ಸಂತೋಷ ವ್ಯಕ್ತಪಡಿಸಿದರು. ಸಂಜೆ ಎಲ್ಲರೂ ಒಟ್ಟಿಗೆ ಕುಳಿತು ಊಟ ಮಾಡಿದರು. ನಿಟ್ಟೂರು ಊಟ ಬಡಿಸಿದ ಹುಡುಗರನ್ನು ಊಟವಾಯಿತೇ ಎಂದು ಪ್ರಶ್ನಿಸಿದರು. ಹುಡುಗರ ನಾಯಕ ಹೇಳಿದ "ಅತಿಥಿದೇವೋಭವ", ಅತಿಥಿಗಳ ಊಟದ ನಂತರವೇ ನಮ್ಮ ಊಟ ಎಂದ. ನಿಟ್ಟೂರುರವರಿಗೆ ಆಶ್ಚರ್ಯವಾಯಿತು. ಮಾಸ್ತಿಯವರೊಂದಿಗೆ ಈ ಹಳ್ಳಿಯ ಮಕ್ಕಳಲ್ಲಿ ಎಂತಹ ಸಂಸ್ಕೃತಿ ಎಂದು ಹೇಳುತ್ತಾ ಇದನ್ನು ಹೇಳಿಕೊಟ್ಟವರಾರು ಎಂದು ಕೇಳಿದರು. ಅದಕ್ಕೆ ಈ ಹುಡುಗರು ನಮ್ಮ ಸ್ವಾಮೀಜಿಯವರು ಎಂದು ಉತ್ತರಿಸಿದರು. ಹುಡುಗರು ಸಂಸ್ಕೃತದಲ್ಲಿ ಸಂಭಾಷಿಸುತ್ತಿರುವುದನ್ನು ಕಂಡು ನಿಟ್ಟೂರು ಆಶ್ಚರ್ಯ ಚಕಿತರಾಗಿ "ನೀವೇನು ಸಂಸ್ಕೃತ ವಿದ್ಯಾರ್ಥಿಗಳೇ" ಎಂದು ಪ್ರಶ್ನಿಸಿದರು. ಹುಡುಗರು

"ಹೌದು ನಾವೆಲ್ಲ ಹಳ್ಳಿಯ ಬಾಲಕರು. ಎಲ್ಲರೂ ಸಂಸ್ಕೃತ ಕಲಿಯುತ್ತಿದ್ದೇವೆ. ಸಂಸ್ಕೃತದಲ್ಲೇ ಮಾತನಾಡುತ್ತೇವೆ" ಎಂದಾಗ ನಿಟ್ಟೂರರು ಮತ್ತು ಮಾಸ್ತಿಯವರು ಬಹಳ ಸಂತೋಷಪಟ್ಟರು.

ಮಾರನೆಯ ದಿನ ಬೆಳಗ್ಗೆ ೬-೩ಂಕ್ಕೆ ಎಲ್ಲರೂ ಕಾಫಿ ಕುಡಿದು ನವಿಲುಗಳು ಇರುವ ಸ್ಥಳ ನೋಡಲು ಹೊರಡಲನುವಾಗುತ್ತಿದ್ದಾಗ ಸ್ವಾಮೀಜಿ ಅಲ್ಲಿಗೆ ಬಂದು "ಎಲ್ಲರಿಗೂ ಅನುಕೂಲವಾಗಿದೆಯೇ, ಏನಾದರೂ ತೊಂದರೆಯಾಯಿತೇ? ಎಲ್ಲವನ್ನೂ ಶ್ರೀನಿವಾಸಯ್ಯನವರು ನೋಡಿಕೊಳ್ಳುತ್ತಾರೆ" ಅಂದರು. ನಿಟ್ಟೂರು ಸಂತೋಷದಿಂದ "ನಾವೇ ನಿಮ್ಮಲ್ಲಿಗೆ ಬರಲು ಹೊರಟಿದ್ದೆವು. ಅಷ್ಟರಲ್ಲಿ ನೀವೇ ಬಂದು ನಮ್ಮ ಕ್ಷೇಮವನ್ನು ವಿಚಾರಿಸುತ್ತಿದ್ದೀರಿ. ಬಹಳ ಸಂತೋಷ, ವಂದನೆಗಳು. ನಿಮ್ಮ ಹುಡುಗರು ಬಹಳ ಚೆನ್ನಾಗಿ ನೋಡಿಕೊಳ್ಳುತ್ತಿದ್ದಾರೆ" ಎಂದು ಮೆಚ್ಚುಗೆ ವ್ಯಕ್ತಪಡಿಸಿದರು.

ಶತಮಾನೋತ್ಸವ ಕಾರ್ಯಕ್ರಮಕ್ಕೆ ಬೆಳ್ಳೂರಿಗೆ ಹೋಗಿ ಅಲ್ಲಿ ಬಿ.ಎಂ.ಶ್ರೀ. ಭವನದ ಕಟ್ಟಡಕ್ಕೆ ಶಂಕುಸ್ಥಾಪನೆ ಮಾಡಿದರು. ಅಲ್ಲಿಗೆ ಎಲ್ಲರೂ ನಡದೇ ಬಂದರು. ಸಮಾರಂಭಕ್ಕೆ ಸಾವಿರಾರು ಜನ ಸೇರಿದ್ದರು. ಬಹಳ ವಿಜೃಂಭಣೆಯಿಂದ ಕಾರ್ಯಕ್ರಮ ನಡೆಯಿತು. ಇಂತಹ ಕಾರ್ಯಕ್ರಮವನ್ನು ಏರ್ಪಡಿಸಿದ್ದಕ್ಕಾಗಿ ಮಾಸ್ತಿ ಮತ್ತು ನಿಟ್ಟೂರುರವರು ಶ್ರೀಗಳಿಗೆ ವಂದನೆ ಅರ್ಪಿಸಿದರು. ಅಂದಿನಿಂದ ಶ್ರೀಗಳಿಗೆ ನಿಟ್ಟೂರುರವರೊಂದಿಗೆ ನಿಕಟ ಸಂಬಂಧ ಬೆಳೆಯಿತು. ನಿಟ್ಟೂರುರವರನ್ನು ನಾನು ಭೇಟಿಯಾದಾಗಲೆಲ್ಲಾ ಅವರು ಶ್ರೀಗಳ ಆರೋಗ್ಯ ವಿಚಾರಿಸುವುದು ವಾಡಿಕೆ. ನಾನು ಮಠಕ್ಕೆ ಹೋದಾಗ ಶ್ರೀಗಳು ಡಿ.ಎಂ. ಚಂದ್ರಶೇಖರ್ ಮತ್ತು ನಿಟ್ಟೂರರ ಆರೋಗ್ಯ ವಿಚಾರಿಸುವುದು ರೂಢಿ.

**ಮೇಲುಕೋಟೆಯಲ್ಲಿ ಅಖಿಲ ಭಾರತ ಸರ್ವೋದಯ ಸಮ್ಮೇಳನ :** ಅಖಿಲ ಭಾರತ ಸರ್ವೋದಯ ಸಮ್ಮೇಳನ ಮಾಡಬೇಕೆಂದು ಏರ್ಪಾಟು ಮಾಡಿ ನಿಟ್ಟೂರುರವರು ಸ್ವಾಗತ ಸಮಿತಿಯ ಪರವಾಗಿ ಆದಿಚುಂಚನಗಿರಿ ಸ್ವಾಮೀಜಿಯವರನ್ನು ಒಂದು ಹೊತ್ತಿನ ಭೋಜನದ ವ್ಯವಸ್ಥೆಗಾಗಿ ಕೇಳಲು ಶ್ರೀಗಳನ್ನು ಕಂಡರು. ಶ್ರೀಗಳಿಗೆ ಈ ವಿಚಾರ ನಾನು ಮೊದಲೇ ತಿಳಿಸಿದ್ದೆ. ಬಹಳ ಗೌರವದಿಂದ ನಿಟ್ಟೂರರನ್ನು ಕಂಡರು. ನಿಟ್ಟೂರುರವರು ಬಂದ ವಿಷಯವನ್ನು ತಿಳಿಸಿದಾಗ ಶ್ರೀಗಳು ಸಮ್ಮೇಳನ ಎಷ್ಟು ದಿನ ಎಂದು ಕೇಳಿದರು. ೩ ದಿನವೆಂದೂ ಸುಮಾರು ೨ ಸಾವಿರ ಜನ ಸೇರುವರೆಂದೂ, ಕೆಲವರು ಸಪ್ಪೆ ಊಟದವರು ಎಂದೂ ನಿಟ್ಟೂರರು ತಿಳಿಸಿದರು. ಅದಕ್ಕೆ ಶ್ರೀಗಳು "ನೀವು ಹಿರಿಯರು ಬಂದು ಕೇಳುತ್ತಿದ್ದೀರಿ, ೩ ದಿನದ ಪೂರ್ಣ ಊಟದ ಏರ್ಪಾಡು ಮಾಡುತ್ತೇವೆ. ನಮ್ಮ ಶಾಖೆ ಮಠ ಮೇಲುಕೋಟೆಯಲ್ಲಿ ಇದೆ. ಅಲ್ಲೇ ಏರ್ಪಾಟು ಮಾಡುತ್ತೇವೆ. ಊಟದ ವ್ಯವಸ್ಥೆ

ಬಿಟ್ಟು ಮಿಕ್ಕ ಕಾರ್ಯಕ್ರಮದ ವ್ಯವಸ್ಥೆ ಮಾಡಿಕೊಳ್ಳಿ" ಎಂದಾಗ ನಿಟ್ಟೂರರಿಗೆ ಆದ ಸಂತೋಷ ಹೇಳತೀರದು. ಕೇಳಲು ಬಂದದ್ದು ಒಂದು ಹೊತ್ತಿನ ಭೋಜನ ವ್ಯವಸ್ಥೆಗೆ ಆದರೆ ದೊರಕಿದ್ದು ೩ ದಿನದ ಪೂರ್ಣ ಭೋಜನದ ವ್ಯವಸ್ಥೆ. ಶ್ರೀಗಳು ಊಟದ ವ್ಯವಸ್ಥೆ-ಜವಾಬ್ದಾರಿ ತೆಗೆದುಕೊಂಡ ಮೇಲೆ ನಿಟ್ಟೂರರು ಪರಮಾನಂದದಿಂದ ಶ್ರೀಗಳಿಗೆ ವಂದಿಸಿದರು. ಆ ಸಮ್ಮೇಳನದ ಪೂರ್ಣ ಊಟದ ಜವಾಬ್ದಾರಿಯನ್ನು ಶ್ರೀಗಳೇ ನಿಂತು ನೆರವೇರಿಸಿದರು. ಇದು ಎಲ್ಲರಿಗೂ ಸಂತೋಷವನ್ನುಂಟುಮಾಡಿತು.

**ಚುಂಚಶ್ರೀ ಪ್ರಶಸ್ತಿ :** ಶ್ರೀಗಳು ೨೦೦೧ರಲ್ಲಿ ನಿಟ್ಟೂರರ ನಾನಾ ಕ್ಷೇತ್ರಗಳಲ್ಲಿನ ಸೇವೆಗೆ ಮೆಚ್ಚುಗೆ ವ್ಯಕ್ತಪಡಿಸಿ ಚುಂಚಶ್ರೀ ಪ್ರಶಸ್ತಿಯನ್ನು ದಯಪಾಲಿಸಿದರು. ಈ ಸಮಾರಂಭಕ್ಕೆ ಅನಾರೋಗ್ಯದ ಕಾರಣ ನಿಟ್ಟೂರರು ಕ್ಷೇತ್ರಕ್ಕೆ ಬರಲು ಸಾಧ್ಯವಾಗಲಿಲ್ಲ. ಅವರ ಮನೆಗೆ ಹೋಗಿ ಪ್ರಶಸ್ತಿ ಪ್ರದಾನ ಮಾಡಲಾಯಿತು.

**ಶ್ರೀ ರಾಮಮಂದಿರದ ವಜ್ರಮಹೋತ್ಸವ :** ೧೯೯೮ರಲ್ಲಿ ಮಲ್ಲೇಶ್ವರಂನ ತೆಂಗಿನ ಮರದ ರಸ್ತೆಯಲ್ಲಿ ಇರುವ ಶ್ರೀರಾಮಮಂದಿರದ ವಜ್ರಮಹೋತ್ಸವ ಸಮಾರಂಭಕ್ಕೆ ನಿಟ್ಟೂರು ಅಧ್ಯಕ್ಷರಾಗಿದ್ದರು. ಅವರು ಶ್ರೀ ರಾಮನಾಮ ಮತ್ತು ದಿವಂಗತ ಸಿದ್ದವನಹಳ್ಳಿ ಕೃಷ್ಣಶರ್ಮ ರಚಿತ ಬಾಲ ರಾಮಾಯಣ ಕೃತಿಯನ್ನು ಬಿಡುಗಡೆ ಮಾಡಿದರು. ಮತ್ತು ಟ್ರಸ್ಟ್‌ನ ಕಾರ್ಯಕ್ರಮದ ಬಗ್ಗೆ ಮೆಚ್ಚುಗೆ ವ್ಯಕ್ತಪಡಿಸಿ ಸಂಸ್ಥೆಯ ಕಾರ್ಯಚಟುವಟಿಕೆ ಕೊಂಡಾಡಿ ಹೆಚ್ಚಿನ ಅಭಿವೃದ್ಧಿ ಸಾಧಿಸಲಿ ಎಂದು ಹಾರೈಸಿದರು.

**ಸನ್ಮಾನ ಸಮಿತಿ ಅಧ್ಯಕ್ಷ :** ನನ್ನ ೭೫ನೇ ವರ್ಷದ ಹುಟ್ಟಿದ ಹಬ್ಬದ ಸಂದರ್ಭದಲ್ಲಿ 'ಡಾ| ಹೋ. ಶ್ರೀನಿವಾಸಯ್ಯ ಸನ್ಮಾನ ಸಮಿತಿ' ಅಧ್ಯಕ್ಷರಾಗಿ ಒಂದು ದೊಡ್ಡ ಕಾರ್ಯಕ್ರಮವನ್ನು ಏರ್ಪಡಿಸಿದ್ದರು. ಅಪರಂಜಿ ಮತ್ತು ಧವಳಶ್ರೀ ಗ್ರಂಥಗಳನ್ನು ಹೊರತಂದರು. ಸಮಾರಂಭದಲ್ಲಿ ಪ್ರದರ್ಶನಗಳನ್ನು ಉದ್ಘಾಟಿಸಿ ಆಶೀರ್ವದಿಸಿದರು.

**ಪೀಪಲ್ ಟ್ರಸ್ಟ್ :** ಪೀಪಲ್ ಟ್ರಸ್ಟ್‌ನಲ್ಲಿಯೂ ಒಬ್ಬ ಧರ್ಮದರ್ಶಿಯಾಗಿ ಕೆಲಸ ಮಾಡಲು ಅವಕಾಶ ಕೊಟ್ಟರು. ಇಂದು ಅವರ ಜೊತೆಯಲ್ಲಿ ಕೆಲಸ ಮಾಡಲು ಹರ್ಷವಾಗುತ್ತದೆ. ಎಲ್ಲಾ ಸಭೆಗೆ ಹಾಜರಿ ಸಮಯಕ್ಕೆ ಸರಿಯಾಗಿರುತ್ತದೆ. ಇವರ ಜ್ಞಾಪಕ ಶಕ್ತಿ ಮತ್ತು ಅವರು ಕೊಡುವ ಅಂಕಿ ಅಂಶಗಳನ್ನು ಕೇಳಬೇಕು. ಅವರ ಮೆದುಳು ಕಂಪ್ಯೂಟರಿನಂತೆ ಕೆಲಸ ಮಾಡುತ್ತದೆ.

**ಆರೋಗ್ಯ :** ನಿಟ್ಟೂರರಿಗೆ ಎರಡು ಸಾರಿ ದೇಹದ ಮೂಳೆ ಮುರಿದಿದ್ದರೂ ಸರಿ ಮಾಡಿಕೊಂಡು ನಾನು ಸ್ಟೀಲ್ ಮ್ಯಾನ್ ಅನ್ನುತ್ತಾ ಯುವಕರಿಗಿಂತ ಉತ್ಸಾಹಿ

ಗಳಾಗಿರುವುದನ್ನು ಕಂಡರೆ ನಮ್ಮ ತಲೆ ತಗ್ಗಿಸಬೇಕಾಗುತ್ತದೆ. ಸಜ್ಜನಿಕೆ ಸರಳತೆಯ ಇವರನ್ನು ನೋಡಿದಾಗ ನಾವು ಸಣ್ಣವರಾಗುತ್ತೇವೆ. ಕೋಪವೆಂಬುದೇ ಇಲ್ಲ. ಯಾವಾಗಲು ನಗುಮೊಗ ತುಂಬಿರುತ್ತದೆ. ಯಾರನ್ನೂ ನೋಯಿಸುವುದೇ ಇಲ್ಲ.

೯೯ ವರ್ಷ ಪ್ರಾಯದಲ್ಲಿಯೂ ಮೂಳೆಯ ಶಸ್ತ್ರಚಿಕಿತ್ಸೆ ಪಡೆದರೆಂದರೆ ಆಶ್ಚರ್ಯ ವಾಗುತ್ತದೆ. ಅಖಿಲ ಕರ್ನಾಟಕ ಪ್ರಕೃತಿ ಚಿಕಿತ್ಸಾ ಸಮ್ಮೇಳನ ಧರ್ಮಸ್ಥಳದಲ್ಲಿ ನಡೆಯಿತು. ಆಗ ಅವರು ಚಿಕಿತ್ಸೆಗಾಗಿ ಆಸ್ಪತ್ರೆ ಸೇರಿದ್ದರು. ನಾನು ನೋಡಲು ಹೋದಾಗ ಅವರು ಕೇಳಿದ ಪ್ರಶ್ನೆ "ಧರ್ಮಸ್ಥಳದ ಸಮ್ಮೇಳನದ ಏರ್ಪಾಟು ಹೇಗಿದೆ? ಯಾರು ಯಾರು ಹೋಗುತ್ತೀರಿ? ಧರ್ಮಾಧಿಕಾರಿಗಳಿಗೆ ನಾನು ಕೇಳಿದೆ ಎಂದು ತಿಳಿಸಿ". ಚಿಕಿತ್ಸೆಯ ನಂತರ ಮಾರನೆ ದಿನ ನೋಡಲು ಹೋದಾಗ ಆಗಲೇ ಗಾಡಿ ಹಿಡಿದು ನಡೆಯುತ್ತಿದ್ದರು. ಅವರ ಆತ್ಮಶಕ್ತಿಗೆ ಶರಣು. ಆಗಲೂ ನನ್ನ ಪತ್ನಿ ಜಯಲಕ್ಷ್ಮಿಯ ಆರೋಗ್ಯ ವಿಚಾರಿಸಿ ದರು. "ಅವರನ್ನು ಕೇಳಿದೆ ಅಂತ ಹೇಳಿ" ಎಂದರು.

**ಕರ್ನಾಟಕ ಗಾಂಧೀ ಸ್ಮಾರಕ ನಿಧಿಗೆ ಅಧ್ಯಕ್ಷರ ಆಯ್ಕೆ :** ೧೯೮೫ರಲ್ಲಿ ಕಡಿದಾಳ್ ಮಂಜಪ್ಪನವರ ನಂತರ ಗಾಂಧೀ ಸ್ಮಾರಕ ನಿಧಿಗೆ ಯಾರು ಅಧ್ಯಕ್ಷರನ್ನಾಗಿ ಮಾಡಬೇಕೆಂದು ನಿಟ್ಟೂರರ ಸಲಹೆ ಕೇಳಿದಾಗ, ನಿಟ್ಟೂರು ಗಾಂಧೀ ಸ್ಮಾರಕ ನಿಧಿಗೆ ನನ್ನನ್ನು ಸದಸ್ಯನನ್ನಾಗಿ ಮಾಡಿಕೊಂಡು ನಿಧಿಯ ಜವಾಬ್ದಾರಿಯನ್ನು ವಹಿಸಿಕೊಡಬಹುದೆಂದು ತಿಳಿಸಿದರು. ನನಗೆ, ಕಡಿದಾಳ್ ಮಂಜಪ್ಪನವರು ದೂರವಾಣಿ ಮೂಲಕ ಕೇಳಿದಾಗ "ನಾನು ಅಷ್ಟು ದೊಡ್ಡ ಜವಾಬ್ದಾರಿಯನ್ನು ತೆಗೆದುಕೊಳ್ಳಲು ಅಶಕ್ತ" ಎಂದು ಹೇಳಿದೆ. ಆದರೆ ಅವರು ನನಗೆ ಹೇಳಿದ್ದು "ನಾನು ನಿಮ್ಮನ್ನು ಬಲ್ಲೆ. ನೀವೇ ಸೂಕ್ತ ವ್ಯಕ್ತಿ. ಜಿ. ನಾರಾಯಣ ಮತ್ತು ನಿಟ್ಟೂರರು ನಿಮ್ಮ ಹೆಸರನ್ನು ಸೂಚಿಸಿದ್ದಾರೆ. ನೀವೆ ಸೂಕ್ತ ವ್ಯಕ್ತಿಯೆಂದು ತಿಳಿಸಿದ್ದಾರೆ." ನಾನು ಜಿ. ನಾರಾಯಣ ಮತ್ತು ನಿಟ್ಟೂರರನ್ನು ವಿಚಾರಿಸಿದೆ. ಅವರು ನನಗೆ ಸುಮ್ಮನೆ ಒಪ್ಪಿಕೊಳ್ಳಿ ಎಂದರು. ನನ್ನನ್ನು ನಿಧಿಯ ಸಭೆಗೆ ಆಹ್ವಾನಿಸಿದರು. ಸಭೆ ಸೇರುವುದಕ್ಕೆ ಮುಂಚೆ ಎಲ್ಲಾ ಮಾತನಾಡಿಕೊಂಡಿದ್ದರು ಎಂದು ಗೊತ್ತಾಯಿತು. ಸಭೆ ಪ್ರಾರಂಭವಾದ ಕೂಡಲೆ ಕಡಿದಾಳ್ ಮಂಜಪ್ಪನವರು ಎಲ್ಲರಿಗೂ ವಂದಿಸಿ ನನ್ನ ಹೆಸರನ್ನು ಅಧ್ಯಕ್ಷಗಿರಿಗೆ ಸೂಚಿಸಿದರು. ನನಗೆ ಅವರು ಮಾತನಾಡಲು ಅವಕಾಶವೇ ಕೊಡಲಿಲ್ಲ. ಮಾಗಡಿಯವರು, ನಿಟ್ಟೂರರು, ಕಡಿದಾಳ್‌ರವರ ಸಲಹೆಯನ್ನು ಒಪ್ಪಿ ನನ್ನನ್ನು ಒಪ್ಪಿಸಿದರು. ಕಡಿದಾಳ್ ಮಂಜಪ್ಪ ಏನೂ ಮಾತನಾಡದೇ ನನ್ನನ್ನು ಅಧ್ಯಕ್ಷ ಸ್ಥಳದಲ್ಲಿ ಕೂಡಿಸಿ ಹೊರಟೇ ಹೋದರು. ನನಗೆ ಸ್ವಲ್ಪ ಹೆದರಿಕೆಯಾಯಿತು. ಆದರೆ ನಿಟ್ಟೂರರು ನನ್ನ ಬಗ್ಗೆ ನಾಲ್ಕು ಒಳ್ಳೆಯ ಮಾತಾಡಿದರು. ಎಲ್ಲಾ ಕಾರ್ಯಗಳಲ್ಲೂ ಪ್ರೋತ್ಸಾಹ ನೀಡುವೆ ಎಂದು

ಮಾತನಾಡಿದರು. ಆ ದಿನದ ಮಾತಿನಂತೆ ಎಲ್ಲಾ ಕಾರ್ಯಕ್ರಮಗಳಲ್ಲೂ ಆಶೀರ್ವದಿಸುತ್ತಿದ್ದಾರೆ.

**ಸರಳತೆ :** ಮುಖ್ಯನ್ಯಾಯಾಧೀಶರಾಗಿದ್ದು ಮತ್ತು ರಾಜ್ಯಪಾಲರಾಗಿದ್ದ, ವಿಜಿಲೆನ್ಸ್ ಕಮಿಷನರ್‌ರಾದ ಒಬ್ಬ ಮಹಾನ್ ವ್ಯಕ್ತಿ ಸಾಮಾನ್ಯ ಜನರಂತೆ ಎಲ್ಲರೊಂದಿಗೆ ಬೆರೆತು ನಗುನಗುತ್ತಾ ಮಾತನಾಡುವುದನ್ನು ನೋಡಿದರೆ ನಮಗೂ ಅವರಂತೆ ವಿನಯವಾಗಿ ಸರಳವಾಗಿ ನಡೆಯುವಂತೆ, ವಿಶ್ವಾಸವಾಗಿರುವಂತೆ ಪ್ರೇರಿಸುತ್ತದೆ.

**ನಮನ :** ಕೋಪವಿಲ್ಲದ ಮಾತು, ನಗುಮೊಗ, ಸರಳತೆ, ಹೊಂದಿದ ವ್ಯಕ್ತಿಗಳು, ನಮ್ಮ ಜೊತೆಯಲ್ಲಿ ಇರುವುದೇ ಭಾಗ್ಯ. ಅವರ ಆಶೀರ್ವಾದ ಸದಾ ನಮ್ಮಗಳ ಮೇಲೆ ಇರಲೆಂದು ದೇವರಲ್ಲಿ ಪ್ರಾರ್ಥನೆ. ಇವರು ಇನ್ನೂ ನೂರ್ಕಾಲ ಬಾಳಲೆಂದು ಆಶಿಸುತ್ತೇನೆ.



# ಕರ್ನಾಟಕದ ಶತಾಯುಷಿ ನಿಟ್ಟೂರು ಶ್ರೀನಿವಾಸರಾಯರು

........................ ✍ ಎನ್. ಬಸವಾರಾಧ್ಯ*

"ಶತಮಾನಂ ಭವತಿ ಶತಾಯುಃ ಪುರುಷೇವೇಂದ್ರಿಯೇ ಪ್ರತಿತಿಷ್ಠತಿ" ಎಂಬ ಆರ್ಯೋಕ್ತಿ ಇದೆ. ಹಿರಿಯರು ಕಿರಿಯರಿಗೆ ನೂರು ವರ್ಷ ಬದುಕಿಬಾಳು ಎಂದು ಆಶೀರ್ವದಿಸುವುದು ಹಿಂದಿನಿಂದ ರೂಢಿಯಲ್ಲಿ ಬಂದಿದೆ. ನಿಟ್ಟೂರು ಶ್ರೀನಿವಾಸ ರಾಯರ ಹಿರಿಯರು ಅವರಿಗೆ ಮಾಡಿದ ಈ ಆಶೀರ್ವಾದದ ಫಲವಾಗಿಯೇ ಶ್ರೀಯುತರು ನೂರನೆಯ ವರ್ಷಕ್ಕೆ ಕಾಲಿಟ್ಟಿದ್ದಾರೆ. ಕೇವಲ ಆಶೀರ್ವಾದವೊಂದೇ ಇದಕ್ಕೆ ಕಾರಣವಲ್ಲ. ವ್ಯಕ್ತಿಯ ರೀತಿ ನೀತಿ ಆಚಾರ ವಿಚಾರ ಸಂಪ್ರದಾಯ ಸಂಸ್ಕಾರಗಳೂ ಶತಾಯುಗಳಾಗುವುದಕ್ಕೆ ಪ್ರಮುಖ ಕಾರಣಗಳಾಗಿವೆ. ನಿಟ್ಟೂರು ಶ್ರೀನಿವಾಸರಾಯರ ಪ್ರಗತಿಗೆ ಸಂಪ್ರದಾಯಬದ್ಧ ಕಟ್ಟುನಿಟ್ಟು ನಿಯಮಗಳ ಪರಿಪಾಲಕರಾದ ತಂದೆ ತಾಯಿಗಳೂ ಪ್ರಕಾಂಡ ಪಂಡಿರೂ ಉನ್ನತ ಹುದ್ದೆಯಲ್ಲಿದ್ದ ಬಂಧು ಬಾಂಧವರೂ ಗುರುಹಿರಿಯರೂ ಇದಕ್ಕೆ ಕಾರಣಕರ್ತರಾಗಿದ್ದಾರೆ. ಈ ಎಲ್ಲ ಹಿರಿಯರ ಮೇಧಾವಿಗಳ ಸಮಸ್ತ ಸದ್ಗುಣಗಳನ್ನು ಗರ್ಭೀಕರಿಸಿಕೊಂಡು ಉತ್ತಮ ನಡೆನುಡಿ ಆಚಾರ ವಿಚಾರಗಳಿಂದ ಉತ್ತುಂಗ ಶಿಖರಕ್ಕೇರಿದವರು ಶ್ರೀನಿವಾಸ ರಾಯರು. ಅವರ ನಯ ವಿನಯ ಸರಳ ಸಜ್ಜನಿಕೆ, ಅಪ್ರತಿಮ ದೇಶಭಕ್ತಿ ಅವರನ್ನು ಒಬ್ಬ ಆದರ್ಶ ವ್ಯಕ್ತಿಯನ್ನಾಗಿ ರೂಪಿಸಿದವು.

ಶ್ರೀನಿವಾಸರಾಯರ ತಂದೆಯವರು ಶ್ಯಾಮಣ್ಣನವರು

---

* ೭೪೩, ೩ನೇ ಬ್ಲಾಕ್, ರಾಜಾಜಿನಗರ
ಬೆಂಗಳೂರು - ೫೬೦೦೧೦

ಶಾಲೆಯ ಮುಖ್ಯೋಪಾಧ್ಯಾಯರಾಗಿದ್ದರು. ಅವರು ಶಿಸ್ತಿನ ಸಿಪಾಯಿಗಳೆಂದೇ ಹೆಸರು ಗಳಿಸಿದ್ದರು. ಸಂಪ್ರದಾಯ ನಿಯಮಗಳನ್ನು ಕಟ್ಟುನಿಟ್ಟಾಗಿ ಪರಿಪಾಲಿಸುತ್ತಿದ್ದರು. ಅಷ್ಟೇ ಅಲ್ಲ ಮಿಗಿಲಾದ ದೇಶಭಕ್ತರೂ ಆಗಿದ್ದರು. ಇವರ ಹೆಂಡತಿ ಸೀತಮ್ಮನವರು. ಸೀತಮ್ಮ ನವರ ಅಣ್ಣಂದಿರಲ್ಲಿ ಒಬ್ಬರಾದ ಪ್ರೊ|| ಹಿರಿಯಣ್ಣನವರು ಭಾರತೀಯ ತತ್ವಶಾಸ್ತ್ರದಲ್ಲಿ ಪ್ರಖ್ಯಾತ ವಿದ್ವಾಂಸರು. ಮತ್ತೊಬ್ಬ ಅಣ್ಣ ಮೈಸೂರಿನ ದಿವಾನರಾಗಿದ್ದ ಎಂ.ಎನ್. ಕೃಷ್ಣರಾಯರು. ಒಬ್ಬ ತಮ್ಮ ಡಿ.ವಿ.ಜಿ. ಅವರಿಗೆ ಅಚ್ಚುಮೆಚ್ಚಿನವರಾಗಿದ್ದ ಸೀತಾರಾಮಯ್ಯ ನವರು. ಇಂತಹ ಸುಸಂಸ್ಕೃತ ವಿದ್ಯಾವಂತ ಮನೆತನದ ಸೀತಮ್ಮ ಮತ್ತು ಶ್ಯಾಮಣ್ಣನವರ ಸುಪುತ್ರರೇ ಶ್ರೀನಿವಾಸರಾಯರು. ಇವರು ದಿನಾಂಕ ೨೪-೮-೧೯೦೩ರಲ್ಲಿ ಬೆಂಗಳೂರಲ್ಲಿ ಜನ್ಮ ತಾಳಿದರು.

ಶ್ಯಾಮಣ್ಣನವರು ಸೇವೆ ಸಲ್ಲಿಸುತ್ತಿದ್ದ ಚಳ್ಳಕೆರೆ ಮೊದಲಾದ ಊರುಗಳಲ್ಲಿ ಶ್ರೀನಿವಾಸರಾಯರ ಪ್ರಾಥಮಿಕ ವಿದ್ಯಾಭ್ಯಾಸ ನಡೆಯಿತು. ಅವರ ಪ್ರೌಢಶಾಲಾ ವಿದ್ಯಾಭ್ಯಾಸ ಶಿವಮೊಗ್ಗದಲ್ಲಿ ಆಯಿತು. ಇಲ್ಲಿ ಉಪಾಧ್ಯಾಯರಾಗಿದ್ದ ಎಂ. ಆರ್. ಶ್ರೀನಿವಾಸ ಮೂರ್ತಿಗಳು ಶ್ರೀನಿವಾಸರಾಯರ ಅಚ್ಚು ಮೆಚ್ಚಿನ ಗುರುಗಳಾಗಿದ್ದರು. ಅವರ ಬಗೆಗೆ ಅಪಾರ ಗೌರವಾದರಗಳನ್ನು ಇಂದಿಗೂ ಉಳಿಸಿಕೊಂಡಿದ್ದಾರೆ. ತರುವಾಯ ಬೆಂಗಳೂರಿನ ಕೊಲಿಜಿಯೇಟ್ ಹೈಸ್ಕೂಲನ್ನು ಸೇರಿ ವ್ಯಾಸಂಗವನ್ನು ಮುಂದುವರಿಸಿದರು. ಕೊನೆಗೆ ಸೆಂಟ್ರಲ್ ಕಾಲೇಜನ್ನು ಸೇರಿ ಬಿ.ಎಸ್‌ಸಿ. ಪದವಿಯನ್ನು ಪಡೆದುಕೊಂಡರು. ಅದಾದ ಮೇಲೆ ಮದರಾಸಿನಲ್ಲಿ ಬಿ.ಎಲ್. ಪದವಿಯನ್ನು ಪಡೆದು ಬಂದರು. ಶ್ರೀಯುತರು ಬಿ.ಎಸ್‌ಸಿ. ಮುಗಿಸುತ್ತಿರುವಾಗಲೇ ಅವರ ಸೋದರಮಾವನವರ ಮಗಳಾದ ಪದ್ಮಮ್ಮ ಅವರೊಂದಿಗೆ ವಿವಾಹವಾಗಿತ್ತು.

ನಿಟ್ಟೂರು ಶ್ರೀನಿವಾಸರಾಯರು ಸೆಂಟ್ರಲ್ ಕಾಲೇಜಿನಲ್ಲಿ ಓದುತ್ತಿದ್ದಾಗಲೇ ಅಲ್ಲಿಯ ಕರ್ನಾಟಕ ಸಂಘದ ಸೇವೆಗೆ ತಮ್ಮನ್ನು ತೊಡಗಿಸಿಕೊಂಡರು. ಸೆಂಟ್ರಲ್ ಕಾಲೇಜಿನ ಕರ್ನಾಟಕ ಸಂಘ ೧೯೧೮ರಲ್ಲಿ ಪ್ರಾರಂಭವಾಯಿತು. ಇದು ರಾಜ್ಯದಲ್ಲೇ ಮೊಟ್ಟ ಮೊದಲನೆಯದಾಗಿತ್ತು. ಈ ಸಂಘ ಹೊರತರುತ್ತಿದ್ದ "ಪ್ರಬುದ್ಧ ಕರ್ಣಾಟಕ" ಅದರ ಜೀವನಾಡಿಯಾಗಿತ್ತು. ಈ ಪತ್ರಿಕೆಯ ಮಾರಾಟ ಮತ್ತು ಚಂದಾ ವಸೂಲಿಯಲ್ಲಿ ಶ್ರೀನಿವಾಸರಾಯರು ಪ್ರಮುಖ ಪಾತ್ರವಹಿಸಿದ್ದರು.

ಬಿ.ಎಸ್‌ಸಿ., ಬಿ.ಎಲ್. ಮುಗಿಸಿದ್ದ ಶ್ರೀನಿವಾಸರಾಯರು ಬೆಂಗಳೂರಿನ ಶಂಕರ ನಾರಾಯಣ ರಾಯರ ಕಛೇರಿಯಲ್ಲಿ ೧೯೨೭ರಲ್ಲಿ ವಕೀಲಿವೃತ್ತಿಯನ್ನು ಪ್ರಾರಂಭಿಸಿದರು. ಈ ವೃತ್ತಿಯಲ್ಲಿ ಗಣನೀಯ ಪ್ರಗತಿಯನ್ನು ಸಾಧಿಸಿದ ಶ್ರೀನಿವಾಸರಾಯರು ವಕೀಲರ

ಸಂಘದ ಮುಖ್ಯಸ್ಥರೂ ಆದರು. ಅದೇ ಅಲ್ಲದೆ ೧೯೫೩ರಲ್ಲಿ ಅಡ್ವೊಕೇಟ್ ಜನರಲ್ ಆಗಿಯೂ ನೇಮಕಗೊಂಡರು. ಜೊತೆಗೆ ೧೯೫೫ರಲ್ಲಿ ಕರ್ನಾಟಕ ಸರಕಾರದ ಉಚ್ಚನ್ಯಾಯಾಲಯದ ನ್ಯಾಯಮೂರ್ತಿಗಳಾಗಿ ನೇಮಕಗೊಂಡದ್ದಲ್ಲದೆ ೧೯೬೧ರಲ್ಲಿ ಮುಖ್ಯನ್ಯಾಯಾಧೀಶರಾಗಿಯೂ ಅಧಿಕಾರ ವಹಿಸಿಕೊಂಡರು. ಇದೇ ಅವಧಿಯಲ್ಲಿ ಕರ್ನಾಟಕ ರಾಜ್ಯದ ರಾಜ್ಯಪಾಲರಾಗಿಯೂ ಸೇವೆಯನ್ನು ಸಲ್ಲಿಸಿ ೧೯೬೩ರಲ್ಲಿ ನಿವೃತ್ತರಾದರು. ಅದಾದ ಮೇಲೆ ೧೯೬೪ರಲ್ಲಿ ಪ್ರಥಮ ವಿಜಿಲೆನ್ಸ್ ಕಮೀಶನರಾಗಿ ನೇಮಕಗೊಂಡು ೧೯೬೮ರಲ್ಲಿನಿವೃತ್ತರಾದರು. ಇದೇ ಅಲ್ಲದೆ ಸಂತಾನಂ ಸಮಿತಿಯ ಶಿಫಾರಸ್ಸಿಗೆ ಅನುಸಾರವಾಗಿ ಕೇಂದ್ರೀಯ ಭ್ರಷ್ಟಾಚಾರ ನಿರ್ಮೂಲನ ಸಮಿತಿಯ ಆಯುಕ್ತರಾಗಿಯೂ ಸೇವೆಯನ್ನು ಸಲ್ಲಿಸಿದ್ದಾರೆ.

ನಿಟ್ಟೂರು ಶ್ರೀನಿವಾಸರಾಯರು ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾಗಿದ್ದರು. ಅವರು ಗಾಂಧೀಜಿಯನ್ನು ಸಂದರ್ಶಿಸಿದ್ದರು. ಗಾಂಧೀಜಿ ಅವರ ಪ್ರಭಾವ ಅವರ ಮೇಲೆ ತುಂಬ ಪರಿಣಾಮ ಬೀರಿತು. ಇದರ ಪರಿಣಾಮವಾಗಿ ಶ್ರೀನಿವಾಸರಾಯರೂ ಅವರ ಶ್ರೀಮತಿ ಅವರೂ ಗಾಂಧೀಜಿ ಅವರ ಜೀವನ ಚರಿತ್ರೆಯನ್ನು ಕನ್ನಡಕ್ಕೆ ಅನುವಾದಿಸಿದರು. ಅಂತೆಯೇ ಭಗವದ್ಗೀತೆಯ ಅನಾಸಕ್ತಿಯೋಗವನ್ನು ಕನ್ನಡಕ್ಕೆ ಪರಿವರ್ತಿಸಿದರು.

ಕನ್ನಡ ಪ್ರಕಾಶನ ಸಾಹಿತ್ಯ ಚರಿತ್ರೆಯಲ್ಲಿ ಶ್ರೀನಿವಾಸರಾಯರ ಹೆಸರು ಶಾಶ್ವತವಾಗಿ ಉಳಿದಿರುವುದು, ಅವರು ೧೯೩೦ರಲ್ಲಿ ಪ್ರಾರಂಭಿಸಿದ ಸತ್ಯ ಶೋಧನ ಪ್ರಕಾಶನ ಮಂದಿರ ಮತ್ತು ಪುಸ್ತಕಾಲಯದಿಂದ. ಈ ಪ್ರಕಾಶನ ಸಂಸ್ಥೆಯಿಂದ ಪ್ರವರ್ಧಮಾನಕ್ಕೆ ಬರುತ್ತಿದ್ದ ಅನೇಕ ಸಾಹಿತಿಗಳಿಗೆ ಪ್ರೋತ್ಸಾಹ ನೀಡಿದರು. ಅವರ ಪುಸ್ತಕಗಳನ್ನು ಪ್ರಕಟಿಸಿದರು. ಯುವ ಪ್ರತಿಭೆಗಳಿಗೆ ಪ್ರೋತ್ಸಾಹ ನೀಡುವುದು ಈ ಪ್ರಕಾಶನ ಮಂದಿರದ ಧ್ಯೇಯೋದ್ದೇಶಗಳಲ್ಲಿ ಪ್ರಮುಖವಾಗಿತ್ತು. ಕರ್ನಾಟಕದ ಎಲ್ಲ ಭಾಗಗಳಲ್ಲೂ ಪ್ರಕಟವಾದ ಕನ್ನಡ ಪುಸ್ತಕಗಳೆಲ್ಲ ಒಂದೆಡೆ ಓದುಗರಿಗೆ ಲಭ್ಯವಾಗುವಂತೆ ಮಾಡಿದ್ದು ಅವರ ಮಹತ್ವದ ಸಾಧನೆಯಾಗಿದೆ.

ನಿಟ್ಟೂರು ಶ್ರೀನಿವಾಸರಾಯರಿಗೂ ಕನ್ನಡ ಸಾಹಿತ್ಯ ಪರಿಷತ್ತಿಗೂ ಹಲವಾರು ವರ್ಷಗಳಿಂದ ನಿಕಟ ಸಂಪರ್ಕವಿತ್ತು. ಶ್ರೀಯುತರು ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು, ಕನ್ನಡನುಡಿ, ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ ಮತ್ತು ಪರಿಷತ್ತಿನ ಮಹತ್ವದ ಪ್ರಕಟಣೆಗಳ ಬಗೆಗೆ ನಿರಂತರವಾಗಿ ತಮ್ಮ ಸಲಹೆ ಸೂಚನೆ ಮಾರ್ಗದರ್ಶನಗಳನ್ನು ನೀಡುತ್ತಾ ಬಂದಿದ್ದಾರೆ.

ಬರೋಡದಲ್ಲಿ ನಡೆದ ಹೊರನಾಡು ಕನ್ನಡಿಗರ ಸಮ್ಮೇಳನದ ಅಧ್ಯಕ್ಷತೆಯನ್ನು ವಹಿಸಿದ್ದುದು ಶ್ರೀನಿವಾಸರಾಯರ ಹೆಗ್ಗಳಿಕೆಯಾಗಿದೆ. ದಕ್ಷಿಣ ಭಾರತ ಹಿಂದಿ ಪ್ರಚಾರ

ಸಭೆಯು ಡಿ.ಲಿಟ್. ಪ್ರಶಸ್ತಿಯನ್ನು ಶ್ರೀನಿವಾಸರಾಯರಿಗೆ ಪ್ರದಾನ ಮಾಡಿದುದು ಕನ್ನಡಿಗರಿಗೆ ಸಂದ ಗೌರವವಾಗಿದೆ. ಹಲವಾರು ಸಾಮಾಜಿಕ ಮತ್ತು ಸಾಂಸ್ಕೃತಿಕ ಸಂಘ ಸಂಸ್ಥೆಗಳೊಂದಿಗೆ ನಿಕಟ ಸಂಪರ್ಕವನ್ನು ಶ್ರೀನಿವಾಸರಾಯರು ಇಂದಿಗೂ ಇಟ್ಟು ಕೊಂಡಿದ್ದಾರೆ.

ಒಂದು ಶತಮಾನವನ್ನು ಸಂಪೂರ್ಣವಾಗಿ ಕಂಡಿರುವ ನಿಟ್ಟೂರು ಶ್ರೀನಿವಾಸರಾಯರು ಪ್ರತಿನಿತ್ಯ ಒಂದಲ್ಲ ಒಂದು ಕಾರ್ಯದಲ್ಲಿ ತಮ್ಮನ್ನು ನಿರಂತರವಾಗಿ ತೊಡಗಿಸಿ ಕೊಂಡಿದ್ದಾರೆ. ಪರಿಶುದ್ಧವಾದ ನಡೆನುಡಿಗಳಿಂದ ಸರಳ ಸಜ್ಜನಿಕೆಯಿಂದ ಸಮಾಜದ ಎಲ್ಲ ವರ್ಗದವರ ಗೌರವಾದರಗಳಿಗೆ ಪಾತ್ರರಾಗಿದ್ದಾರೆ. ಸಾಹಿತಿಗಳಾಗಿ, ಸ್ವಾತಂತ್ರ್ಯ ಹೋರಾಟಗಾರರಾಗಿ, ನ್ಯಾಯಾಂಗವೇತ್ತರಾಗಿ, ಸಾಮಾಜಿಕ ಸಾಂಸ್ಕೃತಿಕ ಚಟುವಟಿಕೆಗಳ ನೇತಾರರಾಗಿ ಕರ್ಮಯೋಗಿಗಳಾಗಿ ಕರ್ನಾಟಕಕ್ಕೆ ಭೂಷಣಪ್ರಾಯರೆನಿಸಿದ್ದಾರೆ. ಈ ಹಿರಿಯ ಚೇತನವನ್ನು ಕನ್ನಡ ಜನತೆ ಅತ್ಯಾದರಾಭಿಮಾನಗಳಿಂದ ಸತ್ಕರಿಸಿ ಸನ್ಮಾನಿಸಿ ಗೌರವಿಸುತ್ತಿರುವುದು ಸಾರ್ಥಕವಾಗಿದೆ.



# ಸಮಕಾಲೀನನ ಶುಭ ಹಾರೈಕೆ

. . . . . . . . . . . . . . . . . . . . . . ✍ *ಪಿ. ರಾಜಗೋಪಾಲಾಚಾರ್**

"ಶತಮಾನಂ ಭವತಿ, ಶತಾಯುಃ ಪುರುಷಃ ಶತೇಂದ್ರಿಯ, ಆಯುಷ್ಯೇವೇಂದ್ರಿಯೈ ಪ್ರತಿತಿಷ್ಠತಿ." ಇದು ನಮ್ಮ ಸಂಪ್ರದಾಯದಲ್ಲಿನ ಶುಭ ಹಾರೈಕೆ. "ನೂರುವರ್ಷ ಬಾಳಲಿ, ನೂರವರ್ಷ ಇಂದ್ರಿಯಪಟುವಾಗಿ ಅಂದರೆ ಆರೋಗ್ಯವಂತನಾಗಿ ಬಾಳಲಿ" ಎಂಬುದು ಇದರ ಆಶಯ. ಮಾನವನ ಆಯಸ್ಸು ನೂರುವರ್ಷ ಎನ್ನುತ್ತಾರೆ. ಆದರೆ ನೂರುವರ್ಷ ಕಾಣುವ ಜನ ಎಷ್ಟು ಮಂದಿ? ಕಂಡರೂ ಇಂದ್ರಿಯಪಟುತ್ವ ಉಳ್ಳವರು, ದೈಹಿಕವಾಗಿ ಮತ್ತು ಮಾನಸಿಕವಾಗಿ ಆರೋಗ್ಯವುಳ್ಳವರು, ಉತ್ಸಾಹ ಆಸಕ್ತಿಗಳನ್ನು ಕಳೆದುಕೊಳ್ಳದವರು ಇನ್ನೂ ವಿರಳ. ಆ ವಿರಳ ವ್ಯಕ್ತಿಗಳಲ್ಲಿ ನಮ್ಮ ನಿಟ್ಟೂರು ಶ್ರೀನಿವಾಸರಾಯರು ಒಬ್ಬರು, ಪ್ರಮುಖರು. ಅದೇ ರೀತಿಯ ಉತ್ಸಾಹಿ ವೃದ್ಧ ಯುವಕರು ಶ್ರೀ ಎ.ಎನ್.ಮೂರ್ತಿರಾಯರು, ಸಾಹಿತಿಶ್ರೇಷ್ಠರು. ಈ ಇಬ್ಬರೂ ಹೆಚ್ಚು ಕಡಿಮೆ ಸಮವಯಸ್ಕರು. ಇಬ್ಬರೂ ನಾಡು ನುಡಿಗಳಿಗೆ ಸಂಸ್ಕೃತಿಯ ರಂಗಕ್ಕೆ ಅಪಾರ ಕೊಡುಗೆ ಇತ್ತ ಮಹಾನುಭಾವರು.

ಇದೇ ತಾನೇ ನೂರಕ್ಕೆ ಅಡಿ ಇಟ್ಟಿರುವ ಶ್ರೀ ನಿಟ್ಟೂರು ಶ್ರೀನಿವಾಸರಾಯರದು ದೀರ್ಘ ಜೀವನ ಮಾತ್ರವಲ್ಲ, ವಿಶಾಲ ಅನುಭವದ ಜೀವನ ಕೂಡ; ವೈವಿಧ್ಯಮಯ ಸೇವೆಯ ಜೀವನವೂ ಕೂಡ.

---

* ನಂ. ೧೪೭/೨೯, ೧೪ನೇ ಕ್ರಾಸ್, ವೈಯಾಲಿಕಾವಲ್
ಮಲ್ಲೇಶ್ವರಂ, ಬೆಂಗಳೂರು - ೫೬೦ ೦೦೩

ಮೂಲತಃ ತುಮಕೂರು ಜಿಲ್ಲೆಯ ನಿಟ್ಟೂರು ಸೀಮೆಯವರಾದ ಶ್ರೀನಿವಾಸರಾಯರು ಎಳೆತನ ಕಳೆದದ್ದು ಚಿತ್ರದುರ್ಗ ಜಿಲ್ಲೆಯಲ್ಲಿ. ಅವರ ಪ್ರಾರಂಭಿಕ ಶಿಕ್ಷಣವೂ ಅಲ್ಲೆ. ಮುಂದೆ ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಪದವಿ ವ್ಯಾಸಂಗ, ಆಗಲೇ ಅಲ್ಲಿ ಕನ್ನಡ ಅಧ್ಯಾಪಕರಾಗಿದ್ದ ಎ.ಆರ್. ಕೃಷ್ಣಶಾಸ್ತ್ರಿಗಳು ಆರಂಭಿಸಿದ್ದ ಕರ್ನಾಟಕ ಸಂಘದ ಮೂಲಕ ಸಾಹಿತ್ಯ ಸೇವೆಗೆ ಪ್ರವೇಶ. ನಮ್ಮನಾಡಿನ ಕನ್ನಡ ಸಂಸ್ಥೆಗಳ ಪೈಕಿ ಸೆಂಟ್ರಲ್ ಕಾಲೇಜು ಕರ್ನಾಟಕ ಸಂಘ ಒಂದು ಶ್ರೇಷ್ಠ ಸಂಸ್ಥೆ ಆಗಿತ್ತು. ಕೃಷ್ಣಶಾಸ್ತ್ರಿಗಳ ಸ್ಫೂರ್ತಿದಾಯಕ ಪ್ರೇರಣೆಯಿಂದ ಆ ಸಂಘ ಕನ್ನಡ ನವೋದಯದ ಹರಿಕಾರನಾಗಿ, ವಿಶಿಷ್ಟ ಸೇವೆ ಮಾಡಿತು. ಆ ಕಾಲದಲ್ಲಿ ಶ್ರೀನಿವಾಸರಾಯರು ಆ ಸಂಘದ ಕಾರ್ಯದರ್ಶಿಯಾಗಿದ್ದರು. ಮುಂದೆ ಮದರಾಸಿಗೆ ಹೋಗಿ ಕಾನೂನು ಪದವಿ ಪಡೆದು ಬಂದ ಮೇಲೆ ಬೆಂಗಳೂರಿನಲ್ಲಿ ವಕೀಲಿ ಕೆಲಸ ಆರಂಭಿಸಿದರು. ಬೆಂಗಳೂರಿನಲ್ಲಿ ಕೋಟೆ ಆಂಜನೇಯನ ಗುಡಿಯ ಪಕ್ಕದಲ್ಲೆ ಅವರ ವಕೀಲಿ ಕಚೇರಿ. ಅದು ಕೇವಲ ವಕೀಲಿ ವ್ಯವಹಾರದ ಸ್ಥಳ ಮಾತ್ರ ಆಗಿರಲಿಲ್ಲ. ಸಾಹಿತಿಗಳು, ಚಿಂತಕರು, ರಾಷ್ಟ್ರಭಕ್ತರು, ಸಮಾಜ ಸೇವಾಸಕ್ತರು ಅವರೆಲ್ಲ ಕಲೆಯುವ ಕ್ಷೇತ್ರವಾಗಿತ್ತು. ಗಾಂಧೀಪ್ರಣೀತ ರಚನಾತ್ಮಕ ಕಾರ್ಯವಾದ ಖಾದಿಯ ನೆಲೆ ಪಕ್ಕದಲ್ಲೆ ಇತ್ತು, ಕೋಟೆ ಖಾದಿ ವಸ್ತ್ರಾಲಯ. ದೇಶದಲ್ಲಿ ವಾತಾವರಣವೆಲ್ಲ ರಾಷ್ಟ್ರಪ್ರೇಮ, ಸ್ವಾತಂತ್ರ್ಯ ಹೋರಾಟದ ಭಾವನೆಗಳಿಂದ ತುಂಬಿ ತುಳುಕುತ್ತಿತ್ತು. ನಾವೆಲ್ಲ ಆ ಭಾವನೆಗಳಿಂದ ಉದ್ದೀಪಿತರಾಗಿ ರಾಷ್ಟ್ರಸೇವೆಗೆ ಸೇರಿದೆವು. ಶ್ರೀನಿವಾಸರಾಯರೂ ಹಾಗೆಯೇ. ಖಾದಿ ಅವರ ದೀಕ್ಷೆ ಆಯಿತು. ಸ್ವತಃ ತಾವೇ ಚಳವಳಿಗೆ ಧುಮುಕಿ ಜೈಲಿಗೆ ಹೋಗದೆ ಇದ್ದರೂ ರಾಯರು ಪರೋಕ್ಷವಾಗಿ ಸ್ವಾತಂತ್ರ್ಯ ಹೋರಾಟಕ್ಕೆ ಸಲ್ಲಿಸಿದ ಸೇವೆ ಅಪಾರ. ಕ್ರಾಂತಿಕಾರಿಗಳಿಗೆ ಹೋರಾಟಗಾರರಿಗೆ ನೆರವು, ಅಗತ್ಯ ಮಾಹಿತಿ ಪ್ರಸಾರ, ಸಾಹಿತ್ಯ ಪ್ರಸಾರ, ಆಶ್ರಯ ಹೀಗೆ ನಾನಾ ಬಗೆಯಾಗಿ ತೆರೆಮರೆಯಲ್ಲಿ ಸೇವೆ ಸಲ್ಲಿಸಿದರು.

ಗಾಂಧೀಜಿಯ ಆತ್ಮಕಥೆ ಲೋಕಪ್ರಸಿದ್ಧ. ಅದರ ಮೊಟ್ಟಮೊದಲ ಕನ್ನಡ ಅನುವಾದ "ಸತ್ಯ ಶೋಧನೆ" ಎಂಬ ಹೆಸರಿನಲ್ಲಿ ೫ ಭಾಗಗಳಲ್ಲಿ ಬಂತು. ಅದು ಉಂಟುಮಾಡಿದ ಪರಿಣಾಮ ಅದ್ಭುತ. ಕನ್ನಡ ಜನಕ್ಕೆ ಮಹಾತ್ಮರ ಮಹಾಜೀವನ ಯಾತ್ರೆಯ ಪರಿಚಯಮಾಡಿಕೊಟ್ಟು, ಸಾವಿರಾರು ಯುವಜನಕ್ಕೆ ಪ್ರೇರಣೆ ನೀಡಿತು. ಆ ಗ್ರಂಥದ ಅನುವಾದಕರು "ಇಬ್ಬರು ಕನ್ನಡಿಗರು". ಇದು ಯಾರು ಎಂಬುದು ಅನೇಕ ವರ್ಷಗಳವರೆಗೆ ಗೊತ್ತೇ ಆಗಲಿಲ್ಲ. ಆ ಇಬ್ಬರು ಪುಣ್ಯಜೀವಿಗಳೇ ನಿಟ್ಟೂರು ಶ್ರೀನಿವಾಸರಾವ್ ದಂಪತಿಗಳು. ಅವರ ಪತ್ನಿ ಪದ್ಮಮ್ಮನವರು ಹಿಂದೆ ಮಹಾರಾಜರ ಕಾಲದಲ್ಲಿ ಮೊದಲ ಸಚಿವರಾಗಿದ್ದ ಸರ್ ಎಂ. ಎನ್. ಕೃಷ್ಣರಾವ್ ಅವರ ಮಗಳು. ಈ ಇಬ್ಬರು ದಂಪತಿಗಳೂ

ರಾಷ್ಟ್ರಪ್ರೇಮದಿಂದ ಪ್ರಚೋದಿತರಾಗಿ, ಗಾಂಧೀ ನಿಷ್ಠೆಯಿಂದ ಪ್ರೇರಿತರಾಗಿ, "ಸತ್ಯ ಶೋಧನೆ"ಯನ್ನು ಕನ್ನಡಿಗರಿಗೆ ಕೊಟ್ಟದ್ದು ಮಹತ್ತರ ಕೊಡುಗೆ. ಅಲ್ಲಿಗೆ ನಿಲ್ಲದೆ ಶ್ರೀನಿವಾಸರಾಯರು 'ಸತ್ಯ ಶೋಧನ ಭಂಡಾರ' ಎಂಬ ಪುಸ್ತಕ ಪ್ರಕಟನಾಲಯ, ಮಾರಾಟ ಸಂಸ್ಥೆಯನ್ನೇ ತೆರೆದರು. ಅನೇಕ ನವ ಸಾಹಿತಿಗಳಿಗೆ ಪ್ರೋತ್ಸಾಹ ಆಶ್ರಯವಿತ್ತು. ಆಧುನಿಕ ಕನ್ನಡ ಸಾಹಿತ್ಯಕ್ಕೆ ಸತ್ಯ ಶೋಧನ ಭಂಡಾರ ಸಲ್ಲಿಸಿದ ಸೇವೆ ತುಂಬ ವಿಶೇಷವಾದುದು.

ಶ್ರೀನಿವಾಸರಾಯರು ವೃತ್ತಿಯಲ್ಲಿ ವಕೀಲರು. ಸಾಕಷ್ಟು ಯಶಸ್ವೀ ವಕೀಲರು. ಅನಂತರ ರಾಜ್ಯದ ಅಡ್ವೊಕೇಟ್ ಜನರಲ್ ಆದರು. ಹೈಕೋರ್ಟ್ ನ್ಯಾಯಾಧೀಶರು, ಮುಖ್ಯ ನ್ಯಾಯಾಧೀಶರೂ ಆದರು. ಆಗಲೇ ಅವರು ರಾಜ್ಯದ ರಾಜ್ಯಪಾಲರೂ ಆಗಿ ಕೆಲವು ತಿಂಗಳು ಕೆಲಸ ಮಾಡಿದರು. ಶ್ರೀ ಲಾಲಬಹದೂರ್ ಶಾಸ್ತ್ರಿ ಅವರು ಪ್ರಧಾನಮಂತ್ರಿ ಆಗಿದ್ದಾಗ, ಶ್ರೀನಿವಾಸರಾಯರನ್ನು ಆರಿಸಿ ಕೇಂದ್ರದಲ್ಲಿ ವಿಜಿಲೆನ್ಸ್ ಕಮೀಶನರ್ ಆಗಿ ನೇಮಿಸಲಾಗಿತ್ತು. ಹೀಗೆ ಶ್ರೀನಿವಾಸರಾಯರು ವೃತ್ತಿಯಲ್ಲಿ, ಆಡಳಿತದಲ್ಲಿ ಹಲವಾರು ಉನ್ನತ ಸ್ಥಾನಗಳಲ್ಲಿದ್ದು, ಅಸ್ಖಲಿತವಾದ ಸೇವೆ ಸಲ್ಲಿಸಿದರು.

ಸಾರ್ವಜನಿಕ ಕ್ಷೇತ್ರದಲ್ಲಂತೂ ರಾಯರ ಆಸಕ್ತಿ, ಸೇವೆಗೆ ಮಿತಿಯೇ ಇಲ್ಲ. ಕನ್ನಡ ಸಾಹಿತ್ಯ ಪರಿಷತ್ತು, ಸಾಹಿತ್ಯ ಸಮ್ಮೇಳನಗಳು, ಗಾಯನ ಸಮಾಜ, ಸರ್ವೋದಯ ಸಂಘ, ಭಾರತೀಯ ವಿದ್ಯಾಭವನ, ಗಾಂಧೀ ಸ್ಮಾರಕ ನಿಧಿ, ಗಾಂಧೀ ಶಾಂತಿ ಪ್ರತಿಷ್ಠಾನ, ಲೋಕ ಶಿಕ್ಷಣ ಟ್ರಸ್ಟ್, ವಕೀಲರ ಸಂಘ, ಬಿ.ಎಂ.ಶ್ರೀ. ಪ್ರತಿಷ್ಠಾನ ಮುಂತಾದ ಅನೇಕ ಸಂಘ ಸಂಸ್ಥೆಗಳು ಶ್ರೀನಿವಾಸರಾಯರ ಅಮೋಘ ಸೇವೆಯನ್ನು ಪಡೆದಿವೆ. ಇವು ಕೆಲವು ಉದಾಹರಣೆ ಮಾತ್ರ. ಈ ಸಂಘ ಸಂಸ್ಥೆಗಳ ಪಟ್ಟಿ ಭಾರಿಯಾದುದು.

ಇದರಲೆಲ್ಲ ಬಹುದೀರ್ಘ ಸೇವೆ ಸಂದಿರುವುದು ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆಗೆ. ಪೂಜ್ಯ ಡಿ.ವಿ.ಜಿ. ೧೯೪೫ರಲ್ಲಿ ಆರಂಭಿಸಿದ ಈ ಮಹಾನ್ ಸಂಸ್ಥೆಯಲ್ಲಿ ಶ್ರೀನಿವಾಸರಾಯರು ಮೊದಲಿನಿಂದಲೂ ಡಿವಿಜಿ ಅವರಿಗೆ ಬಲಗೈಯಾಗಿ ನಿಂತು ತಮ್ಮ ಅನುಭವವನ್ನು, ಸಾಮರ್ಥ್ಯವನ್ನು, ಸಮಯವನ್ನು ಸಂಸ್ಥೆಯ ಮೇಲ್ಮೆಗಾಗಿ ಧಾರೆ ಎರೆದಿದ್ದಾರೆ. ಡಿವಿಜಿಯ ಕಾಲಾನಂತರ ರಾಯರೇ ಅದರ ಕಾರ್ಯದರ್ಶಿಗಳಾಗಿದ್ದು ಇತ್ತೀಚಿನವರೆಗೂ ಅಂದರೆ ೨೦೦೧ರವರೆಗೂ ಸಂಸ್ಥೆಯನ್ನು ನಡೆಸಿದ್ದಾರೆ.

ಮಲ್ಲೇಶ್ವರದ ನಮ್ಮ ಗಾಂಧೀ ಸಾಹಿತ್ಯ ಸಂಘವನ್ನು ಸಿದ್ಧವನಹಳ್ಳಿ ಕೃಷ್ಣಶರ್ಮರು ೧೯೪೨ರಲ್ಲಿ ಆರಂಭಿಸಿದರು. ಶರ್ಮಾಜಿಯ ಆಪ್ತಮಿತ್ರರಾದ ನಿಟ್ಟೂರು ಶ್ರೀನಿವಾಸ ರಾಯರು ಆಗಿನಿಂದಲೂ ನಮ್ಮ ಸಂಘದ ಅತ್ಯಂತ ಅಭಿಮಾನಿಗಳೂ ಆತ್ಮೀಯರೂ

ಆದ ಹಿರಿಯ ಮಿತ್ರರಾಗಿದ್ದಾರೆ. ಇತ್ತೀಚೆಗೆ ಅಕ್ಟೋಬರ್‌ನಲ್ಲಿ, ಸಂಘದ ವಜ್ರ ಮಹೋತ್ಸವವನ್ನು ಉದ್ಘಾಟಿಸಿ ಹರಸಿದ್ದಾರೆ.

ಬಹುಶಃ ಇಂದು ನಮ್ಮ ನಾಡಿನಲ್ಲಿ ನಿಟ್ಟೂರು ಶ್ರೀನಿವಾಸರಾಯರಷ್ಟು ವಿಶಾಲವಾದ ವೈವಿಧ್ಯಮಯವಾದ ಸೇವಾನುಭವ ಉಳ್ಳ ವ್ಯಕ್ತಿ ಇನ್ನೊಬ್ಬರು ಇಲ್ಲ ಅಂದರೆ ಅತಿಶಯೋಕ್ತಿ ಆಗಲಾರದು. ಸಾಹಿತ್ಯ, ರಾಜಕಾರಣ, ಆಡಳಿತ, ವಕೀಲಿ, ಸಮಾಜಸೇವೆ, ಸಂಘಟನೆ, ಖಾದಿ, ಮುಂತಾದ ಅನೇಕ ಕ್ಷೇತ್ರಗಳಲ್ಲಿ ಶ್ರೀನಿವಾಸರಾಯರಷ್ಟು ಅನುಭವ ಉಳ್ಳವರು ಬೇರೆ ಯಾರಿದ್ದಾರೆ?

ವಯಸ್ಸಿನಲ್ಲಿ ಶ್ರೀನಿವಾಸರಾಯರಿಗೆ ಹತ್ತಿರದಲ್ಲೇ ಇರುವವನು ನಾನು. ಅವರಂತೆಯೇ ಸಾರ್ವಜನಿಕ ಸೇವಾರಂಗದ ಸಂಪರ್ಕ ಉಳ್ಳವನು. ನನಗೆ ಹಿರಿಯಣ್ಣನಂತಿರುವ ನಿಟ್ಟೂರು ಶ್ರೀನಿವಾಸರಾಯರ ವ್ಯಕ್ತಿತ್ವಕ್ಕೆ ನನ್ನ ನಮನ ಸಲ್ಲಿಸಿ, ಆರಂಭದಲ್ಲಿ ಉಲ್ಲೇಖಿಸಿದ ಪ್ರಾಚೀನ ಶುಭಾಶಯವನ್ನೇ ಮತ್ತೆ ಉಚ್ಚರಿಸಿ ವಂದಿಸುವುದು ನನ್ನ ಭಾಗ್ಯವೇ ಸರಿ.

> **"ಶತಮಾನಂ ಭವತಿ, ಶತಾಯುಃ ಪುರುಷಃ**
> **ಶತೇಂದ್ರಿಯಃ ಆಯುಷೇನೇಂದ್ರಿಯೇಃ ಪ್ರತಿತಿಷ್ಠತಿ"**

ಶ್ರೀನಿವಾಸರಾಯರ ಮಾರ್ಗದರ್ಶನ ನಾಡಿಗೆ ಇನ್ನೂ ಬಹುಕಾಲ ಕೂಡಿ ಬರಲಿ.



# ನನ್ನ ಕಣ್ಣಿನಲ್ಲಿ ನಿಟ್ಟೂರು

. . . . . . . . . . . . . . . . . . . . . ✍ ಡಾ|| ವಿಜಯಾ ಸುಬ್ಬರಾಜ್*

ಒಂದೆರಡು ದಶಕಗಳ ಹಿಂದಿನಿಂದಲೂ ನಾನು ಮೇಲಿಂದ ಮೇಲೆ ನಿಟ್ಟೂರರ ಹೆಸರನ್ನು ಕೇಳುತ್ತಿದ್ದೆ; ಕಾಣುತ್ತಿದ್ದೆ. ಪ್ರತಿಸಲವೂ ಈ ವ್ಯಕ್ತಿ ನನಗೆ ಕುತೂಹಲಕರವಾಗಿ ಕಾಣಿಸುತ್ತಿದ್ದ ದೈನಂದಿನ ಪತ್ರಿಕೆಗಳಲ್ಲಿ ಯಾವುದಾದರೂ ಒಂದು ಕಾರ್ಯಕ್ರಮಕ್ಕೆ ಸಂಬಂಧಿಸಿದಂತೆ ನಿಟ್ಟೂರರ ಹೆಸರು ಕಾಣಿಸಿಕೊಳ್ಳುತ್ತಿತ್ತು. ಹೆಚ್ಚು ಕಡಿಮೆ ನಾಲ್ಕು ದಶಕಗಳ ಹಿಂದೆಯೇ ನಿವೃತ್ತರಾದ ನಿಟ್ಟೂರರು ಇಷ್ಟೊಂದು ಪ್ರೀತಿ, ವಿಶ್ವಾಸ, ಪ್ರಾಮುಖ್ಯತೆಗಳನ್ನು ಗಳಿಸಿಕೊಂಡಿದ್ದಾರೆಂದರೆ ಇವರ ವ್ಯಕ್ತಿತ್ವದ ಆಕರ್ಷಣೆಯ ಸೆಲೆ ಎಲ್ಲಿರಬಹುದೆಂಬ ಅನುಮಾನ ನನ್ನನ್ನು ಕಾಡತೊಡಗಿತು. ಈ ಅನುಮಾನಕ್ಕೆ ಉತ್ತರ, ಪರಿಹಾರಗಳು ದೊರಕುವಂತೆ ಒಂದೆರಡು ಕಾರ್ಯಕ್ರಮಗಳಲ್ಲಿ ಮುಖಾಮುಖಿಯಾಗಿ ಭೇಟಿಯಾಗುವ ಅವಕಾಶ ದೊರೆಯಿತು. ಅವರೆದುರು ನಾವೆಷ್ಟೆ ಸಣ್ಣವರಾದರೂ ನಮ್ಮನ್ನು ತಮ್ಮೆಡೆಗೆ ಸೆಳೆದುಕೊಳ್ಳುವ ರೀತಿ ನನಗೆ ಆಶ್ಚರ್ಯ ಹುಟ್ಟಿಸಿತು. ಎಲ್ಲಿಯೇ ಎದುರಾದರೂ ನನಗಿಂತ ಮೊದಲೇ ಮುಗ್ಧ, ನಿಷ್ಕಲ್ಮಶ, ನಗೆಯೊಂದನ್ನು ಎಸೆಯುತ್ತ ಕೈಮುಗಿವ ಅವರ ದೊಡ್ಡತನ, ವಿನಯವಂತಿಕೆಗಳು ನನ್ನನ್ನು ಮೂಕ ವಿಸ್ಮಯಕ್ಕೆ ತಳ್ಳುತ್ತಿತ್ತು. ನನ್ನ ಭಾಷಣಗಳ ಬಗ್ಗೆ ಮೆಚ್ಚಿ ನುಡಿದ ಅವರ ಮಾತುಗಳು ನನಗೆ ಹೆಮ್ಮೆಯ ಗರಿ ಮೂಡಿಸಿತು. ಒಳಗೊಳಗೇ ಅವರನ್ನು ಗೌರವಿಸತೊಡಗಿದೆ; ಮೆಚ್ಚತೊಡಗಿದೆ.

---

* ೩೪೭, ೧೩ನೇ 'ಬಿ' ಕ್ರಾಸ್, ವೈಯಾಲಿಕಾವಲ್
ಬೆಂಗಳೂರು - ೫೬೦೦೦೩

ಅವರ ಜೀವನ ವ್ಯಕ್ತಿತ್ವಗಳನ್ನು ತಿಳಿದುಕೊಳ್ಳಲು ತವಕಿಸಿದೆ. ನಿವೃತ್ತ, ಉಚ್ಚ ನ್ಯಾಯಾಲಯದ ನ್ಯಾಯಮೂರ್ತಿಗಳು, ಸಮಾಜ ಸೇವಾಕರ್ತರು, ಅನೇಕ ಸಾಮಾಜಿಕ ಸಂಘ, ಸಂಸ್ಥೆಗಳೊಂದಿಗೆ ಸಂಬಂಧವಿರಿಸಿಕೊಂಡು, ಸಾಹಿತಿಗಳ ಸಾಂಗತ್ಯ, ಒಡನಾಟ ಗಳನ್ನು ಇರಿಸಿಕೊಂಡು ಸದಾಕಾಲ ಕ್ರಿಯಾಶೀಲರಾಗಿ ಹಲವು ಸಾಮಾಜಿಕ, ಸಾಂಸ್ಕೃತಿಕ, ಸಾಹಿತ್ಯಕ, ಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿರುವ ಇವರಿಗೆ ನೂರುವರ್ಷದ ಹೊಸ್ತಿಲು ತುಳಿದರೂ ದಣಿವು, ಬೇಸರಗಳೆಂಬುದಿಲ್ಲ. ಸ್ವಾರ್ಥ, ಕಲ್ಮಶಗಳೆಂಬುದಿಲ್ಲ. ಕೃಶದೇಹದ, ಎತ್ತರದ ಇವರು ನಡೆದಾಡುವಾಗಲೆಲ್ಲ ನನಗೇಕೋ ಗಾಂಧಿಯ ನೆನಪನ್ನೇ ತರುತ್ತಾರೆ. ಗಾಂಧಿಯನ್ನು ಕಾಣದಿದ್ದರೂ ಗಾಂಧಿಯ ಭಾವ ಇವರು ಮೂಡಿಸುತ್ತಿರುವುದೇ ನನಗೆ ಸಮಾಧಾನ. ಇವರ ಬಗ್ಗೆ ಬರೆಯಬೇಕೆಂದೆನಿಸಿದಾಗ, ಇವರ ಯಾವ ಮುಖವನ್ನು ಕುರಿತು ಬರೆಯಬೇಕೋ ನನಗೆ ಹೊಳೆಯುವುದಿಲ್ಲ.

ಅದ್ಭುತ ಪ್ರತಿಭೆ, ಜ್ಞಾಪಕ ಶಕ್ತಿಗಳ ಮೂಲಕ ಭೂತಕಾಲದ ಸಂಸ್ಕೃತಿಯೊಂದನ್ನು ಅನಾವರಣ ಮಾಡುತ್ತಾರೆ. ತಮ್ಮೊಂದಿಗೆ ತಮ್ಮ ಕಾಲದ ಎಲ್ಲ ಅನುಭವಗಳನ್ನು ಹಂಚಿಕೊಂಡು ಒಡನಾಡಿದ ರಾಜಕಾರಣಿಗಳ, ಸಾಹಿತಿಗಳ, ಕಲಾವಿದರ, ಚಿಂತಕರ, ಸಮಾಜ ಸುಧಾರಕರ, ದೇಶಪ್ರೇಮಿಗಳ, ಸ್ವಾತಂತ್ರ್ಯ ಹೋರಾಟಗಾರರ ಕುರಿತಾಗಿ ಗಂಟೆಗಟ್ಟಲೆ ನಿರರ್ಗಳವಾಗಿ ಮಾತಾಡಬಲ್ಲರು; ಮೆಲುಕು ಹಾಕಬಲ್ಲರು. ಸುದೀರ್ಘ ಆಯುಷ್ಯದ ಅವಧಿಯಲ್ಲಿ ಏನೆಲ್ಲವನ್ನೂ ಕಂಡಿದ್ದಾರೆ. ಸ್ವಾತಂತ್ರ್ಯ ಸಂಗ್ರಾಮ, ಗಾಂಧೀಜಿ, ಭಾರತದ ಪ್ರತ್ಯೇಕೀಕರಣ ಅಥವಾ ವಿಭಜನೆ ಇತ್ಯಾದಿಗಳನ್ನು ಸ್ವತಃ ಕಂಡವರು. ನೇರವಾಗಿ ಸ್ವಾತಂತ್ರ್ಯ ಹೋರಾಟದಲ್ಲಿ ತೊಡಗಿಸಿಕೊಳ್ಳದಿದ್ದರೂ ಹೋರಾಟದ ಮುಂಚೂಣಿಯಲ್ಲಿದ್ದ ಗಾಂಧಿಯ ಆದರ್ಶವ್ಯಕ್ತಿತ್ವ, ಅವರ ತಾತ್ವಿಕ ಚಿಂತನೆಗಳು, ಅವರ ಕಾಣ್ಕೆಗಳು, ಕನಸುಗಳು ಎಲ್ಲವನ್ನೂ ತಮ್ಮ ಅಂತರಂಗದಲ್ಲಿ ನೆಲೆಗೊಳಿಸಿಕೊಂಡು ಅಪ್ಪಟ ಗಾಂಧೀವಾದಿಯಾಗಿ ಇಂದಿಗೂ ಉಳಿದಿರುವ ಇವರ ಬದ್ಧತೆ ಮತ್ತು ತತ್ವ ನಿಷ್ಠೆಗಳು ನಿಜಕ್ಕೂ ಆದರ್ಶಪ್ರಾಯ ವಾಗಿವೆ. ಅವರು ನಂಬಿದ ಮೌಲ್ಯಗಳೇ ಅವರ ವೃತ್ತಿಗೆ, ವ್ಯಕ್ತಿತ್ವಕ್ಕೆ ಗೌರವ-ಪ್ರತಿಷ್ಠೆಗಳನ್ನು ತಂದುಕೊಟ್ಟಿರಬೇಕೆಂಬುದರಲ್ಲಿ ಅನುಮಾನವಿಲ್ಲ. ಮಾಡುವ ವೃತ್ತಿ, ಕೆಲಸಗಳಲ್ಲಿಯೇ ದೇವರನ್ನು ಕಾಣುವಂತಹ ನಿಟ್ಟೂರರಿಗೆ ದೇವರಲ್ಲಿ ನಂಬಿಕೆಯಿಲ್ಲವೆಂದರೆ ಯಾವುದೇ ಆಕ್ಷೇಪವಿರಲಾರದು. ಕಾಣದ ದೇವರ ಹೆಸರಲ್ಲಿ ಕಾಲಹರಣ ಮಾಡುವುದ ಕ್ಕಿಂತ, ಕೆಲಸಗಳಲ್ಲಿ ಹೆಚ್ಚಿಗೆ ತೊಡಗಿಸಿಕೊಂಡರೆ ಪ್ರಯೋಜನಕಾರಿಯಾದೀತೆಂಬುದು ಅವರ ನಂಬಿಕೆ. ಇಂತಹ ನಂಬಿಕೆಯೇ ಅವರನ್ನು ಅವಿರತವಾಗಿ ಸಮಾಜಸೇವೆ, ಸಾಹಿತ್ಯಸೇವೆ, ರಾಷ್ಟ್ರಸೇವೆಗಳಲ್ಲಿ ತೊಡಗಿಸಿಕೊಳ್ಳಲು ಪ್ರೇರಣೆಯಾಗಿರಬೇಕೆನಿಸಿತು. ಗಾಂಧಿ ಶಾಂತಿಪ್ರತಿಷ್ಠಾನ, ಗಾಂಧಿ ಸ್ಮಾರಕನಿಧಿ, ಸರ್ವೋದಯ ಸಂಘ, ಗೋಖಲೆ ಸಾರ್ವಜನಿಕ

ವಿಚಾರ ಸಂಸ್ಥೆ. ಬಿ.ಎಂ.ಶ್ರೀ. ಪ್ರತಿಷ್ಠಾನ ಮುಂತಾದ ಸಂಘ ಸಂಸ್ಥೆಗಳೊಂದಿಗೆ ಸಂಬಂಧವಿರಿಸಿಕೊಂಡು ಅವುಗಳ ಕಾರ್ಯ ಚಟುವಟಿಕೆ, ಧ್ಯೇಯ ಧೋರಣೆಗಳಿಗೆ ತಮ್ಮನ್ನು ಒಪ್ಪಿಸಿಕೊಂಡಿರಬೇಕೆನಿಸಿತು. ಸಾಮಾಜಿಕ ಕೆಲಸಗಳಲ್ಲಿ ಹೇಗೆ ಶ್ರದ್ಧೆ ಮತ್ತು ಕ್ರಿಯಾಶೀಲತೆಗಳೊಂದಿಗೆ ತೊಡಗಿಸಿಕೊಂಡರೋ ಹಾಗೆಯೇ ಸಾಹಿತ್ಯ ಜಗತ್ತಿನೊಂದಿಗೂ ಆತ್ಮೀಯ ಸಂಬಂಧವನ್ನು ಇರಿಸಿಕೊಂಡಿದ್ದೇ ಅಲ್ಲದೆ ತಮಗೇ ಬರೆಯುವ ಸಾಮರ್ಥ್ಯವಿದ್ದರೂ, ಸಾಮರ್ಥ್ಯ ಪ್ರತಿಭೆಗಳಿರುವ ತಮ್ಮ ಸಮಕಾಲೀನ ಬರಹಗಾರರಾದ ಎಂ.ಆರ್.ಶ್ರೀ., ವಿ.ಸೀ. ಗೊರೂರು, ಎಲ್. ಗುಂಡಪ್ಪ, ಸಂಸ, ಆನಂದ, ರಾಮರಾವ್, ಕೈವಾರ ರಾಜಾರಾವ್ ಮೊದಲಾದವರನ್ನು ಗುರುತಿಸಿ, ತಮ್ಮ ಸತ್ಯ ಶೋಧನ ಪ್ರಕಾಶನದ ಮೂಲಕ ಬೆಳಕಿಗೆ ತಂದು ಇಂದು ಸಾಹಿತ್ಯ ಪ್ರಪಂಚದಲ್ಲಿ ಇವರೆಲ್ಲರೂ ದೊಡ್ಡ ಹೆಸರುಗಳಾಗಿ ಉಳಿಯುವಂತೆ ಮಾಡಿದ ಶ್ರೇಯಸ್ಸು ನಿಟ್ಟೂರರದೆಂದರೆ ಅವರ ಹೃದಯವಂತಿಕೆ, ನಿಸ್ವಾರ್ಥ ಪ್ರೀತಿಗಳಿಗೆ ಕನ್ನಡಿ ಹಿಡಿದಂತೆನಿಸಿದೆ. ಗಾಂಧೀಜಿ ಅವರ ಆತ್ಮಚರಿತ್ರೆಯನ್ನು ಅನುವಾದಿಸಿದರೂ ಹೆಸರನ್ನು ಮರೆಸುವ ಇವರು ಕೀರ್ತಿನಿರ್ಮೋಹಿಗಳೆಂಬುದರಲ್ಲಿ ಸಂದೇಹವೇ ಇಲ್ಲ. ಇವರ ಕಾರ್ಯತತ್ಪರತೆ, ಸೇವಾ ಮನೋಭಾವ, ಉನ್ನತ ವ್ಯಕ್ತಿತ್ವ, ಧೀಮಂತಿಕೆಗಳ ಬಗ್ಗೆ ಮೆಚ್ಚುಗೆಯ ಮಾತನಾಡಿದರೆ, ವಿನಯದಿಂದ 'ಮೆಚ್ಚುಗೆಯ ಅಗತ್ಯವಿಲ್ಲ' ಎನ್ನುತ್ತಾರೆ. "ಸಮಾಜಕ್ಕೆ ನನ್ನಿಂದ ಉಪಕಾರವೆಂದರೆ ದಾರ್ಷ್ಟ್ಯವಾಗುತ್ತದೆ. ಸಮಾಜಕ್ಕೆ ನಾನು ಕೊಟ್ಟಿರುವುದಕ್ಕಿಂತ ಪಡೆದದ್ದೇ ಹೆಚ್ಚು. ಆದ್ದರಿಂದ ಸಮಾಜದ ಋಣವನ್ನು ತೀರಿಸಿಕೊಳ್ಳಬೇಕಾದ ಜವಾಬ್ದಾರಿ ನನ್ನ ಮೇಲಿದೆ. ಸಮಾಜ ಸೇವೆಯೇ ನನ್ನ ಉಸಿರು. ನನ್ನ ಬದುಕಿಗೆ ಅರ್ಥ" ಎಂದು ನುಡಿಯುವುದೇ ಅಲ್ಲದೆ, ತಮ್ಮ ಯಾವುದೇ ಚಟುವಟಿಕೆಗಳು ಲೋಕವನ್ನು ಮೆಚ್ಚಿಸಲೆಂದಲ್ಲ; ಅದೆಲ್ಲವನ್ನೂ ನನ್ನ ಆತ್ಮ ತೃಪ್ತಿಗೆ ಮಾಡುತ್ತಿರುತ್ತೇನೆ ಎಂದು ಮಾತಿನ ಸಂದರ್ಭಗಳಲ್ಲಿ ತಮ್ಮ ನಿಲುವನ್ನು ಹೊರಗೆಡಹುತ್ತಾರೆ. ಗೀತೆಯಲ್ಲಿನ 'ಕರ್ಮವನ್ನು ಆಚರಿಸು ಪ್ರತಿಫಲಾಪೇಕ್ಷೆ ಬೇಡ' ಎಂಬ ಮಾತಿನಲ್ಲಿ ಅಚಲ ಶ್ರದ್ಧೆ.

ಚುರುಕುತನ, ಅದ್ಭುತ ಜ್ಞಾಪಕಶಕ್ತಿ, ನಿರರ್ಗಳ ವಾಕ್‌ಕೌಶಲ್ಯಗಳು ಬಹುಶಃ ಬಾಲ್ಯದಿಂದಲೂ ಸಂಚಯಿಸಿಕೊಂಡು ಬಂದ ಬಂಡವಾಳವಾಗಿರಬೇಕು. ಬದುಕಿನಲ್ಲಿ ಎಷ್ಟು ಹಣ ಗಳಿಸಿದ್ದೇವೆ? ಎಷ್ಟು ಆಸ್ತಿ ಮಾಡಿದ್ದೇವೆ? ಯಾವ ಅಧಿಕಾರವನ್ನು ದಕ್ಕಿಸಿಕೊಳ್ಳಬೇಕು? ಇತ್ಯಾದಿಗಳ ಬಗ್ಗೆ ಆಲೋಚಿಸುವಂತಹ ಮನುಷ್ಯ ಸಮಾಜದಲ್ಲಿ, 'ನಮಗೆ ಮುಖ್ಯವೆನಿಸುವುದು ನಾವು ಜೀವನವನ್ನು ಹೇಗೆ ನಡೆಸಿಕೊಂಡಿದ್ದೇವೆ, ಸಮಾಜಕ್ಕೆ ಯಾವ ಋಣ ಸಲ್ಲಿಸಿದ್ದೇವೆ? ಇತರರ ಕಷ್ಟಗಳಲ್ಲಿ ಹೇಗೆ ಭಾಗಿಗಳಾಗಿದ್ದೇವೆ?' ಎಂದು ಪ್ರಶ್ನಿಸಿಕೊಂಡು ಬದುಕುವವರು, ನಿಟ್ಟೂರರಂತಹವರನ್ನು ಬಿಟ್ಟರೆ ಎಷ್ಟು ಮಂದಿಗೆ ಸಾಧ್ಯವಾದೀತು?

ನನ್ನ ದೃಷ್ಟಿಯಲ್ಲಿ ಅವರೊಂದು ಆಲ. ಸುತ್ತಲಿನ ಸಮಸ್ತ ವಿಚಾರ ಸತ್ವಗಳನ್ನು ಹೀರಿಕೊಂಡು ಬೆಳೆದು ನಿಂತವರು.

ವೃತ್ತಿ ಬದುಕಿನಿಂದ ನಿವೃತ್ತರಾದರೇನು? ಪ್ರವೃತ್ತಿ ಬದುಕಿನಲ್ಲಿ ಬಿಡುವಿಲ್ಲದೆ ತೊಡಗಿಸಿಕೊಂಡಿದ್ದಾರೆ. ಅವರ ದೈನಂದಿನ ಬದುಕಿನ ಪುಟಗಳಲ್ಲಿ ಒಮ್ಮೆ ಇಣುಕಿದಾಗ ಒಂದೆರಡು ಗಳಿಗೆಗಳೂ ವ್ಯರ್ಥವಾದುದು ಬಹುಶಃ ಸಿಗಲಾರದೇನೋ? ನಿರಂತರವಾಗಿ ಗ್ರಂಥಾವಲೋಕನ, ಅಧ್ಯಯನ, ಅವಗಾಹನ, ಚಿಂತನ ಅನುಭವಗಳ ಮೂಲಕ ಅವರು ಗಳಿಸಿಕೊಂಡ ಜ್ಞಾನದ ಅಪಾರತೆ ಬೆರಗುಗೊಳಿಸುವಂತಹುದು. ಕಾನೂನು, ಸಮಾಜ ವಿಜ್ಞಾನ, ಸಾಮಾಜಿಕ ಸಮಸ್ಯೆಗಳು, ರಾಜಕೀಯ, ಗಾಂಧಿ ಚಿಂತನೆ, ಸಾಹಿತ್ಯ-ಹೀಗೆ ಯಾವುದೇ ವಿಷಯಕ್ಕೆ ಸಂಬಂಧಿಸಿರಲಿ, ಗಂಟೆಗಟ್ಟಲೆ ಅಧಿಕೃತವಾಗಿ ನಿರರ್ಗಳವಾಗಿ ಮಾತನಾಡಬಲ್ಲರು. ಯಾರೊಂದಿಗಾದರೂ ಚರ್ಚೆಗೆ ಇಳಿಯಬಲ್ಲರು. ತಮ್ಮ ನಿಲುವು ಅಭಿಪ್ರಾಯಗಳನ್ನು ನಿರ್ಭಿಡೆಯಿಂದ ದಿಟ್ಟತನದಿಂದ ಹೇಳಬಲ್ಲರು. ಆದರೆ ಯಾವುದೇ ಕಾರಣಕ್ಕಾಗಲೀ, ಯಾರನ್ನೂ ದ್ವೇಷಿಸುವುದಿಲ್ಲ. ಯಾರ ಬಗ್ಗೆಯಾ ಕೆಡೆನುಡಿಯುವುದಿಲ್ಲ; ಅಸೂಯೆ ಪಡುವುದಿಲ್ಲ. ಪೂರ್ವಾಗ್ರಹಗಳನ್ನು ಇರಿಸಿಕೊಳ್ಳುವುದಿಲ್ಲ. ಮೆಚ್ಚಿಸಲೆಂದು ಮುಖಸ್ತುತಿ ಮಾಡುವುದಿಲ್ಲ. ದೇಶದ ಭವಿಷ್ಯದ ಬಗ್ಗೆ, ಯುವ ಪೀಳಿಗೆಯ ಬಗ್ಗೆ ಭರವಸೆಯಿದೆ. ಕರ್ತವ್ಯವನ್ನು ನಿಷ್ಠೆ, ನಿಸ್ಪೃಹತೆಗಳಿಂದ ನಿರ್ವಹಿಸಿದಲ್ಲಿ ಎಲ್ಲವೂ ತಾನಾಗಿಯೇ ಸುಧಾರಿಸುತ್ತದೆ; ಭವಿಷ್ಯ ಅದ್ಭುತವಾಗಿ ರೂಪುಗೊಳ್ಳುತ್ತದೆ, ಎನ್ನುವುದು ಅವರ ಅಚಲ ಭರವಸೆ. ಈ ಬಗೆಯ ಆಲೋಚನೆಗಳನ್ನು, ನಂಬಿಕೆಗಳನ್ನು ಇರಿಸಿಕೊಂಡ ನಿಟ್ಟೂರರು, 'ಆತ್ಮಶಕ್ತಿ, ಜೀವನರಕ್ತಿ, ಮೌಲ್ಯ ಭಕ್ತಿ'ಗಳ ತ್ರಿವೇಣೀ ಸಂಗಮದ ಪ್ರತೀಕದಂತೆ ಭಾಸವಾಗುತ್ತಾರೆ, ನನಗೆ! ನಿರಂತರ ಕ್ರಿಯಾಶೀಲತೆ, ಬತ್ತದ ಉತ್ಸಾಹ, ಸೇವಾನಿಷ್ಠೆ, ಮಾನವ ಪ್ರೀತಿ ಎಲ್ಲವನ್ನೂ ಏಕಕಾಲದಲ್ಲಿ ತಮ್ಮ ವ್ಯಕ್ತಿತ್ವದ ಅವಿಚ್ಛಿನ್ನ ಭಾಗವಾಗಿಸಿಕೊಂಡು ೧೦೦ ವರ್ಷಗಳ ಅರ್ಥಪೂರ್ಣ ಬದುಕಿನ ಸಂಭ್ರಮವನ್ನು ಅಭಿಮಾನಿಗಳಿಂದ ಆಚರಿಸಿಕೊಂಡ ನಿಟ್ಟೂರರ ಬದುಕೇ ನನಗೊಂದು ಪವಾಡದಂತೆ ಕಾಣಿಸುತ್ತದೆ. ಇಂತಹ ಹಿರಿಯ ಚೇತನದ ಸಮಕಾಲೀನಳಾಗಿ ಬದುಕುವುದೂ 'ನನಗೊಂದು ಸುಯೋಗ'ವೆಂದೇ ಭಾವಿಸಿ ನನ್ನ ನಮನಗಳನ್ನು ಸಲ್ಲಿಸುತ್ತೇನೆ.



# ಬಾಗದ ಬಗ್ಗದ ನಿಡಿದಾದ ನಿಟ್ಟೂರರು

. . . . . . . . . . . . . . . . . . . . . . . . . . ✍ *ಎಸ್. ಶಿವರಾಂ**




ತೀರ್ಥರೂಪ ಸಮಾನರಾದ, ನಿಷ್ಠಾವಂತ ನ್ಯಾಯಮೂರ್ತಿಗಳಾದ ದಕ್ಷ ರಾಜ್ಯಪಾಲರಾದ, ಗಾಂಧೀವಾದಿಯಾದ, ಸಾಹಿತ್ಯ ಸೇವಕರಾದ, ಕಲಾರಾಧಕರಾದ, ಮಾನವೀಯತೆಯ ಸಾಕಾರ ಮೂರ್ತಿಯಾದ ಶ್ರೀ ನಿಟ್ಟೂರು ಶ್ರೀನಿವಾಸರಾಯರನ್ನು ಕುರಿತು ಒಂದು ಲೇಖನವನ್ನು ಬರೆದು ಕೊಡಿ ಎಂದು ನಮ್ಮ ಗೌರಿಸುಂದರ್ ಕೇಳಿದಾಗ ಒಂದು ಕಡೆ ಅತೀವವಾದ ಆನಂದ, ಏಕೆಂದರೆ ಒಬ್ಬ ಗಣ್ಯರ ಬಗ್ಗೆ ಲೇಖನ ಬರೆದು ನಾನು ಪುನೀತನಾಗುತ್ತೇನೆ ಎಂದು; ಇನ್ನೊಂದು ಕಡೆ ಭಯ ಏಕೆಂದರೆ ಇಂತಹ ಮಹಾಚೇತನದ ಬಗ್ಗೆ ಲೇಖನ ಬರೆದು ಎಲ್ಲಿ ಮುಗ್ಗರಿಸುತ್ತೇನೋ ಎಂದು. ಆದರೂ ಶ್ರೀನಿವಾಸರಾಯರಂಥ ಹಿರಿಯರ ಆಶೀರ್ವಾದದಿಂದ, ಹಲವಾರು ಗಣ್ಯರ ಸಹಕಾರದಿಂದ ಬರೆಯಲು ಮುಂದುವರೆಯುತ್ತಿದ್ದೇನೆ.

ಪ್ರಾರಂಭದಲ್ಲಿ ತೀರ್ಥರೂಪ ಸಮಾನರೆಂದು ಸಂಬೋಧಿಸಿದೆ, ಕಾರಣ ಹೇಳಬೇಕಲ್ಲ? ಅದು ನನ್ನ ಕೌಟುಂಬಿಕ ಹಿನ್ನೆಲೆಯಲ್ಲಿ, ಸಾಹಿತ್ಯ ಲೋಕದಲ್ಲಿ ಸರಸ್ವತೀ ಪುತ್ರರೆಂದು ಕರೆಸಿಕೊಂಡ ಸಾಹಿತ್ಯ ಸಂಪನ್ನ, ಶ್ರೀಮಂತ ಸಾಹಿತ್ಯವನ್ನು ಒದಗಿಸಿದ ನನ್ನ ಸಹೋದರ ಸ್ವರೂಪರಾದ ಶ್ರೀ ಡಿ. ವಿ. ಗುಂಡಪ್ಪನವರ ನಿಕಟವರ್ತಿಗಳೂ ಹಾಗೂ ಅವರು ಹುಟ್ಟು ಹಾಕಿ ಬೆಳೆಸಿದ ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆಯಲ್ಲಿ ಪ್ರಾರಂಭದ ದಿನದಿಂದಲೇ ಶ್ರಮಿಸುತ್ತ 1975ರಲ್ಲಿ

---

* ೨೪೪೪, ೯ನೇ ಮುಖ್ಯರಸ್ತೆ, ಬನಶಂಕರಿ ೨ನೇ ಹಂತ ಬೆಂಗಳೂರು - ೫೬೦ ೦೭೦

ನಮ್ಮನ್ನಗಲಿದ ಡಿ.ವಿ.ಜಿ. ನಂತರ, ಪೂರ್ಣ ಉಸ್ತುವಾರಿಯನ್ನು ವಹಿಸಿಕೊಂಡು, ಅದಕ್ಕೆ ನೀರೆರೆದು ಮೂಲ ಉದ್ದೇಶಗಳಿಗೆ ಸ್ವಲ್ಪವೂ ಚ್ಯುತಿ ಬಾರದ ಹಾಗೆ, ಸಂಸ್ಥೆಯ ಸಾರಥ್ಯವನ್ನು ವಹಿಸಿದವರು ಶ್ರೀ ನಿಟ್ಟೂರು ಶ್ರೀನಿವಾಸರಾಯರು. ಇವರಿಬ್ಬರ ನಂಟು ಎಷ್ಟರಮಟ್ಟಿಗೆ ಇತ್ತು ಎನ್ನುವುದಕ್ಕೆ ಒಂದು ನಿದರ್ಶನ. ಅಷ್ಟು ಓದಿದವರಲ್ಲದ (ವಿದ್ಯಾಭ್ಯಾಸ) ಡಿ.ವಿ.ಜಿ.ಯವರು ಓದಿದವರಿಗೆ ಹಾಗೂ ಓದುವವರಿಗೆ ಸಾಹಿತ್ಯ ಸಾಮಗ್ರಿಯನ್ನು ಒದಗಿಸುವ ಸಮರ್ಥರು. ಆದರೆ ಅಷ್ಟು ವ್ಯಾವಹಾರಸ್ಥರಲ್ಲ ಅನ್ನಿಸುತ್ತದೆ, ಹಾಗಾಗಿ ತಮ್ಮ ಗೋಖಲೆ ಸಂಸ್ಥೆಯನ್ನು ನಡೆಸುತ್ತಿದ್ದಾಗ ಒಂದೆರಡು ವರ್ಷಗಳು ವಾರ್ಷಿಕ ಸರ್ವಸದಸ್ಯರ ಸಭೆ ನಡೆಸಲಿಲ್ಲ. ಆಗ ಶ್ರೀನಿವಾಸರಾಯರು ಹೀಗೆ ಮಾಡುವುದು ತಪ್ಪು, ವರ್ಷದಲ್ಲಿ ಚಟುವಟಿಕೆಗಳು ಇರಲೀ, ಇಲ್ಲದಿರಲೀ ವಾರ್ಷಿಕ ಸಭೆಯನ್ನು ಕರೆಯಲೇಬೇಕು. ಸದಸ್ಯರಿಗೆ ವಿವರಣೆಗಳನ್ನು ತಿಳಿಸಲೇಬೇಕು. ಹಾಗೆ ಮಾಡದಿದ್ದರೆ ಅದು ಕಾನೂನಿಗೆ ವಿರುದ್ಧ ಎಂದು ಹೇಳಿದಾಗ, ಡಿ.ವಿ.ಜಿ.ಯವರು ಇವರ ಮಾತಿಗೆ ಮಾನ್ಯತೆ ಕೊಟ್ಟು ಅಲ್ಲಿಂದ ಮುಂದೆ ವರ್ಷೇ ವರ್ಷೇ ಸರ್ವಸದಸ್ಯರ ಸಭೆಯನ್ನು ಕರೆದರು.

ನಿಟ್ಟೂರು ಅವರಿಗೆ ಬಾಲ್ಯದಿಂದಲೇ ನಾಡುನುಡಿ ಕಸ್ತೂರಿ ಕನ್ನಡದ ಕಡೆ ಒಲವು. ಶಿವಮೊಗ್ಗದಲ್ಲಿ ವಿದ್ಯಾರ್ಥಿ ದೆಸೆಯಲ್ಲಿ ಎಂ. ಆರ್. ಶ್ರೀನಿವಾಸಮೂರ್ತಿಯಂಥವರು ಅಧ್ಯಾಪಕರಾಗಿದ್ದು, ಇವರಿಗೆ ಒಂದು ರೀತಿಯ ಪ್ರೇರಕಶಕ್ತಿ ಎಂದೇ ಹೇಳಬೇಕು. ಅಲ್ಲಿ ಪ್ರಾಥಮಿಕ ವಿದ್ಯಾಭ್ಯಾಸವನ್ನು ಮುಗಿಸಿಕೊಂಡು ಬೆಂಗಳೂರಿಗೆ (ಉನ್ನತ) ವಿದ್ಯಾಭ್ಯಾಸವನ್ನು ಮುಂದುವರಿಸಲು ಬಂದರು. ಇಂದಿನ ಗ್ಯಾಸ್ ಕಾಲೇಜ್ ಮಧ್ಯದಲ್ಲಿ ಇಂಟರ್ ಮೀಡಿಯಟ್ ಕಾಲೇಜ್ ಆಗಿದ್ದು, ಪೂರ್ವದಲ್ಲಿ ಕೊಲೇಜಿಯಟ್ ಹೈಸ್ಕೂಲ್ ಆಗಿತ್ತು. ಅಲ್ಲಿ ಇವರ ವ್ಯಾಸಂಗ ಮುಂದುವರಿಯಿತು. ಆ ಕಾಲದಲ್ಲೇ ಇವರ ಸೋದರ ಮಾವ ಪ್ರೊ. ಎಂ. ಹಿರಿಯಣ್ಣನವರ ಮೂಲಕ ಕೆಲವು ಸಾಹಿತಿಗಳ ಪರಿಚಯ ಹಾಗೂ ಸನಿಹ ಪ್ರಾಪ್ತವಾಯಿತು. ಆಗ ತಾನೇ ಕನ್ನಡ ಸಾಹಿತ್ಯ ಪರಿಷತ್ ಪ್ರಾರಂಭವಾದ ಕಾಲ. ಸರ್ ಎಂ.ವಿಶ್ವೇಶ್ವರಯ್ಯನವರ ಸಲಹೆ, ರಾಜಮನೆತನದವರ ನೆರವು - ಶ್ರೇಷ್ಠ ಸಾಹಿತಿಗಳ, ಗಣ್ಯವ್ಯಕ್ತಿಗಳ ಸತತ ಶ್ರಮ, ಪರಿಷತ್‌ನ ಕನ್ನಡಪರ ಚಟುವಟಿಕೆಗಳಿಗೆ ಪೂರಕ ಶಕ್ತಿಯಾಗಿತ್ತು. ನಿಟ್ಟೂರರು ಪರಿಷತ್ತಿನ ಸದಸ್ಯರಾಗಲು ಆಗ ಸಾಹಿತ್ಯ ದಿಗ್ಗಜರುಗಳ ದರ್ಶನ, ಪರಿಚಯ, ಸಂಪರ್ಕ ಎಲ್ಲವು ಇವರಿಗೆ ದಕ್ಕಿತು. ಆ ಸಂದರ್ಭದಲ್ಲೇ ಡಿ.ವಿ.ಜಿ.ಯವರ ಸಂಪರ್ಕ ಸ್ವಲ್ಪ ಹೆಚ್ಚಾಗಿ ಬೆಳೆಯುವುದಕ್ಕೆ ಹಾಗೂ ಬೆರೆಯುವುದಕ್ಕೆ ಸಾಧ್ಯವಾಯಿತು.

**ಗೋಖಲೆ ಸಂಸ್ಥೆ :**

1915ರಲ್ಲಿ ಮಹಾತ್ಮಾಗಾಂಧೀಜಿಯವರು ಬೆಂಗಳೂರಿಗೆ ಬಂದಾಗ ಗೋಪಾಲಕೃಷ್ಣ

ಗೋಖಲೆಯವರ ಭಾವಚಿತ್ರವನ್ನು ಅನಾವರಣ ಮಾಡಿದರು. ಡಿ.ವಿ.ಜಿ.ಯವರು ಗಾಂಧೀಜಿಯವರು ಅನಾವರಣ ಮಾಡುವ ಆ ಚಿತ್ರವನ್ನು ತರಿಸಿದರು. ಆ ಭಾವಚಿತ್ರ, ಮುಂದೆ ಅವರ ಹೆಸರಿನಲ್ಲಿಯೇ ಪ್ರಾರಂಭವಾದ ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆಯಲ್ಲಿ ಇಂದೂ ಅಲಂಕರಿಸಿದೆ. 1945ನೇ ಫೆಬ್ರವರಿ 18ರಂದು ಡಿ.ವಿ.ಜಿ.ಯವರಿಂದಲೇ ಸಂಸ್ಥೆ ಪ್ರಾರಂಭವಾಯಿತು. ಅಂದಿನಿಂದಲೇ ಅವರ ಸಂಗಡ ಸಂಸ್ಥೆಯಲ್ಲಿ ಇದ್ದವರು ನಿಟ್ಟೂರು ಶ್ರೀನಿವಾಸರಾಯರು. ಸಂಸ್ಥೆಗೆ ಸಹಕಾರಿಯಾಗಿದ್ದ ಇನ್ನಿಬ್ಬರು ಎಂದರೆ ಗಾಂಧಿವಾದಿ, ಶಿಕ್ಷಣತಜ್ಞ ಪ್ರೊ. ಕೆ. ಸಂಪದ್ಗಿರಿರಾವ್ ಮತ್ತು ಖ್ಯಾತ ನ್ಯಾಯವಾದಿ ಎಂ.ಪಿ. ಸೋಮಶೇಖರರಾವ್. ಮತ್ತೊಂದು ಮಹತ್ವ ವಿಷಯ ಎಂದರೆ ಶ್ರೀನಿವಾಸರಾಯರು ತಮಿಳು 'ಕಲ್ಕಿ' ಪತ್ರಿಕೆಯ ಸಂಪಾದಕರಾದ ಸದಾಶಿವಂ ಅವರ ಸಂಪರ್ಕದಿಂದ ಗೋಖಲೆ ಸಂಸ್ಥೆಯ ಕಟ್ಟಡ ನಿಧಿಗೆ ಖ್ಯಾತ ಸಂಗೀತ ವಿದೂಷಿ ಎಂ.ಎಸ್. ಸುಬ್ಬುಲಕ್ಷ್ಮಿಯವರ ಸಂಗೀತವನ್ನು ಏರ್ಪಡಿಸಿ ಹಣ ಸಂಗ್ರಹ ಮಾಡಿದ್ದು. ಸುಮಾರು 1950-1956ರ ಕಾಲದಲ್ಲಿ ಶ್ರೀನಿವಾಸರಾಯರು ಗೋಖಲೆ ಸಂಸ್ಥೆಯಲ್ಲಿ ಇತಿಹಾಸದ ಆಧಾರದ ಮೇಲೆ ಸುದೀರ್ಘವಾಗಿ ಅಂತಾರಾಷ್ಟ್ರೀಯ ರಾಜಕೀಯ ವಿದ್ಯಮಾನಗಳನ್ನು ಕುರಿತು ಉಪನ್ಯಾಸವನ್ನು ಪ್ರತಿ ತಿಂಗಳೂ ನೀಡುತ್ತಿದ್ದರು. ಇದು ಅತ್ಯಂತ ವಿಷಯಭರಿತ, ಬೋಧಪ್ರದ. ಪ್ರೇಕ್ಷಕರು ಉತ್ಸುಕರಾಗಿ ನಿರೀಕ್ಷಿಸುತ್ತಿದ್ದ ಕಾರ್ಯಕ್ರಮವಾಗಿತ್ತು. ಡಿ.ವಿ.ಜಿ.ಯವರ ನಂತರ ಶ್ರೀನಿವಾಸರಾಯರು ಸಂಸ್ಥೆಯನ್ನು ವಹಿಸಿಕೊಂಡ ಮೇಲೆ, ದ.ರಾ. ಬೇಂದ್ರೆ, ಕೃಷ್ಣಮೂರ್ತಿ ಪುರಾಣಿಕ್, ಎ.ಎನ್. ಮೂರ್ತಿರಾವ್, ಗೊರೂರು ರಾಮಸ್ವಾಮಿ ಅಯ್ಯಂಗಾರ್, ಜಿ.ಪಿ. ರಾಜರತ್ನಂ, ಮಾಸ್ತಿ, ಪು. ತಿ. ನರಸಿಂಹಚಾರ್, ವಿ. ಸೀತಾರಾಮಯ್ಯ ಮೊದಲಾದವರು ಆಗಾಗ ಬಂದು ಕಾರ್ಯಕಲಾಪಗಳಿಗೆ ಪ್ರೋತ್ಸಾಹ ನೀಡಿ ಭಾಗಿಯಾಗುತ್ತಿದ್ದರು. ಸಂಸ್ಕೃತ ವಿದ್ವಾಂಸರಾದ ರಂಗನಾಥ ಶರ್ಮರಿಂದ ಎಲ್ಲರಿಗೂ ಸಂಸ್ಕೃತ ಪಾಠವನ್ನು ಏರ್ಪಡಿಸಿದರು. ಇದನ್ನು ಕಂಡ ಕಡೆಂಗೋಡ್ಲು ಶಂಕರ ಭಟ್ಟರಿಗೆ ಆಶ್ಚರ್ಯ, ಆನಂದ ಎರಡು ಆಯ್ತು.

**ಕನ್ನಡ ಸಂಘ :**

1921-24ರಲ್ಲಿ ಬಿ.ಎಸ್ಸಿ. ಓದಲು ಬೆಂಗಳೂರು ಸೆಂಟ್ರಲ್ ಕಾಲೇಜಿಗೆ ಸೇರಿಕೊಂಡರು. ಇವರ ಸಾಹಿತಿಗಳ ಸನಿಹ ಹಾಗೂ ಕನ್ನಡ ಪರ ಕಾರ್ಯರೂಪಗಳು ಇನ್ನು ಹೆಚ್ಚಾಯಿತು. ಆ ಕಾಲದಲ್ಲಿ ಮೈಸೂರಲ್ಲಿ ಮಹಾರಾಜ ಕಾಲೇಜ್, ಬೆಂಗಳೂರಲ್ಲಿ ಸೆಂಟ್ರಲ್ ಕಾಲೇಜ್, ಎರಡೂ ಕಡೆ ಕನ್ನಡ ಸಂಘಗಳು ಸ್ಥಾಪನೆ ಆಗಿ ಗಮನಾರ್ಹವಾದ ಕನ್ನಡ ಚಟುವಟಿಕೆಗಳು ಪ್ರಾರಂಭವಾಯಿತು. ಸಂಘದ ಕಾರ್ಯಕಲಾಪಗಳಲ್ಲಿ ನಿಟ್ಟೂರರು ಸಕ್ರಿಯವಾಗಿ ಭಾಗವಹಿಸುತ್ತಿದ್ದರು. ಮುಂದೆ ಇವರು ಸೆಂಟ್ರಲ್ ಕಾಲೇಜ್ ಕರ್ನಾಟಕ ಸಂಘದ ಕಾರ್ಯದರ್ಶಿಗಳಾದರು. ಹಾಗಾಗಿ ಖ್ಯಾತ ಸಾಹಿತಿಗಳೂ ಅಧ್ಯಾಪಕರೂ ಇವ

ಬಿ. ಎಂ. ಶ್ರೀಕಂಠಯ್ಯ, ಡಿ.ವಿ.ಜಿ., ಟಿ.ಎಸ್. ವೆಂಕಣ್ಣಯ್ಯ, ಎ. ಆರ್. ಕೃಷ್ಣಶಾಸ್ತ್ರಿ, ಮಾಸ್ತಿ ವೆಂಕಟೇಶ ಅಯ್ಯಂಗಾರ್, ಬೆಳ್ಳಾವೆ ವೆಂಕಟನಾರಾಯಣಪ್ಪ ಮೊದಲಾದವರ ನಿಕಟ ಸಂಪರ್ಕ ಮತ್ತು ಮಾರ್ಗದರ್ಶನ ಪ್ರಾಪ್ತವಾಯಿತು. ಕರ್ನಾಟಕ ಸಂಘದ ಪ್ರಮುಖ ಹೆಜ್ಜೆ ಎಂದರೆ ಸಂಘ ಹೊರತಂದ 'ಪ್ರಬುದ್ಧ ಕರ್ಣಾಟಕ' ಹೊತ್ತಿಗೆ. ಕನ್ನಡ ಸಾಹಿತ್ಯದ ಸೇವೆ ಯಾವ ಮಟ್ಟದಲ್ಲಿ, ಎಷ್ಟರಮಟ್ಟಿಗೆ, ನಿಟ್ಟೂರು ಅವರಲ್ಲಿ ಕರಗತವಾಗಿತ್ತು ಎಂದರೆ ಪ್ರಬುದ್ಧ ಕರ್ಣಾಟಕ ಪ್ರತಿಗಳನ್ನು ಬೈಸಿಕಲ್ಲಿನಲ್ಲಿ ಹೊತ್ತು ಸ್ಥಳದಿಂದ ಸ್ಥಳಕ್ಕೆ ಸದಸ್ಯರಿಗೆ ಒಯ್ಯುತ್ತಿದ್ದರು. ಇದನ್ನು ಗಮನಿಸಿದ ಸಾಹಿತಿಗಳು ಬೆರಗಾಗಿದ್ದು ನೆನಪಿಸಿಕೊಳ್ಳಬೇಕಾದ ಅಂಶ. ಕರ್ನಾಟಕ ಸಂಘದ ಕಾರ್ಯದರ್ಶಿಯಾಗಿ ಇವರು ಸಲ್ಲಿಸಿದ ಸೇವೆ ಅಪಾರ. ಆ ಸಮಯದಲ್ಲಿ ಭಾಸನ ಸಂಸ್ಕೃತ ನಾಟಕಗಳು ಕನ್ನಡಕ್ಕೆ ಅನುವಾದವಾಯಿತು, ಪ್ರಕಟವಾಯಿತು. ಇವರ ಇನ್ನೊಂದು ಯಶಸ್ವೀ ಪ್ರಯತ್ನ ಎಂದರೆ, ಸ್ವಲ್ಪ ಕಠಿಣವಾದ ವ್ಯಕ್ತಿ ಎನ್ನಿಸಿಕೊಂಡಿದ್ದ, ಮನೋವೇದನೆ ಅನುಭವಿಸುತ್ತಿದ್ದ ಪ್ರಸಿದ್ಧ ಇತಿಹಾಸ ನಾಟಕಕಾರರಾದ ಸಂಸರ (ಸಾಮಿ ವೆಂಕಟಾದ್ರಿ ಅಯ್ಯರ್) ಮನ ಒಲಿಸಿ, ಅವರ ವಿಗಡವಿಕ್ರಮರಾಯ, ಬೆಟ್ಟದ ಅರಸು, ಮಂತ್ರಶಕ್ತಿ ನಾಟಕಗಳನ್ನು ಪ್ರಕಟಮಾಡಿದ್ದು. ಈ ಸಂದರ್ಭದಲ್ಲಿಯೇ ಆನಂದ (ಎ. ಸೀತಾರಾಂ), ಜಿ.ಪಿ. ರಾಜರತ್ನಂ, ಯಳಂದೂರು ಎಸ್. ನಾರಾಯಣಮೂರ್ತಿ (ಕನ್ನಡಪ್ರಭ ಸಂಪಾದಕ ವೈ.ಎನ್.ಕೆ. ತಂದೆ) ಪರಿಚಯ ಸಹಕಾರ ಸಿಕ್ಕಿದ್ದು.

**ಸಾಹಿತ್ಯ ಪರಿಷತ್ತು :**

1922ರಿಂದಲೇ ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯಕಾರಿ ಸಮಿತಿಯ ಸದಸ್ಯರಾಗಿ, ಡಿ.ವಿ.ಜಿ.ಯವರು ಉಪಾಧ್ಯಕ್ಷರಾಗಿದ್ದಾಗ ನಿಯೋಜಿಸಿದ 'ವಸಂತ ಸಾಹಿತ್ಯೋತ್ಸವ'ದಲ್ಲಿ ಭಾಗವಹಿಸಿದರು. ನಂತರ ಮಾಸ್ತಿಯವರು ಉಪಾಧ್ಯಕ್ಷರಾಗಿದ್ದಾಗ ಪರಿಷತ್ತಿನ ಚಟುವಟಿಕೆಗಳನ್ನು ಎಲ್ಲ ಜಿಲ್ಲೆಗಳಿಗೂ ವಿಸ್ತರಿಸಲು ನಿಯೋಜಿಸಿದರು. ಅದರ ಸೂತ್ರ ಚಾಲನೆ ಮಾಡುವಲ್ಲಿ ಮೈಸೂರು ಪ್ರಾಂತ್ಯ ಸಮಿತಿ ಅಧ್ಯಕ್ಷರಾಗಿ ಶ್ರೀನಿವಾಸರಾಯರ ಪಾತ್ರ ಪ್ರಮುಖವಾಗಿತ್ತು. 1934ರಲ್ಲಿ ಡಿ.ವಿ.ಜಿ.ಯವರು ಪರಿಷತ್ತಿನ ಅಧ್ಯಕ್ಷರಾದಾಗ ಹಾಗೂ ಮಡಿಕೇರಿಯಲ್ಲಿ ನಡೆದ ಕನ್ನಡ ಸಮ್ಮೇಳನದ ಅಧ್ಯಕ್ಷರಾದಾಗ ಶ್ರೀನಿವಾಸರಾಯರು ಅವರ ಜೊತೆಯಲ್ಲಿ ಇದ್ದು ಯಶಸ್ಸಿಗೆ ಉತ್ತಮವಾದ ನೆರವನ್ನು ನೀಡಿದ್ದಾರೆ. ಈ ಸಮಯದಲ್ಲಿಯೇ ಪರಿಷತ್ ಸ್ಥಳಾಂತರವಾಯಿತು, ಹೆಸರಾಂತ ಸಾಹಿತಿಗಳ ಕೃತಿಗಳನ್ನು ಪ್ರಕಟಣೆ ಮಾಡುವ ಕೆಲಸ ನಡೆಯಿತು. ಈ ಸಂದರ್ಭದಲ್ಲಿ ಐರೀಷ್ ಪ್ರೆಸ್‌ನ ಕೆ.ಎಸ್. ಕೃಷ್ಣಅಯ್ಯರ್‌ರನ್ನು ನಿಟ್ಟೂರರು ಸದಾ ನೆನಪಿಸಿಕೊಳ್ಳುತ್ತಾರೆ. 50 ವರ್ಷಗಳಿಗೂ ಮಿಗಿಲಾಗಿ ಪರಿಷತ್ತಿನ ಕಾರ್ಯಕಲಾಪಗಳಲ್ಲಿ ಬೆಸೆದಿದ್ದ ಶ್ರೀನಿವಾಸರಾಯರು 1955ರಲ್ಲಿ ಬರೋಡದಲ್ಲಿ ನಡೆದ ಹೊರನಾಡ ಕನ್ನಡಿಗರ ಸಮ್ಮೇಳನದ ಅಧ್ಯಕ್ಷರಾಗಿದ್ದರು.

**ಸತ್ಯಶೋಧನ ಪ್ರಕಟನ ಮಂದಿರ :**

ಕನ್ನಡದಲ್ಲಿ ಹೆಚ್ಚಾಗಿ ಕಾದಂಬರಿಗಳೇ ಇಲ್ಲದ ಕಾಲದಲ್ಲಿ, ಸಂಸ್ಕೃತ ನಾಟಕಗಳನ್ನು, ಶೇಕ್ಸ್‌ಪಿಯರ್ ಮುಂತಾದ ಹೊರಭಾಷೆಯ ನಾಟಕಗಳನ್ನು ಕನ್ನಡಕ್ಕೆ ಅನುವಾದ ಮಾಡಿ ಸಾಹಿತ್ಯದ ಕೆಲಸ ನಡೆಯುತ್ತಿತ್ತು. ಇಂದು ಕನ್ನಡ ಪುಸ್ತಕ ಮುದ್ರಣ, ಪ್ರಕಟನೆ ಇಷ್ಟು ಎತ್ತರಕ್ಕೆ ಏರಬೇಕಾದರೆ ಅಂದು ಅದಕ್ಕೆ ನಾಂದಿ ಹಾಡಿದವರು ಶ್ರೀನಿವಾಸರಾಯರು. 'ಸತ್ಯಶೋಧನ ಪ್ರಕಟನ ಮಂದಿರ'ವನ್ನು ಸುಮಾರು 1928ರಲ್ಲಿ ಸ್ಥಾಪಿಸಿದರು. ಗಾಂಧೀಜಿಯವರನ್ನು ಭೇಟಿ ಮಾಡಿ ಅವರ ತತ್ವಗಳನ್ನು ಪಾಲಿಸುವ ಮನೋಭಾವವನ್ನು ಬೆಳೆಸಿಕೊಂಡ ಶ್ರೀನಿವಾಸರಾಯರಿಗೆ ಅಂತಹ ಇನ್ನೊಬ್ಬ ವ್ಯಕ್ತಿಯನ್ನು ಗುರುತಿಸಿದ್ದು ಅಂದರೆ ಅದು ರಾಜಾಜಿ. ಇವರ ನಿಕಟವರ್ತಿಗಳಾದ ಅಂದಿನ ಬೆಂಗಳೂರಿನ ಖಾದಿ ಭಂಡಾರದ ಮೇನೇಜರ್ ಆಗಿದ್ದ ಸದಾಶಿವಂ, ಸತ್ಯಶೋಧನ ಪ್ರಕಟನೆಗೆ ಮೊದಲು ಪ್ರೋತ್ಸಾಹಿಸಿದ್ದು ಹಾಗೂ ಕೋಟೆ ಹತ್ತಿರ ಖಾದಿ ಭಂಡಾರದ ಪಕ್ಕದಲ್ಲಿಯೇ ಸ್ಥಳ ಕೊಡಿಸಿದ್ದು. ನಂತರ ಸದಾಶಿವಂ ಅವರು ಎಂ.ಎಸ್. ಸುಬ್ಬುಲಕ್ಷ್ಮಿಯವರನ್ನು ಮದುವೆಯಾಗಿ ತಮಿಳು - 'ಕಲ್ಕಿ' ಪತ್ರಿಕೆಯನ್ನು ಪ್ರಾರಂಭ ಮಾಡಿದರು. ಸತ್ಯಶೋಧನ ಪ್ರಕಟಣೆ ಮಂದಿರ ಪ್ರಾರಂಭದಲ್ಲಿ ವಾರಕ್ಕೊಂದು ಗಾಂಧೀಜಿಯವರೇ ಗುಜರಾತಿಯಲ್ಲಿ ಬರೆಯುತ್ತಿದ್ದ ಲೇಖನಗಳನ್ನು ಕನ್ನಡಕ್ಕೆ ಅನುವಾದ ಮಾಡಿ ಪ್ರಕಟನೆ ಮಾಡುತ್ತಿತ್ತು. ನಂತರ ಕನ್ನಡದಲ್ಲಿ ಲಭ್ಯವಿಲ್ಲದ ಮಹಾತ್ಮಗಾಂಧಿಯವರ ಆತ್ಮಕಥೆಯನ್ನು ನಿಟ್ಟೂರರು ಅವರ ಧರ್ಮಪತ್ನಿ ಪದ್ಮಮ್ಮನವರೊಡನೆ ಕನ್ನಡಕ್ಕೆ ಅನುವಾದ ಮಾಡಿ ಪ್ರಕಟಿಸಿದರು. ಇದು ಲೇಖಕರ ಹೆಸರಿಲ್ಲದೇ ಮೊದಲು ತಿ.ತಾ. ಶರ್ಮರ 'ವಿಶ್ವ ಕರ್ನಾಟಕ' ಪತ್ರಿಕೆಯಲ್ಲಿ 1925-26ರಲ್ಲಿ ಧಾರಾವಾಹಿಯಾಗಿ ಪ್ರಕಟವಾಗಿತ್ತು. ನಂತರ ಈ ದಂಪತಿಗಳು ಗಾಂಧೀಜಿಯವರು ಬರೆದ ಭಗವದ್‌ಗೀತೆಯ ವ್ಯಾಖ್ಯಾನವನ್ನು ಕನ್ನಡಕ್ಕೆ 'ಅನಾಸಕ್ತಿಯೋಗ' ಎಂಬ ಶೀರ್ಷಿಕೆಯಲ್ಲಿ ಓದುಗರ ಮನಮುಟ್ಟುವಂತೆ ಅನುವಾದ ಮಾಡಿ, ಪ್ರಕಟಣೆ ಮಾಡಿದರು. ಮುಂದೆ ಖ್ಯಾತ ಕನ್ನಡ ಸಾಹಿತಿಗಳಾದ ಎಂ.ಆರ್. ಶ್ರೀನಿವಾಸಮೂರ್ತಿ, ಸಿ.ಕೆ. ವೆಂಕಟರಾಮಯ್ಯ, ಮಾಸ್ತಿ ವೆಂಕಟೇಶ ಅಯ್ಯಂಗಾರ್, ಜಿ.ಪಿ. ರಾಜರತ್ನಂ, ಗೊರೂರು ರಾಮಸ್ವಾಮಿ ಅಯ್ಯಂಗಾರ್, ವಿ. ಸೀತಾರಾಮಯ್ಯ, ಎಲ್. ಗುಂಡಪ್ಪ, ಆನಂದ, ಡಿ.ವಿ. ಗುಂಡಪ್ಪ, ಸಂಸ, ಕೆ.ವಿ. ಪುಟ್ಟಪ್ಪ ಇವರುಗಳ ಕೃತಿಗಳನ್ನು ಪ್ರಕಟನೆ ಮಾಡಿದ ಹೆಗ್ಗಳಿಕೆ ಶ್ರೀನಿವಾಸರಾಯರದ್ದು. ಈ ಸಂಸ್ಥೆಯಿಂದ ಶ್ರೀನಿವಾಸರಾಯರು ಮಾಡಿದ ಪ್ರಮುಖ ಕೆಲಸ ಎಂದರೆ ಕನ್ನಡ ಪುಸ್ತಕಗಳು ಅಲಭ್ಯವಾದಂಥ ಕಾಲದಲ್ಲಿ ಅದರ ಪ್ರಕಟಣೆಯ ಕೆಲಸ ಮಾತ್ರವಲ್ಲದೆ, ಕನ್ನಡ ಪುಸ್ತಕ ಭಂಡಾರ ಸ್ಥಾಪಿಸಿದ್ದು. ಈ ದಿಸೆಯಲ್ಲಿ ಇವರು ಇನ್ನೂ ಒಂದು ಹೆಜ್ಜೆ ಮುಂದೆ ಇಟ್ಟು, ಪ್ರಪ್ರಥಮವಾಗಿ ಬೇರೆ ಬೇರೆ ಪ್ರಕಾಶನ ಸಂಸ್ಥೆಗಳು ಪ್ರಕಟಣೆ ಮಾಡಿದ

ಪುಸ್ತಕಗಳು ಹಾಗೂ ರಾಷ್ಟ್ರೀಯ ಮೌಲ್ಯಭರಿತ ಪುಸ್ತಕಗಳು ಒಂದೆಡೆ ಓದುಗರಿಗೆ ದೊರಕಬೇಕೆಂದು ತಮ್ಮ ಸಂಸ್ಥೆಯಲ್ಲಿಯೇ ನಿಯೋಜಿಸಿ ಕಾರ್ಯರೂಪಕ್ಕೆ ತಂದಿದ್ದು ಸಾಹಿತ್ಯ ಲೋಕದಲ್ಲಿ ಒಂದು ಅವಿಸ್ಮರಣೀಯವಾದ ಕೆಲಸ. ನಂತರ ಸತ್ಯ ಶೋಧನ ಪ್ರಕಟಣ ಮಂದಿರ, ಮಂದಿರ ಮಾತ್ರವಲ್ಲದೇ ಸತ್ಯ ಶೋಧನ ಪುಸ್ತಕ ಭಂಡಾರ ಆಗಿದ್ದು ಒಂದು ವಿಶಿಷ್ಟ ಆಯಾಮ.

ಕನ್ನಡ ಪುಸ್ತಕಗಳೆಲ್ಲ ಒಂದೇ ಸ್ಥಳದಲ್ಲಿ ಓದುಗರಿಗೆ ಸಿಕ್ಕಬೇಕೆಂಬುದೇ ಇದರ ಮೂಲ ಉದ್ದೇಶವಾಗಿತ್ತು. ಕನ್ನಡದಲ್ಲಿ ಮೊಟ್ಟಮೊದಲನೆಯ ವಿಶ್ವಕೋಶವನ್ನು ಪ್ರಕಟಿಸಿದ ಖ್ಯಾತಿ ಶ್ರೀನಿವಾಸರಾಯರದ್ದು! ಇವರೂ ಶಿವರಾಮ ಕಾರಂತರೂ ಸೇರಿ ಕಾರಂತರು ರಚಿಸಿದ 'ಬಾಲ ಪ್ರಪಂಚ' ಸಂಪುಟಗಳನ್ನು ಸುಂದರವಾಗಿ ಮುದ್ರಿಸಿ ಕನ್ನಡನಾಡಿಗೆ ನೀಡಿದ ಸಾಹಸ ಮೆಚ್ಚತಕ್ಕದ್ದೇ. ಆನಂತರ ಶ್ರೀನಿವಾಸರಾಯರು ಬೇರೆ ಕೆಲಸಚಲ್ಲಿ ನಿರತರಾದ್ದರಿಂದ, ಇಲ್ಲಿಯ ಕೆಲಸಗಳನ್ನು ಅಷ್ಟೇ ಪ್ರಾಮಾಣಿಕವಾಗಿ ನಡೆಸಿಕೊಂಡು ಹೋಗಲು ಸಾಧ್ಯವಾಗದೇ ಓರಿಯಂಟಲ್ ಲಾಂಗ್‌ಮನ್ಸ್ ಪ್ರಕಟಣ ಸಂಸ್ಥೆಗೆ ಸತ್ಯ ಶೋಧನ ಪ್ರಕಟಣೆಯನ್ನು ರವಾನಿಸಲಾಯಿತು.

**ಗಾಂಧೀವಾದಿ :**

1927ರಲ್ಲಿ ಸ್ವಲ್ಪ ಅಸ್ವಸ್ಥರಾಗಿದ್ದ ಮಹಾತ್ಮಾ ಗಾಂಧೀಜಿಯವರನ್ನು ಸರ್ ಮಿರ್ಜಾ ಇಸ್ಮಾಯಿಲ್‌ರವರು ಬೆಂಗಳೂರಿಗೆ ಆಹ್ವಾನಿಸಿ ಕೆಲಕಾಲ ಕುಮಾರಕೃಪ ನಂತರ ನಂದಿಬೆಟ್ಟದಲ್ಲಿ ಕೆಲ ದಿನಗಳು ವಿಶ್ರಮಿಸಿಕೊಳ್ಳಲು ಏರ್ಪಾಟುಮಾಡಿದ್ದರು. ಆಗ ಶ್ರೀನಿವಾಸರಾಯರು ಅವರನ್ನು ಭೇಟಿ ಮಾಡಿದರು. ಆಗ ಅವರ ಶಿಸ್ತು, ಸಂಯಮ, ದಿನಚರಿ, ಕೆಲಸದಲ್ಲಿ ಅಚ್ಚುಕಟ್ಟು ಅಷ್ಟೆ ಕಟ್ಟುನಿಟ್ಟು ಹಾಗೂ ತೀಕ್ಷ್ಣ ಸ್ವಭಾವವನ್ನು ಸೂಕ್ಷ್ಮವಾಗಿ ತುಂಬ ಹತ್ತಿರದಿಂದ ಗಮನಿಸಿದ ಶ್ರೀನಿವಾಸರಾಯರ ಮನಸ್ಸು ಗಾಂಧಿ ತತ್ವಗಳ ಕಡೆ ಒಲಿಯಿತು. ಹಾಗಾಗಿ 1920-1921ರಲ್ಲಿ ಇಂಡಿಯನ್ ನ್ಯಾಷನಲ್ ಕಾಂಗ್ರೆಸ್ ನಂತರ ಮೈಸೂರು ರಾಜ್ಯ ಕಾಂಗ್ರೆಸ್, ಸದಸ್ಯರಾದರು. ಇದಕ್ಕೆಲ್ಲ ಇವರಿಗೆ ಪೋಷಣೆ ಸಿಕ್ಕಿದ್ದು ರಾಜಾಜಿ ಅವರ ಸಂಪರ್ಕದಿಂದ. ನಂತರ ಭೇಟಿಯಾದ ಸದಾಶಿವಂ ಆಗಲೀ ಸಂಪದ್ಗಿರಿರಾಯರಾಗಲೀ ಇವರ ಗಾಂಧಿವಾದಿತನಕ್ಕೆ ನೆರವಾದರು. ಅಲ್ಲಿಂದ ಮುಂದೆ ಹಿಂದೀ ಪ್ರಚಾರ ಕಾರ್ಯಕರ್ತರಾಗಿ, ಖಾದಿ ಗ್ರಾಮೋದ್ಯೋಗ ಚಳವಳಿಗಳಲ್ಲಿ ಶ್ರೀನಿವಾಸರಾಯರ ಪಾತ್ರ ಗಮನಾರ್ಹ. 1930, 1932, 1942ರಲ್ಲಿ ಸ್ವಾತಂತ್ರ್ಯ ಚಳವಳಿ, ಉಪ್ಪಿನ ಸತ್ಯಾಗ್ರಹ, ಕ್ವಿಟ್ ಇಂಡಿಯ ಚಳವಳಿಗಳಲ್ಲಿ ಸಕ್ರಿಯವಾಗಿ ಭಾಗವಹಿಸಿದರು. ಅಂದಿನ ಮೈಸೂರಿನ ಸ್ವತಂತ್ರ ಹೋರಾಟಗಾರರಾದ ಕೆ.ಟಿ. ಭಾಷ್ಯಂ, ಟಿ. ಸಿದ್ದಲಿಂಗಯ್ಯ,

ಕೆ. ಚೆಂಗಲರಾಯರೆಡ್ಡಿ ಮುಂತಾದವರ ನಿಕಟವರ್ತಿಗಳಾಗಿ ಸ್ವಾತಂತ್ರ್ಯ ಹೋರಾಟಗಳಲ್ಲಿ ಭಾಗವಹಿಸಿದರು. ಮೈಸೂರಿನ ಜವಾಬ್ದಾರಿ ಸರ್ಕಾರದ ರಚನೆಯಲ್ಲಿ ಸೂಕ್ತ ಸಲಹೆಗಳನ್ನು ನೀಡಿ ಭಾಗಿಯಾಗಿದ್ದರು. ಇವರು ಗಾಂಧೀ ಸ್ಮಾರಕ ನಿಧಿ ಮೈಸೂರು ವಿಭಾಗದ ಅಧ್ಯಕ್ಷ ರಾಗಿ, ಗಾಂಧೀ ಶಾಂತಿ ಪ್ರತಿಷ್ಠಾನ ಸಮಿತಿಯ ಅಧ್ಯಕ್ಷರಾಗಿ, ಸರ್ವೋದಯ ಸಂಘಟನೆಗಳು ಕರ್ನಾಟಕ ಪ್ರಕೃತಿ ಚಿಕಿತ್ಸಾ ಪರಿಷತ್ ಮುಂತಾದ ಪ್ರಮುಖ ಸಂಸ್ಥೆಗಳಲ್ಲಿ; ಇವರ ಸಲಹೆ, ಸೇವೆ ಅಮೂಲ್ಯವಾದದ್ದು, ನಿರಂತರವಾದದ್ದು. ಸ್ವತಂತ್ರ ಪೂರ್ವದಲ್ಲಿ ಇಷ್ಟೆಲ್ಲ ಹೋರಾಟಗಳು, ಸಂಘಟನೆಗಳು, ಸಂಪರ್ಕಗಳು ಇದ್ದರೂ ಸಹ ಸ್ವತಂತ್ರದ ನಂತರ ಯಾವ ಸಮಯದಲ್ಲಿಯೂ, ಯಾವ ಸ್ಥಾನಕ್ಕೂ ಆಸೆ ಪಟ್ಟವರಲ್ಲ, ಇದರಿಂದ ಇವರ ಸರಳ ಮನೋಭಾವ ಎಂಥದು, ಇವರು ಎಂಥ ತ್ಯಾಗ ಜೀವಿಗಳು ಎಂದು ವ್ಯಕ್ತವಾಗುತ್ತದೆ. ಎಲ್ಲರ ಹಾಗೂ ಎಲ್ಲದರ ನಂಟು ಇರಬೇಕು, ಆದರೆ, ಯಾವುದಕ್ಕೂ ಅಂಟಿಕೊಳ್ಳಬಾರದು ಎಂಬ ಇವರ ಭಾವನೆ ನಿಜಕ್ಕೂ ಪ್ರಶಂಸನೀಯ.

ಶ್ರೀನಿವಾಸರಾಯರಿಗೆ ಬೆಂಗಳೂರಿನ ವಿದ್ಯಾಭ್ಯಾಸದ ಸಮಯದಲ್ಲಿ ಮತ್ತೊಂದು ಸಂಸ್ಥೆ ಸಂಪರ್ಕವಾಗಿದ್ದು ಎಂದರೆ, ಅದು ADA ಸಂಸ್ಥೆ (ಅಮೆಚೂರ್ ಡ್ರಾಮ್ಯಾಟಿಕ್ ಅಸೋಸಿಯೇಷನ್). ಈ ಸಂಸ್ಥೆಗೆ ಆಜೀವ ಸದಸ್ಯರಾದರು. ಈಗಾಗಲೆ ಇದ್ದ ಕನ್ನಡಪರ ಕೆಲಸಗಳ ಜೊತೆಯಲ್ಲಿ ಈ ಸಂಸ್ಥೆಯ ಕಾರ್ಯಕಲಾಪಗಳಲ್ಲಿ ಭಾಗಿಯಾದರು. ಅಲ್ಲಿ ಪ್ರದರ್ಶನವಾಗುತ್ತಿದ್ದ ಹಲವಾರು ನಾಟಕಗಳಿಗೆ ಪ್ರತ್ಯಕ್ಷವಾಗಿ ಅಲ್ಲದಿದ್ದರೂ ಪರೋಕ್ಷವಾಗಿ ಶ್ರಮಿಸುತ್ತಿದ್ದರು. ಸಂಸ್ಥೆಯ ಎಂ.ಎಲ್.ಎಸ್. ಶಾಸ್ತ್ರಿಗಳು ಸಹ ಇವರ ಸಹಪಾಠಿಗಳು. ಈ ಸಂಸ್ಥೆ ಪ್ರಮುಖವಾಗಿ ಅಭಿನಯಿಸುತ್ತಿದ್ದ ಆಂಗ್ಲ ನಾಟಕಗಳು, ಅದರಲ್ಲೂ ಶೇಕ್ಸ್‌ಪಿಯರ್‌ನ 'ಒಥೆಲೊ' ನಾಟಕ ತುಂಬ ಪ್ರಶಂಸೆಗೆ ಪಾತ್ರವಾಯಿತು. ಈ ನಾಟಕದಲ್ಲಿ ಉತ್ತಮವಾಗಿ ಅಭಿನಯಿಸುತ್ತಿದ್ದ ಬಳ್ಳಾರಿ ರಾಘುವಾಚಾರ್, ತಾರಾನಾಥ್ ಅವರ ಅಭಿನಯ ರಾಯರ ಮನಸ್ಸಿನ ಮೇಲೆ ತುಂಬ ಪ್ರಭಾವ ಬೀರಿತು. ಸ್ವಲ್ಪ ಸಮಯದ ನಂತರ ರಾಘುವಾಚಾರ್ ಅವರ ಸೆಂಟಿನರಿ ಸಲುವಾಗಿ ಒಂದು ಅಂಚೆಚೀಟಿ ತರಬೇಕೆಂಬ ಸಂದರ್ಭದಲ್ಲಿ ಸಾಕಷ್ಟು ಅಡೆತಡೆಗಳು ಬಂದು ಈ ಯೋಜನೆಯೇ ನಿಂತುಹೋಗುವ ಹಾಗಾಯಿತು. ಆಗ ಶ್ರೀನಿವಾಸರಾಯರು ಅಂದಿನ ಪೋಸ್ಟ್‌ಮಾಸ್ಟರ್ ಜನರಲ್ ಅವರನ್ನು ಭೇಟಿ ಮಾಡಿದರು. ಆಗ ಅವರು ನಾವು ಏನೂ ಮಾಡುವ ಸ್ಥಿತಿಯಲ್ಲಿ ಇಲ್ಲ, ಸಂಬಂಧಪಟ್ಟ ಮಂತ್ರಿಗಳು ಒಂದು ಸಮಾರಂಭಕ್ಕೆ ಬರುತ್ತಿದ್ದಾರೆ. ನಿಮ್ಮನ್ನು ಆಹ್ವಾನಿಸುವೆ, ನೀವು ಬೇಕಾದರೆ ಅವರ ಜೊತೆ ಮಾತಾಡಿ. ಪ್ರಯತ್ನಪಡಿ ಎಂದರು. ಶ್ರೀನಿವಾಸರಾಯರು ಆ ಕಾರ್ಯಕ್ರಮಕ್ಕೆ ಹೋಗಿ ಮಂತ್ರಿಗಳನ್ನು ಭೇಟಿ ಮಾಡಿ ಅವರ ಮನ ಒಲಿಸಿಕೊಂಡು ರಾಘುವಾಚಾರ್ ಅವರ ಅಂಚೆಚೀಟಿ ಬರುವ ಹಾಗೆ ಮಾಡಿದ ಕೆಲಸ 'ಫಿಟೀಟಿಲಿಕ್'

ವಿಭಾಗದಲ್ಲಿ ನಿರಂತರವಾಗಿ ಇಂದೂ ಉಳಿದಿದೆ. ಹಲವಾರು ನಾಟಕಗಳನ್ನು ಓದಿದವರು, ಅದರ ಪ್ರದರ್ಶನಗಳನ್ನು ಕಂಡವರು ನಾಟಕಕಾರರ ಸನಿಹದಿಂದ ಅಲ್ಲಿಯ ಕಾರ್ಯಕ್ರಮಗಳಲ್ಲಿ ಭಾಗಿಯಾಗುತ್ತಿದ್ದರು. ಮುಂದೆ ನೃತ್ಯ, ಸಂಗೀತ ಮತ್ತು ಇತರ ಕಲೆಗಳಲ್ಲಿ ಸಹ ಇವರಿಗೆ ವಿಶೇಷವಾದ ಒಲವು ಮೂಡಿಬಂತು. ಹಾಗಾಗಿ ಇಂದು ಸಹ ಚಾಮರಾಜಪೇಟೆಯ ಶ್ರೀರಾಮ ಸೇವಾ ಮಂಡಲಿಯ ಸಂಗೀತ ಕಾರ್ಯಕ್ರಮ ಮತ್ತು ಇತರ ಕಲೆಗೆ ಸಂಬಂಧಪಟ್ಟ ಕಾರ್ಯಕ್ರಮಗಳಲ್ಲಿ ಭಾಗಿಯಾಗುವುದನ್ನು ನಾನು ಎಷ್ಟೋ ಸಲ ಕಂಡಿದ್ದೇನೆ. ಇವರು ಅರಬಿಂದೊ ಸೊಸೈಟಿಯ ಅಧ್ಯಕ್ಷರಾಗಿ ಕಾರ್ಯಕಲಾಪ ನಡೆಸುತ್ತಿದ್ದಾರೆ.

**ನಿಷ್ಠಾವಂತ ನ್ಯಾಯಮೂರ್ತಿಯಾಗಿ :**

ಹತ್ತು ಅಪರಾಧಿಗಳಿಗೆ ಶಿಕ್ಷೆಯಾಗದಿದ್ದರೂ ಪರವಾಗಿಲ್ಲ, ಒಬ್ಬ ನಿರಪರಾಧಿಗೆ ಶಿಕ್ಷೆಯಾಗಬಾರದು ಎಂಬ ಕಾನೂನಿನ ಚೌಕಟ್ಟಿನಲ್ಲಿ ನ್ಯಾಯ, ನೀತಿ, ಧರ್ಮವನ್ನು ಪಾಲಿಸುತ್ತ ನ್ಯಾಯಪೀಠದಿಂದ ನ್ಯಾಯಮೂರ್ತಿಗಳಾಗಿ ನ್ಯಾಯವನ್ನು ಒದಗಿಸಿದ್ದು ಸ್ಮರಣೀಯ.

ಮೈಸೂರು ವಿಶ್ವವಿದ್ಯಾಲಯದಿಂದ ಬಿ.ಎಸ್ಸಿ. ಪದವಿಯನ್ನು ಪಡೆದು ನಂತರ ಮದರಾಸು ವಿಶ್ವವಿದ್ಯಾಲಯದಿಂದ ಬಿ.ಎಲ್. ಪದವಿಯನ್ನು ಪಡೆದು, 1927ರಲ್ಲಿ ತಮ್ಮ ವಕೀಲ ವೃತ್ತಿಯನ್ನು ಪ್ರಾರಂಭಿಸಿದರು.

ಇವರು ನಡೆಸಿದ ಹಲವಾರು ಮೊಕದ್ದಮೆಗಳಲ್ಲಿ ಪ್ರಮುಖವಾದದ್ದು - 1928ರಲ್ಲಿ ವೀರಕೇಸರಿ ಸೀತಾರಾಮಶಾಸ್ತ್ರಿ ಮತ್ತು ಮಕ್ಕಳ ಪುಸ್ತಕ ಸಂಪಾದಕರಾದ ಅಶ್ವತ್ಥನಾರಾಯಣ ಅವರ 'ನವಜೀವನ' ಪತ್ರಿಕೆಯಲ್ಲಿ ಬಂದ ಲೇಖನದ ಪರವಾಗಿ ವಾದ ಮಾಡಿದ್ದು ಇದು ಮೈಸೂರು ಸಂಸ್ಥಾನದ ಮೊದಲ ದೇಶದ್ರೋಹ ಮೊಕದ್ದಮೆ. ನಂತರ ಪಿ.ಆರ್. ರಾಮಯ್ಯ, ಎಲ್.ಎಸ್. ರಾಜು ಮುಂತಾದವರ ಪರವಾಗಿ ನ್ಯಾಯಾಲಯ ನಿಂದನೆ ಆರೋಪಣೆ ಬಗ್ಗೆ ವಾದ ಮಾಡಿದ್ದು, ಮುಂದೆ ಪ್ರಮುಖವಾದದ್ದು ಎಂದರೆ ಮಾಲೀಕ - ಕಾರ್ಮಿಕ ಸಂಬಂಧಗಳ ಬಗೆಗೆ ನಡೆದ ಮೊದಲ ಕೈಗಾರಿಕಾ ವಿವಾದಾಸ್ಪದ ಪ್ರಕರಣದಲ್ಲಿ ನೌಕರರ ಬಗ್ಗೆ ವಾದ ಮಾಡಿದವರು ನಿಟ್ಟೂರರು. ನಂತರ ಕಾರ್ಮಿಕರ ನ್ಯಾಯ ಮಂಡಳಿಯಲ್ಲಿ ಮೈಸೂರು ಬ್ಯಾಂಕ್ ನೌಕರರ ಪರವಾಗಿ ವಾದಿಸಿದರು. ಇವುಗಳನ್ನು ಗಮನಿಸಿದರೆ ಕಾರ್ಮಿಕರ ಬಗ್ಗೆ ಇವರಿಗಿದ್ದ ಕಾಳಜಿ, ಅನುಕಂಪ ವ್ಯಕ್ತವಾಗುತ್ತದೆ.

ಶ್ರೀನಿವಾಸರಾಯರ ಕಾರ್ಯನೈಪುಣ್ಯತೆ, ಕಾನೂನಿನ ಕಟ್ಟುಪಾಡು, ಪ್ರಾಮಾಣಿಕತೆ ಇವುಗಳನ್ನು ಪರಿಗಣಿಸಿ ಇವರನ್ನು ಆಗಸ್ಟ್ 1953ರಲ್ಲಿ ಅಡ್ವೊಕೇಟ್ ಜನರಲ್‌ರನ್ನಾಗಿ ನೇಮಕ ಮಾಡಿದರು. ನಂತರ ಜೂನ್ 1955ರಲ್ಲಿ ಇವರ ಸಾಮರ್ಥ್ಯವನ್ನು ನೋಡಿ

ಮೈಸೂರು ಉಚ್ಚನ್ಯಾಯಾಲಯದ ನ್ಯಾಯಮೂರ್ತಿಗಳನ್ನಾಗಿ ನೇಮಿಸಿದರು. ಮುಂದೆ ನೂತನ ಮೈಸೂರು ಸಂಸ್ಥಾನ ಅಂದರೆ ರಾಜ್ಯವಾರು ವಿಭಜನೆಯಾದ ಮೇಲೆ 'ಕರ್ನಾಟಕ'ದ ನೂತನ ಉಚ್ಚನ್ಯಾಯಾಲಯದ ನ್ಯಾಯಮೂರ್ತಿಗಳಾಗಿ ನವೆಂಬರ್ 1, 1956ರಲ್ಲಿ ಮುಂದುವರೆದರು ಎಂದು ಹೇಳಲು ಸಂತೋಷವಾಗುತ್ತೆ. ಇವರು ಆ ಸ್ಥಾನವನ್ನು ಅಲಂಕರಿಸುವ ಮುನ್ನ ಕನ್ನಡ ಸಾಹಿತ್ಯ ಪರಿಷತ್ತಿಗೆ ಹೋಗಿ ಕನ್ನಡ ಮಾತೆ ಭುವನೇಶ್ವರಿಗೆ ನಮಸ್ಕಾರ ಮಾಡಿ, ಉಚ್ಚನ್ಯಾಯಾಲಯಕ್ಕೆ ಹೋಗಿದ್ದು, ಅಂದು ಸಮಾರಂಭದ ಉದ್ಘಾಟನೆ ಕಾರ್ಯಕ್ರಮಕ್ಕೆ 'ಉದಯವಾಗಲಿ ನಮ್ಮ ಚೆಲುವ ಕನ್ನಡ ನಾಡು' ಗೀತೆಯನ್ನು ರಚಿಸಿದ ಹುಯಿಲಗೋಳ ನಾರಾಯಣರಾಯರು ಆಗಮಿಸಿದ್ದು ಒಂದು ವಿಶೇಷ. ನಂತರ ನಿಟ್ಟೂರು ಅವರು ಗದಗಿನ ವೀರನಾರಾಯಣ ಮಂದಿರದಲ್ಲಿ ಸಹ ಇವರನ್ನು ಭೇಟಿ ಮಾಡಿದ್ದು, ಮಾತಾಡಿದ್ದು ಕೂಡ ಇವರ ಮನಸ್ಸಿನಿಂದ ಮಾಸಿಲ್ಲ. ಅಂದಿನ ರಾಜ್ಯದ ಮುಖ್ಯಮಂತ್ರಿಗಳಾದ ಎಸ್. ನಿಜಲಿಂಗಪ್ಪನವರು ಶ್ರೀನಿವಾಸರಾಯರ ಸಹಪಾಠಿಗಳು ಎಂದಮೇಲೆ ಅವರ ಆತ್ಮೀಯತೆ ಎಂತಹದು ಎಂದು ನಮಗೆ ತಿಳಿಯುತ್ತದೆ. ಇಬ್ಬರೂ ಗಾಂಧಿವಾದಿಗಳು.

1961ರಲ್ಲಿ ಶ್ರೀನಿವಾಸರಾಯರು ಕಾನೂನು ಕಾಯ್ದೆಗಳ ಉಚ್ಚಸ್ಥಾನ ಎಂದರೆ ಕರ್ನಾಟಕದ ಉಚ್ಚನ್ಯಾಯಾಲಯದ ಮುಖ್ಯ ನ್ಯಾಯಾಧೀಶರಾದರು. ಈ ಸಮಯದಲ್ಲಿ ಇವರು ಮದರಾಸಿಗೆ ಹೋಗಿ ರಾಜಾಜಿ ಅವರನ್ನು ಕಂಡು ಸಾಕಷ್ಟು ವಿಚಾರ ವಿನಿಮಯಗಳನ್ನು ಮಾಡಿಕೊಂಡರು. ಇದೇ ಸಮಯದಲ್ಲಿಯೇ ಮದರಾಸು ಉಚ್ಚನ್ಯಾಯಾಲಯದ ಶತಮಾನೋತ್ಸವ ಸಮಾರಂಭ ಆಚರಣೆ ಆಯಿತು. ಆಗ ಅವರು ಅಲ್ಲಿಗೆ ಹೋಗಿ ಭಾಗಿಯಾಗಿದ್ದು ಒಂದು ಆಕಸ್ಮಿಕ. ರಾಜಾಜಿಯವರ ಹುಟ್ಟುಹಬ್ಬ ಆಚರಣೆ ಮಾಡಿದಾಗ, ಎಲ್ಲ ಕಡೆ ವಿಜೃಂಭಣೆಯಿಂದ ಆಚರಿಸಿದರು, ಶ್ರೀನಿವಾಸರಾಯರು ರಾಜಾಜಿಯವರ ಹೊಸೂರು ಬಳಿ ಇರುವ ಹುಟ್ಟೂರಿಗೆ ಹೋಗಿ ಅಲ್ಲಿ ಆಚರಣೆಯಲ್ಲಿ ಭಾಗವಹಿಸಿದ್ದು ಒಂದು ವಿಶೇಷ.

ಆಗಸ್ಟ್ 1963ರಲ್ಲಿ ಮುಖ್ಯ ನ್ಯಾಯಾಧೀಶರ ಸ್ಥಾನದಿಂದ ನಿವೃತ್ತರಾದರು. ಇವರು ಮುಖ್ಯ ನ್ಯಾಯಾಧೀಶರಾದ ಕಾಲದಲ್ಲಿ ಅಂದಿನ ಮೈಸೂರಿನ ರಾಜ್ಯಪಾಲರಾದ ಶ್ರೀ ಜಯ ಚಾಮರಾಜೇಂದ್ರ ಒಡೆಯರ್ ಅವರು ವಿದೇಶ ಯಾತ್ರೆಗೆ ಹೊರಟಿದ್ದರಿಂದ ಆ ಸ್ಥಾನವನ್ನು ಅಂದರೆ ರಾಜ್ಯಪಾಲರಾಗಿ ಆಗಸ್ಟ್ 1963ರವರೆಗೂ ಜವಾಬ್ದಾರಿಯನ್ನು ವಹಿಸಿಕೊಂಡು, ನಂತರ ನಿವೃತ್ತಿಯನ್ನು ಪಡೆದರು. ಇವರು ರಾಜ್ಯಪಾಲರಾಗಿದ್ದಾಗ ಅಲ್ಪಾವಧಿಯಲ್ಲಿಯೇ ಇವರು ಎಷ್ಟರಮಟ್ಟಿಗೆ ಕನ್ನಡಪರವಾಗಿದ್ದರು ಎಂದರೆ, ನಿಟ್ಟೂರರು ಅಂದು ಆಗಸ್ಟ್ 15ರಂದು ಮಾಡಿದ ಕನ್ನಡ ಭಾಷಣವೇ ಸಾಕ್ಷಿ. ಹಿಂದೆಂದೂ ಯಾರೂ ಮಾಡದ ಈ

ಭಾಷಾಭಿಮಾನಕ್ಕೆ ರಾಷ್ಟ್ರಕವಿ ಕುವೆಂಪುರವರು, ಒಂದು ಹಂಡೆ ಹಾಲು ಕುಡಿದಷ್ಟು ಸಂತೋಷ ಆಯ್ತು ಅಂತ ಕೊಂಡಾಡಿದ್ದು ಮಾತ್ರವಲ್ಲದೇ ಅಭಿನಂದಿಸುವುದರಲ್ಲಿ ಮೊದಲಿಗರಾದರು. ನಂತರ ಇವರ ಸೇವೆಯನ್ನು ಒಂದಲ್ಲ ಒಂದು ರೀತಿಯಲ್ಲಿ ಸರ್ಕಾರ ಬಳಸಿಕೊಳ್ಳಬೇಕು ಎಂಬ ಬಯಕೆಯಿಂದ ಇವರನ್ನು 'ಸೆಂಟ್ರಲ್ ವಿಜಿಲೆನ್ಸ್ ಕಮೀಶನರ್' ಆಗಿ ನೇಮಕ ಮಾಡಲಾಯಿತು. ಆಗಸ್ಟ್ 1968ರಲ್ಲಿ ಇವರು ನಿವೃತ್ತರಾದರು. ನಿವೃತ್ತರಾಗಿದ್ದು ಬರಿ ಈ ಹುದ್ದೆಯಿಂದ ಮಾತ್ರವಲ್ಲ, ಸರ್ಕಾರಿ ಹುದ್ದೆಗಳಿಂದಲೇ ನಿವೃತ್ತರಾದರು. ಇವರು ಉಚ್ಚನ್ಯಾಯಾಲಯದ ಬಾರ್ ಕೌನ್ಸಿಲ್‌ನ ಪ್ರಥಮ ಅಧ್ಯಕ್ಷರಾಗಿದ್ದರು. ಇವರ ಘನ ಅಧ್ಯಕ್ಷತೆಯಲ್ಲಿ ಅಖಿಲ ಕರ್ನಾಟಕ ವಕೀಲರ ಸಭೆ ಬೆಳಗಾಂನಲ್ಲಿ, ಮದರಾಸಿನ ಬಾರ್ ಒಕ್ಕೂಟದ ಸಭೆ ಹಾಗೂ ಚಿತ್ತೂರು ಜಿಲ್ಲಾ ಕಾನೂನು ಸಭೆ ನಡೆದದ್ದನ್ನ ಇಲ್ಲಿ ನೆನೆಯಬಹುದು. ಶ್ರೀನಿವಾಸರಾಯರ ಇಲ್ಲಿಯವರೆಗಿನ ಚಟುವಟಿಕೆಗಳನ್ನು ಗಮನಿಸಿದರೆ, ಇವರ ಹುಟ್ಟಿನಿಂದಲೇ ಆಗಸ್ಟ್ ತಿಂಗಳು ಆಕಸ್ಮಿಕವಾಗಿ ಇವರ ಸೇವೆಗೆ ಅಂಟಿಕೊಂಡಿದೆ, ಭಾರತ ದೇಶಕ್ಕೆ ಸ್ವತಂತ್ರ ಬಂದಿದ್ದು ಆಗಸ್ಟ್ ತಿಂಗಳು! ಅಂದ ಮೇಲೆ ಶ್ರೀನಿವಾಸರಾಯರ ಸ್ವತಂತ್ರ ಹೋರಾಟದಲ್ಲಿ ಇವರ ಪಾಲು ಎಂಥದು ಎಂದು ಅರ್ಥವಾಗುತ್ತದೆ.

ಸರ್ಕಾರದ ಸೇವೆ ಮುಗಿದ ನಂತರ ಸಾಹಿತ್ಯ, ಕಲೆ, ಸಂಗೀತ, ಸಮಾಜ ಸೇವೆ ಕಡೆ ಇವರ ದೃಷ್ಟಿ ಹರಿಯಿತು. ಹೇಳಲು ಮರೆತೆ, ಶ್ರೀನಿವಾಸರಾಯರು ಮಾಡದ ಕೆಲಸಗಳು ಯಾವುದು ಎಂದು ಗುರುತಿಸುವುದು ತುಂಬ ಕಷ್ಟಸಾಧ್ಯ! ಇವರು ಬಿ.ಎಸ್ಸಿ. ನಂತರ ಬಿ.ಎಲ್.ಗೆ ಮುಂಚಿತ ಇದ್ದ ಅಂತರದಲ್ಲಿ ನ್ಯಾಷನಲ್ ಹೈಸ್ಕೂಲ್‌ನಲ್ಲಿ ಉಪಾಧ್ಯಾಯ ರಾಗಿ ಸಹ ಸೇವೆ ಸಲ್ಲಿಸಿದ್ದಾರೆ. ಅದೇ ಸಂದರ್ಭದಲ್ಲಿ, ಕ್ರೀಡಾ ವಿಭಾಗದ ಜವಾಬ್ದಾರಿ ಇವರದಾಗಿತ್ತು. ಇದಕ್ಕೆ ಅನುಭವ, ಇವರು ಈ ಹಿಂದೆ ಟೆನ್ನಿಸ್, ಫುಟ್‌ಬಾಲ್ ಆಟಗಳಲ್ಲಿ ವಿದ್ಯಾರ್ಥಿ ದೆಸೆಯಲ್ಲಿ ಪಳಗಿದ್ದೇ ಕಾರಣ. ಸೈಕಲಿಂಗ್ ಎಂದರೆ ಬಹಳ ಪ್ರಿಯ. ಹಾಗಾಗಿ ಆ ಕಾಲದಲ್ಲಿ ಇವರು ತೊಡಗಿಸಿಕೊಂಡ ಹಲವಾರು ಚಟುವಟಿಕೆಗಳಿಗೆ ಇದೇ ಇವರ ರಥ. ಅದೇ ಅವರ ಪಥ! ಈ ಕಾಲದಲ್ಲಿಯೆ ಕೆ. ಸಂಪದ್ಗಿರಿರಾಯರು ಅತ್ಯಂತ ನಿಕಟವರ್ತಿಗಳು ಆತ್ಮೀಯ ಮಿತ್ರರಲ್ಲಿ ಒಬ್ಬರಾದರು. ಈ ಸಾಮೀಪ್ಯಕ್ಕೆ ಇಬ್ಬರೂ ಧರಿಸುತ್ತಿದ್ದು ಖಾದಿ, ಇಬ್ಬರೂ ಅಳವಡಿಸಿಕೊಂಡಿದ್ದು ಗಾಂಧೀಮಾರ್ಗ.

ಶ್ರೀನಿವಾಸರಾಯರ ನೆನಪಿನ ಶಕ್ತಿ ಇಂದಿಗೂ ಅಸಾಧಾರಣ. ಎಲ್ಲಿಂದ ಎಲ್ಲಿಗೆ ಬೇಕಾದರೂ ಹೋಗಬಹುದು. ಅಹಿಂಸೆ ಪರಮೋಧರ್ಮ ಎಂದು ನಂಬಿದ 'Gentle-men to the core' ಎಂಬುದು ಇವರಿಗೆ ಅನ್ವಯಿಸುತ್ತದೆ. ಒಂದೊಂದು ನೆನಪೂ ಒಂದೊಂದು ವಿಶೇಷವಾದ ಅನುಭವ, ಒಬ್ಬೊಬ್ಬ ವ್ಯಕ್ತಿಯೂ ಒಂದು ಆದರ್ಶದ ಶಕ್ತಿ.

ಹಾಗಾಗಿ ಇಂದಿನ ಯುವಪೀಳಿಗೆ ನಿಟ್ಟೂರು ಅವರನ್ನು ನೋಡಿ ಕಲಿಯಬೇಕಾದದ್ದು ಬಹಳ ಇದೆ. ಆ ಮನಸ್ಸನ್ನು ಬೆಳೆಸಿಕೊಳ್ಳಬೇಕು ಹಾಗೂ ಅವರನ್ನು ಒಳ್ಳೆ ಕೆಲಸಗಳಿಗೆ ಬಳಸಿಕೊಳ್ಳಬೇಕು.

ಇಷ್ಟೆಲ್ಲ ಸೇವೆಗಳು, ಸಾಧನೆಗಳು, ಸಂಪರ್ಕಗಳು ಶ್ರೀನಿವಾಸರಾಯರ ಜೀವನದಲ್ಲಿ ಆಗಿದೆ ಎಂದರೆ, ಅದಕ್ಕೆ ಭದ್ರವಾದ ಬುನಾದಿ ಇರಬೇಕು. ಪ್ರಮಾಣ ಮಾಡಿ ತಿಳಿಸುತ್ತೇನೆ, 'ಸತ್ಯವನ್ನೇ ಹೇಳ್ತೀನಿ, ಸತ್ಯವನ್ನ ಬಿಟ್ಟು ಬೇರೆ ಏನನ್ನು ಹೇಳುವುದಿಲ್ಲ' ಅನ್ನುವ ಹಾಗೆ. ಶ್ರೀ ನಿಟ್ಟೂರು ಶ್ರೀನಿವಾಸರಾಯರು 24-8-1903ರಲ್ಲಿ ಬೆಂಗಳೂರಿನಲ್ಲಿ ದಿವಾನ್ ಶ್ರೀ ಎಂ.ಎಸ್. ಕೃಷ್ಣರಾಯರ ಮನೆಯಲ್ಲಿ ಶಾಲಾ ಮಾಸ್ಟರ್ ಆದ ಶ್ರೀ ನಿಟ್ಟೂರು ಶಾಮಣ್ಣ ಮತ್ತು ಶ್ರೀಮತಿ ಸೀತಮ್ಮ ಇವರ ಪುತ್ರರತ್ನರಾಗಿ ಜನ್ಮ ತಾಳಿದರು. ಇವರಿಗೆ ನಾಲ್ಕು ಜನ ಮಕ್ಕಳು - ಎರಡು ಗಂಡು, ಎರಡು ಹೆಣ್ಣು. ಗಂಡು ಮಕ್ಕಳಲ್ಲಿ ಮೊದಲನೆಯವರು ಶ್ರೀ ಚಂದ್ರಶೇಖರ್, ವಕೀಲ ವೃತ್ತಿಯನ್ನು ಆರಿಸಿಕೊಂಡಿದ್ದಾರೆ, ಕೊನೆಯವರು ಶ್ರೀ ಸುಬ್ಬಣ್ಣ, ಇಂಜಿನಿಯರ್ ಆಗಿ ಕಿರ್ಲೋಸ್ಕರ್ ಎಲೆಕ್ಟ್ರಿಕ್ ಕಂಪನಿಯ ಉಪಾಧ್ಯಕ್ಷರಾಗಿ ಸೇವೆ ಸಲ್ಲಿಸಿದವರು, ಮಧ್ಯದ ಇಬ್ಬರು ಹೆಣ್ಣುಮಕ್ಕಳಾದ ಶ್ರೀಮತಿ ಜಯಸೀತ ಮತ್ತು ಶ್ರೀಮತಿ ಲಲಿತ, ವಿದೇಶದಲ್ಲಿ ತಮ್ಮ ಸುಖ ಜೀವನವನ್ನು ಸಾಗಿಸುತ್ತಾ ಇದ್ದಾರೆ. ಇವರ ಈ ತುಂಬು ಕುಟುಂಬಕ್ಕೆ ಸಾಕಷ್ಟು ಶಿಸ್ತು, ಸಂಯಮಗಳನ್ನು ನೀಡಿದ ಹಿರಿಯ ಅನುಭವ ಪರಂಪರೆಯೇ ಇದೆ. ದಿವಾನ್ ಶ್ರೀ ಎಂ.ಎಸ್. ಕೃಷ್ಣರಾಯರು, ಶ್ರೀ ನಿಟ್ಟೂರು ಶ್ರೀನಿವಾಸರಾಯರಿಗೆ ಸೋದರ ಮಾವನೂ ಹೌದು. ದಿವಾನರ ಮಗಳಾದ ಶ್ರೀಮತಿ ಪದ್ಮಮ್ಮನವರನ್ನು ಇವರಿಗೆ ಧಾರೆ ಎರೆದು ಕೊಟ್ಟ ಮಾವನೂ ಹೌದು. ಅಂದ ಹಾಗೆ ಈ ನಿಟ್ಟೂರು ಗುಬ್ಬಿ ತಾಲ್ಲೂಕಿನಲ್ಲಿದೆ, ಇವರ ವಂಶೀಕರು ನಿಟ್ಟೂರಿನಲ್ಲಿ ಇದ್ದಿದ್ದರಿಂದ ಇವರೆಲ್ಲರ ಹೆಸರಿನ ಹಿಂದೆ ನಿಟ್ಟೂರು ಊರು ಸೇರಿಕೊಂಡು ಪುಣ್ಯ ಕಟ್ಟಿಕೊಂಡಿದೆ.

ಕೊನೆಯದಾಗಿ ಶ್ರೀನಿವಾಸರಾಯರಿಗೆ ಅವರು ಮಾಡಿರುವ ಸೇವೆಗೆ ಭಾರತದ ಅತ್ಯುನ್ನತ ಪ್ರಶಸ್ತಿ ಬರಬೇಕು, ಬಂದೆ ಬರುತ್ತದೆ. ಆದರೆ ಅವರಿಗೆ ಬಂದಿದ್ದು. ದಕ್ಷಿಣ ಭಾರತ ಹಿಂದಿ ಪರಿಷತ್‌ನ ಡಾಕ್ಟರೇಟ್ ಪಟ್ಟ, 1996ರಲ್ಲಿ ಹಾಗೂ ಕರ್ನಾಟಕದ ರಾಜ್ಯೋತ್ಸವ ಪ್ರಶಸ್ತಿ 1997ರಲ್ಲಿ. ಇತ್ತೀಚೆಗೆ ಅಂದರೆ 24-01-2003ರಂದು ಬೆಂಗಳೂರು ವಿಶ್ವವಿದ್ಯಾಲಯ ನೀಡಿದ ಡಾಕ್ಟರೇಟ್ ಪಟ್ಟ.

ಭಗವಂತ ಅವರಿಗೆ ಇನ್ನೂ ಹೆಚ್ಚಿನ ಆರೋಗ್ಯಭಾಗ್ಯ ಆಯಸ್ಸು ಅನುಗ್ರಹಿಸಲಿ, ಅವರ ಸಂಗಡ ನಾವೂ ನಿರಂತರವಾಗಿರಲು, ಬಾಳಲು ಕರುಣಿಸಲಿ.



# ‘ಮಗೂ, ನಿಟ್ಟೂರು’

. . . . . . . . . . . . . . . . . . . . . . ✍ *ಚಿಂತಾಮಣಿ ಕೊಡ್ಲೆಕೆರೆ**

ಮಗೂ ನಿಟ್ಟೂರು,
ನಿನಗೆ ನೂರಕ್ಕೆ ನೂರು

ಖುಷಿ ಪಟ್ಟಿದ್ದಾಳೆ ತಾಯಿ ಬೆಂಗಳೂರು
ತನ್ನ ಮಗ ಗಣಿತದಲ್ಲಿ ಅಷ್ಟೂ ಅಂಕ ಗಳಿಸಿದ್ದಕ್ಕೆ
ವಿಶ್ವೇಶ್ವರಯ್ಯ, ಮೂರ್ತಿರಾವ್ ಮುಂತಾದ
ಶತಕ ಸಾಧಿಸಿದ ತೇಜೋಮಯರ
ಸಾಲಲ್ಲಿ ಸೇರಿಕೊಂಡಿದ್ದಕ್ಕೆ
‘ಸರಳತೆಯೂ ಒಂದು ಗುಣ
ಸರ್ವಾಂಗ ಶುದ್ಧ
ಬದುಕೂ ಒಂದು ವರ ’
ಎಂದು ತೋರಿಸಿಕೊಟ್ಟಿದ್ದಕ್ಕೆ
ಈ ನಾಡ ಸಂಸ್ಕೃತಿಯ
ಸಾರ್ಥಕ ಆಕೃತಿಯಾಗಿದ್ದಕ್ಕೆ
ಉಲಿಯುತ್ತಿದ್ದಾಳೆ ತಾಯಿ, ಬೆಂಗಳೂರು:
ಮಗೂ ನಿಟ್ಟೂರು,
ಇದಿನ್ನೂ ಬರಿಯ ಒಂದು ನೂರು.



* ಸಿ-೨-೨, ಎಸ್.ಟಿ.ಆರ್. ಕ್ವಾರ್ಟರ್ಸ್, ಡಬ್ಲ್ಯು.ಎಂ.ಎಸ್. ಕಾಂಪೌಂಡ್
೪೭ನೇ ಕ್ರಾಸ್, ೯ನೇ ಮುಖ್ಯರಸ್ತೆ, ೫ನೇ ಬ್ಲಾಕ್, ಜಯನಗರ
ಬೆಂಗಳೂರು - ೫೬೦ ೦೪೧

# ನಾ ಕಂಡಂತೆ ನಿಟ್ಟೂರು

. . . . . . . . . . . . . . . . . . . . . . . . ✍ ಬೇಲೂರು ರಾಮಮೂರ್ತಿ*

ನಾನು ಶ್ರೀ ನಿಟ್ಟೂರು ಶ್ರೀನಿವಾಸರಾಯರನ್ನು ಕಂಡದ್ದು ಸುಮಾರು ಇಪ್ಪತ್ತೈದು ವರ್ಷಗಳ ಹಿಂದೆ. ಅಂದು ಡಿವಿಜಿಯವರ ಶತಮಾನೋತ್ಸವ ಸಮಾರಂಭ. ಐಟಿಐ ಸಾಂಸ್ಕೃತಿಕ ಸಂಘದಿಂದ ಗಾಯನ ಸಮಾಜದಲ್ಲಿ. ಅಂದು ಡಿವಿಜಿಯವರ ಬಗೆಗೆ ಒಂದು ಕಿರು ಭಾಷಣ ಮಾಡುವ ಅವಕಾಶ ಸಿಕ್ಕಿತ್ತು. ಆ ಸಂದರ್ಭದಲ್ಲಿ ಸ್ವಭಾವತಃ ಹೆಚ್ಚು ಮಾತುಗಾರನಾಗಿರದಿದ್ದ ನಾನು ಅನೇಕ ಹಿರಿಯರನ್ನು ಮಾತನಾಡಿಸಲು ಸಂಕೋಚ ಪಡುತ್ತಿದ್ದೆ. ಅಂದಿನ ಸಮಾರಂಭದಲ್ಲಿ ನಿಟ್ಟೂರರನ್ನು ಭೇಟಿ ಮಾಡಿದ್ದಷ್ಟೆ.

ಇನ್ನೊಂದು ಕಡೆಯಿಂದ ನಿಟ್ಟೂರುರವರು ನನಗೆ ಹೇಗೆ ಹತ್ತಿರದವರಾದವರು ಅಂದರೆ ಅವರ ಮಗ ಶ್ರೀ ಎಸ್.ಎಸ್. ಸುಬ್ಬಣ್ಣನವರು ನಾನು ಕೆಲಸ ಮಾಡುತ್ತಿದ್ದ ಕಿರ್ಲೋಸ್ಕರ್ ಎಲೆಕ್ಟ್ರಿಕ್ ಕಂಪನಿಯಲ್ಲಿ ನನಗೆ ಮೇಲಧಿಕಾರಿಯಾಗಿದ್ದವರು. ಆಗಲೇ ನನ್ನಲ್ಲಿದ್ದ ಸಾಹಿತ್ಯ ಪ್ರತಿಭೆಯನ್ನು ಗುರುತಿಸಿ ಉತ್ತೇಜನ ಕೊಟ್ಟವರು.

ಅನೇಕ ಸಂದರ್ಭಗಳಲ್ಲಿ ಶ್ರೀ ನಿಟ್ಟೂರುರವರನ್ನು ಭೇಟಿ ಮಾಡಿರುವುದು, ಆಶೀರ್ವಾದ ಪಡೆದಿರುವುದು, ಪರಸ್ಪರ ಮಾತಾಡಿರುವುದು ಕೇವಲ ಸಾಮಾನ್ಯವಾದ ವಿಚಾರಗಳಾದರೂ ಪ್ರತಿಸಾರಿ ಅವರನ್ನು ಭೇಟಿ ಮಾಡಿದಾಗಲೂ ನಾನು ಅವರಿಗೆ

---

* ೩೧೩/ಬಿ, ೭ನೇ ಮುಖ್ಯರಸ್ತೆ, ವೈಯಾಲಿಕಾವಲ್
ಬೆಂಗಳೂರು - ೫೬೦ ೦೦೩

'ಕೈ ಮುಗಿದು, ಸಾರ್ ಬೇಲೂರು ರಾಮಮೂರ್ತಿ. ಹೇಗಿದೀರ ಸಾರ್' ಅಂತ ಪರಿಚಯ ಮಾಡ್ಕೊತಾನೇ ಇದ್ದೆ. ಬಹುಶಃ ಇದು ಅವರಿಗೆ ಇರಸು ಮುರುಸಾಗಿರಬೇಕು ಆದರೂ ಅದನ್ನು ತೋರಗೊಡದೇ ಇನ್ನೊಂದು ಸಂದರ್ಭದಲ್ಲಿ ಭೇಟಿ ಮಾಡಿದಾಗ ನಾನು ಮಾತಾಡುವ ಮುಂಚೆಯೆ, 'ಅವರು ನಮಸ್ಕಾರ ಬೇಲೂರು ರಾಮಮೂರ್ತಿಗಳಿಗೆ ಚೆನ್ನಾಗಿದ್ದೀರಾ' ಅಂದಾಗ ನಾನೇ ಕುಬ್ಜನಾಗಿ ಹೋದೆ. ಅಂದರೆ ಅವರು ಭೇಟಿ ಮಾಡಿದ ಯಾವುದೇ ವ್ಯಕ್ತಿಗಳನ್ನು ಅವರು ಸುಲಭವಾಗಿ ಮರೆಯುವವರಲ್ಲ.

ಇವೆಲ್ಲವುಗಳಿಗಿಂತ ಹೆಚ್ಚಾಗಿ ಅವರೊಡನೆ ನಾನು ಕಳೆದ ಒಂದೆರಡು ಅಮೂಲ್ಯ ಕ್ಷಣಗಳನ್ನು ಇಲ್ಲಿ ಮೆಲುಕು ಹಾಕುವುದು ಅವಶ್ಯಕ ಅನಿಸುತ್ತದೆ. ಅವರಲ್ಲಿರುವ ಹೃದಯ ಪ್ರೇಮ ಹೀಗೆ ಸಂವಹಿಸುತ್ತದೆ ಅನ್ನುವುದು ಇಲ್ಲಿ ದ್ಯೋತಕವಾಗುತ್ತದೆ.

ಮೊದಲನೆಯ ಸಂದರ್ಭ, ನನ್ನ ಅತ್ಯಮೂಲ್ಯ ಕೃತಿ ಮಹಾಕವಿ ಮುದ್ದಣ ಬಿಡುಗಡೆಯ ಸಂದರ್ಭ. ಕೃತಿ ಸಿದ್ಧವಾದೊಡನೆ ನನಗನಿಸಿದ್ದು ಇದನ್ನು ಶ್ರೀ ನಿಟ್ಟೂರುರವರೇ ಬಿಡುಗಡೆಗೊಳಿಸಬೇಕೆಂದು. ಕಾರ್ಯಕ್ರಮ ಆಯೋಜಿಸಿದ್ದು ಅವರಿಗೆ ಪ್ರಿಯವಾದ ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆಯಲ್ಲಿ. ನಾನು ಅವರಲ್ಲಿ ಈ ಕುರಿತು ಅರಿಕೆ ಮಾಡಿಕೊಂಡ ನಂತರ ಬಂದು ಕೃತಿ ಬಿಡುಗಡೆ ಮಾಡಲು ಒಪ್ಪಿಕೊಂಡು, "ಆದರೆ ನನಗೆ ಮೊದಲು ನೀವು ಪುಸ್ತಕ ತಂದುಕೊಡಬೇಕು. ನಾನು ಅದನ್ನು ಓದಿ ನಂತರ ಸಮಾರಂಭಕ್ಕೆ ಬರ್ತೀನಿ" ಅಂದರು. ಹಾಗೆಯೇ ನಾನು ಅವರಿಗೆ ಪುಸ್ತಕ ತೆಗೆದುಕೊಂಡು ಹೋಗಿ ಕೊಟ್ಟೆ. ಆಹ್ವಾನ ಪತ್ರಿಕೆಯನ್ನೂ ಕೊಟ್ಟೆ. ಕಾರ್ಯಕ್ರಮ ಇದ್ದುದು ಈ ರೀತಿ: ಕೃತಿ ಬಿಡುಗಡೆ ಮತ್ತು ಆಶೀರ್ವಚನ ಶ್ರೀ ನಿಟ್ಟೂರು ಶ್ರೀನಿವಾಸರಾವ್, ಕೃತಿ ಕುರಿತು: ಪ್ರೊ|| ಅ ರಾ ಮಿತ್ರ. ಅಧ್ಯಕ್ಷತೆ ಪ್ರೊ. ಜಿ. ವೆಂಕಟಸುಬ್ಬಯ್ಯ. ಕೃತಿ ಬಿಡುಗಡೆ ಮಾಡಿ ಮಾತಾಡಲು ನಿಂತ ಶ್ರೀ ನಿಟ್ಟೂರುರವರು ಎಷ್ಟು ಹಾಸ್ಯ ಮನೋಭಾವದವರೆಂದು ಸಾಬೀತುಪಡಿಸುವಂತೆ ಹೇಳಿದ್ದು; "ನೋಡಿ ಬೇಲೂರು ರಾಮಮೂರ್ತಿಯವರು ಬಂದು ಕೃತಿ ಬಿಡುಗಡೆ ಮಾಡಬೇಕು ಅಂದರು, ಒಪ್ಪಿಕೊಂಡೆ. ಆಮೇಲೆ ಆಹ್ವಾನ ಪತ್ರಿಕೆ ನೋಡಿದ ಮೇಲೆ ಗೊತ್ತಾಯಿತು. ಅವರು ಎಷ್ಟು ಬುದ್ಧಿವಂತರೆಂದು. ಯಾಕೆಂದ್ರೆ ನಾನೆಲ್ಲಿ ಹೆಚ್ಚು ಮಾತಾಡಿಬಿಡ್ತೀನೋ ಅಂತ ಆಶೀರ್ವಚನ ಅಂದುಬಿಟ್ಟಿದ್ದಾರೆ" ಅಂದರು. ಆಮೇಲೆ ಸ್ವಾರಸ್ಯವಾಗಿ ಮಾತಾಡಿದರು ಅನ್ನಿ. ಆದರೆ ನನಗೆ ಇಲ್ಲಿ ಮೆಚ್ಚುಗೆಯಾಗತಕ್ಕಂತ ವಿಚಾರ ಅಂದರೆ ಸದಾ ಅವರಲ್ಲಿ ಜಾಗೃತವಾಗಿರುವ ಕ್ರಿಯಾಶೀಲತೆ, ಜೀವನೋತ್ಸಾಹ, ಎಲ್ಲ ಕೆಲಸಗಳಿಗೂ ಅವರು ಕೊಡುವ ಸಮಾನ ಗೌರವ ಇತ್ಯಾದಿ. ತಮಗಿಂತ ಕಿರಿಯರಿಗೆ ಅವರು ಕೊಡುವ ಉತ್ತೇಜನ ಎಲ್ಲರನ್ನು ಒಂದೇ ರೀತಿಯ ಪ್ರೀತಿ ವಿಶ್ವಾಸದಿಂದ ಮಾತಾಡಿಸುವ ಹೃದಯ ವೈಶಾಲ್ಯತೆ. ಇವು ಸಕಲರೂ ಮೆಚ್ಚುವಂಥದು.

ಇನ್ನೊಂದು ಸಂದರ್ಭ: ನಾನು ಕೆಲಸ ಮಾಡುತ್ತಿದ್ದ ಸಂಸ್ಥೆಯಿಂದ ಸಿವಿಲ್ ಇಂಜಿನಿಯರಿಂಗ್ ಕ್ಷೇತ್ರದಲ್ಲಿ ಅತ್ಯಂತ ಉತ್ತಮ ಮಟ್ಟದ ಸೇವೆ ಸಲ್ಲಿಸಿದ ಹಿರಿಯರಿಗೆ ಒಂದು ಗೌರವ ಅರ್ಪಣೆ ಕಾರ್ಯಕ್ರಮ. ಸನ್ಮಾನ ಸ್ವೀಕರಿಸುವವರೇ ಸುಮಾರು ಅರುವತ್ತೈದು, ಎಪ್ಪತ್ತು. ಎಪ್ಪತ್ತೈದು ವರ್ಷದವರಾಗಿರೋದರಿಂದ ಸನ್ಮಾನ ಮಾಡೋರು ಅವರಿಗಿಂತ ಹಿರಿಯರಾಗಿದ್ದರೆ ಲಕ್ಷಣ ಅಲ್ಲವೇ ಅನಿಸಿದ್ದರಿಂದ ಅಂದಿನ ಸಮಾರಂಭದಲ್ಲಿ ಸನ್ಮಾನ ಮಾಡಲು ತಕ್ಕನಾದ ವ್ಯಕ್ತಿ ಅಂದರೆ ಶ್ರೀ ನಿಟ್ಟೂರುರವರೇ ಅನಿಸಿ ಅವರನ್ನು ಆಹ್ವಾನಿಸಲು ನಾನು ನಮ್ಮ ಸಾಹೇಬರು ಹೋದೆವು. ಆ ಸಮಾರಂಭಕ್ಕೂ ಬರಲು ಅವರು ಒಪ್ಪಿಕೊಂಡರು. ನಾನಂದೆ "ಸಾರ್ ಸುಮಾರು ಮೂವತ್ತು ಜನರಿಗೆ ಅಂದು ಸನ್ಮಾನ ಮಾಡಬೇಕು. ಅದೇ ಸುಮಾರು ಒಂದು ಗಂಟೆಯಾಗಬಹುದು" ಅಂದಾಗ "ಆಗಲಿ ಪರವಾಗಿಲ್ಲ" ಅಂದರು.

ಅವತ್ತಿನ ಸಮಾರಂಭದಲ್ಲಿ ಅವರು ಸನ್ಮಾನ ಮಾಡಿದರು. ನಿಟ್ಟೂರುರವರು ಅಷ್ಟೂ ಹೊತ್ತು ನಿಂತಿರಲೇಬೇಕಲ್ಲ ಅಂದು ಅವರಿಗೆ ಒಂದು ಆಸನ ಕೊಟ್ಟು "ಸಾರ್ ನೀವು ಇಲ್ಲಿ ಕೂತಿರಿ, ಸನ್ಮಾನಿತರು ಬಂದಾಗ ಎದ್ದು ನಿಂತು ಅವರಿಗೆ ಗೌರವಿಸಿ ಮತ್ತೆ ಕೂತ್ಕೊಳಿ. ಹೀಗಾದ್ರೆ ನಿಮಗೆ ಹೆಚ್ಚು ಆಯಾಸ ಆಗಲ್ಲ" ಅಂದಾಗ ಅವರು "ಪರವಾಗಿಲ್ಲ, ನನಗೇನೂ ಆಯಾಸ ಆಗಲ್ಲ ಬೇಕಾದ್ರೆ ನೀವು ಕೂತ್ಕೊಳ್ಳಿ" ಅಂದವರು ಇಡೀ ಸನ್ಮಾನ ಕಾರ್ಯಕ್ರಮ ನಡೆಯುವಷ್ಟು ಹೊತ್ತು ನಿಂತೇ ಇದ್ದದ್ದು ಸಮಾರಂಭಕ್ಕೆ ಗೌರವ ತಂದಿತ್ತು.

ಅಂದಿನ ಅವರ ಭಾಷಣದಲ್ಲಿ, ಕರ್ನಾಟಕ ಉಚ್ಚನ್ಯಾಯಲಯದ ನ್ಯಾಯಮೂರ್ತಿಗಳಾಗಿ, ಕೆಲಕಾಲ ಕರ್ನಾಟಕದ ಹಂಗಾಮಿ ರಾಜ್ಯಪಾಲರಾಗಿದ್ದ ಅವರಲ್ಲಿದ್ದ ನಾಡಿನ ಬಗೆಗಿನ ಕಳಕಳಿಯನ್ನು ಕುರಿತು ಹೇಳಿದರು. ಸಿವಿಲ್ ಇಂಜಿನಿಯರಿಂಗ್ ಕ್ಷೇತ್ರದ ಸೇವೆಯ ಮಹತ್ವವನ್ನು ಕುರಿತು ಹೇಳಿದರು. ಎಲ್ಲರೊಡನೆಯೂ ಮುಕ್ತರೀತಿಯಿಂದ ಬೆರೆತರು. ತಮಾಷೆಯಾಗಿ ಕಾಲ ಕಳೆದರು. ಆರೋಗ್ಯವನ್ನು ಚೆನ್ನಾಗಿ ಕಾಪಾಡಿಕೊಂಡಿದ್ದರಿಂದ ಅಂದಿನ ಭೋಜನ ಕೂಟದಲ್ಲೂ ಅವರು ಭಾಗವಹಿಸಿ ತಮಗೇನು ಬೇಕೋ ಅದು, ತಮಗೆಷ್ಟು ಬೇಕೋ ಅಷ್ಟು ಬಡಿಸಿಕೊಂಡು ಊಟ ಮಾಡಿದುದು ಎಲ್ಲರಿಗೂ ಸಂತಸ ತಂದಿತ್ತು. ಎಲ್ಲಕ್ಕಿಂತ ಹೆಚ್ಚಾಗಿ ಊಟದ ನಂತರ ಅವರು ತಾಂಬೂಲವನ್ನು ಸವಿದದ್ದು.

ಇಷ್ಟೆಲ್ಲ ಆದ ಮೇಲೆ ನಮ್ಮ ಸಂಸ್ಥೆಯ ಬಗೆಗೆ ಅವರಿಗೆ ವಿಶೇಷವಾದ ಗೌರವ ಬಂತು. ನನ್ನನ್ನು ಕರೆದು ನಾನೊಂದು ಸಾರಿ ನಿಮ್ಮ ಆಫೀಸಿಗೆ ಬರಬೇಕು ಕರೆದುಕೊಂಡು ಹೋಗ್ತೀರಾ ಅಂದವರು, ತಕ್ಷಣ ಯಾವತ್ತು ಅಂತ ನೀವೇ ನಿರ್ಧಾರ ಮಾಡಿ, ಯಾಕೇಂದ್ರೆ ನಾನು ನಿಮ್ಮಲ್ಲಿಗೆ ಬರೋದ್ರಿಂದ ನಿಮ್ಮ ಕೆಲಸಕ್ಕೆ ಅಡಚಣೆ ಉಂಟಾಗಬಾರದು ಅಂದರು ಕಳಕಳಿಯಿಂದ.

ಯಾತಕ್ಕೆ ಇಷ್ಟೆಲ್ಲ ನೆನಪು ಮಾಡಿಕೊಳ್ಳಬೇಕಾಗಿ ಬಂತು ಅಂದರೆ ಶ್ರೀ ನಿಟ್ಟೂರು ಶ್ರೀನಿವಾಸರಾಯರಲ್ಲಿ ಅಡಕವಾಗಿರುವ ಜೀವನೋತ್ಸಾಹ, ಬದುಕಿನ ಬಗೆಗಿನ ಕಳಕಳಿ, ಆಸ್ಥೆ, ಗೌರವಪೂರ್ಣ ನಡವಳಿಕೆ ಇವು ಅನುಕರಣೀಯ ಯೋಗ್ಯವಾದಂಥವು.

ಇಂಥಾ ಮಹಾನುಭಾವರು ನಮ್ಮ ನಡುವೆ ಇದ್ದಾರೆ ಅನ್ನೋದೇ ನಮ್ಮ ಭಾಗ್ಯ. ನಾವು ಅವರೊಡನೆ ಒಡನಾಡುತ್ತಿರುವುದು, ಅವರನ್ನು ಹತ್ತಿರದಿಂದ ಕಾಣುತ್ತಿರುವುದು ಇವು ನಮಗೆ ದೊರೆತಿರುವ ಒಂದು ಅಮೂಲ್ಯವಾದ ವರ ಅಂದುಕೊಂಡರೂ ತಪ್ಪಿಲ್ಲ.

ಶ್ರೀ ನಿಟ್ಟೂರು ಶ್ರೀನಿವಾಸರಾಯರನ್ನು ನೋಡಿದಾಗ, ಅವರ ಹಾಸ್ಯಮನೋಭಾವವನ್ನು ಗಮನಿಸಿದಾಗ ಒಂದು ಹಾಸ್ಯ ತುಣುಕು ನೆನಪಾಗುತ್ತದೆ. ಅದನ್ನು ನಿಮ್ಮೊಂದಿಗೆ ಹಂಚಿಕೊಂಡು ನನ್ನ ಈ ಲೇಖನವನ್ನು ಮುಕ್ತಾಯಗೊಳಿಸುತ್ತೇನೆ.

ಹಾಸ್ಯ ತುಣುಕು ಏನೆಂದರೆ ಒಬ್ಬ ಹಿರಿಯ ಯಜಮಾನರು ತಮ್ಮ ಪ್ರತಿ ಹುಟ್ಟುಹಬ್ಬದಲ್ಲೂ ಸಂಭ್ರಮದಿಂದ ಮಕ್ಕಳು, ಮೊಮ್ಮಕ್ಕಳು, ಮರಿಮಕ್ಕಳೊಂದಿಗೆ ಕಾಲ ಕಳೆದು ಕೊನೆಗೆ ಅದರ ನೆನಪಿಗೆ ಒಂದು ಫೋಟೋ ಹಿಡಿಸಿಕೊಳ್ತಿದ್ರಂತೆ. ಹೀಗೆ ಆ ಯಜಮಾನರ ೯೮ನೆಯ, ೯೯ನೆಯ ಹುಟ್ಟು ಹಬ್ಬದ ಸಮಾರಂಭದಲ್ಲಿ ಭಾಗವಹಿಸಿ ಫೋಟೋ ತೆಗೆದ ಫೋಟೋಗ್ರಾಫರ್ ಆ ಯಜಮಾನರನ್ನು ಕೇಳಿದನಂತೆ. ಯಜಮಾನರೇ ನಾನು ನಿಮ್ಮ ೯೮ನೆಯ, ೯೯ನೆಯ ಹುಟ್ಟು ಹಬ್ಬದ ಫೋಟೋ ತೆಗೆದಿದ್ದೇನೆ ನಿಮ್ಮ ನೂರನೆಯ ಹುಟ್ಟುಹಬ್ಬದ ಫೋಟೋ ತೆಗೆಯುವ ಭಾಗ್ಯ ಕೂಡಾ ನನಗೆ ನೀಡಬಹುದೇ ಅಂತ. ಅದಕ್ಕೆ ಆ ಯಜಮಾನರು ಹೇಳಿದರಂತೆ 'ಸಿಕ್ಕರೂ ಸಿಗಬಹುದು. ನಿನ್ನ ಆರೋಗ್ಯವನ್ನು ಕಾಪಾಡಿಕೊಂಡಿರು' ಅಂತ. ಇದು ಅವರಲ್ಲಿದ್ದ ಜೀವನೋತ್ಸಾಹ.

ಶ್ರೀ ನಿಟ್ಟೂರುರವರು ಇನ್ನೂ ನೂರ್ಕಾಲ ನಮ್ಮೊಂದಿಗಿರಲಿ.

❑

# ಶತಾಯುಷಿ ಶ್ರೀ ನಿಟ್ಟೂರು ಶ್ರೀನಿವಾಸರಾವ್

. . . . . . . . . . . . . . . . . . . . . . . . . . . ✍ ಎ.ಎಸ್. ರಾಮಕೃಷ್ಣ*

ಶ್ರೀ ನಿಟ್ಟೂರು ಶ್ರೀನಿವಾಸರಾವ್‌ರವರ ತೀರ್ಥರೂಪರಾದ ಶ್ರೀ ಶಾಮಣ್ಣನವರು ಎ.ವಿ. ಸ್ಕೂಲ್‌ನಲ್ಲಿ ಮುಖ್ಯೋಪಾಧ್ಯಾಯರಾಗಿ ಚಳ್ಳಕೆರೆ, ತೀರ್ಥಹಳ್ಳಿ, ಹೊಳಲ್ಕೆರೆ, ಹೊಸದುರ್ಗ, ಚೆನ್ನಗಿರಿ, ಶಿವಮೊಗ್ಗ, ನಂಜನಗೂಡು, ಚನ್ನಪಟ್ಟಣ ಮುಂತಾದ ಊರುಗಳಲ್ಲಿ ಸುಮಾರು ೩೫ ವರ್ಷಗಳು ಎಲ್ಲರ ಮನ ಸೆಳೆದ ಮಹಾನ್ ವ್ಯಕ್ತಿಯಾಗಿದ್ದರು. ನಿಟ್ಟೂರು ಶ್ರೀನಿವಾಸರಾವ್‌ರವರ ಮಾತೃಶ್ರೀ ಶ್ರೀಮತಿ ಸೀತಮ್ಮನವರು ಮನೆಗೆಲಸವನ್ನು ಅಚ್ಚುಕಟ್ಟಾಗಿ ಮಾಡಿಕೊಂಡು, ಮನೆಗೆ ಬರುತ್ತಿದ್ದ ಅತಿಥಿ-ಅಭ್ಯಾಗತರಿಗೆ ಊಟ-ತಿಂಡಿಯನ್ನು ನೀಡಿದಂತಹ ಮಹಾ ಸಾಧ್ವಿಮಣಿ ಎಂದರೆ ತಪ್ಪಾಗಲಾರದು.

ಜ್ಞಾನಪೀಠ ಪ್ರಶಸ್ತಿ ಪಡೆದು ಜನಪ್ರಿಯ ಸಾಹಿತಿ, ಕವಿಗಳಾದ ಶ್ರೀ ಕೆ.ವಿ. ಪುಟ್ಟಪ್ಪನವರು ಇವರ ಪರಮ ಶಿಷ್ಯರಾಗಿದ್ದರು. ಹೊಸದುರ್ಗ, ಚಳ್ಳಕೆರೆ, ಚಿತ್ರದುರ್ಗದಲ್ಲಿ ತಂದೆಯವರಾದ ಶ್ರೀ ಶಾಮಣ್ಣನವರೇ ಶ್ರೀ ನಿಟ್ಟೂರು ಶ್ರೀನಿವಾಸರಾಯರಿಗೆ ಪ್ರಾಧ್ಯಾಪಕರಾಗಿದ್ದರು. ಕಾಲೇಜು ವಿದ್ಯಾಭ್ಯಾಸವನ್ನು ನಿಟ್ಟೂರುರವರು ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ ಮುಗಿಸಿದರು. ೧೯೨೦ರಿಂದ ೧೯೨೪ರವರೆಗೆ ಸೆಂಟ್ರಲ್ ಕಾಲೇಜಿನಲ್ಲಿ ಓದುತ್ತಿರುವಾಗಲೇ "ಪ್ರಬುದ್ಧ ಕರ್ಣಾಟಕ" ಎಂಬ ಪತ್ರಿಕೆಯನ್ನು ಪ್ರತಿ ತಿಂಗಳು ತಪ್ಪದೇ

---

* ನಂ. ೭೩೫, ೮ನೇ ಮುಖ್ಯರಸ್ತೆ, ೩ನೇ ಫೇಸ್, ೫ನೇ ಬ್ಲಾಕ್
ಬನಶಂಕರಿ ೩ನೇ ಹಂತ, ಭುವನೇಶ್ವರಿ ನಗರ, ಬೆಂಗಳೂರು - ೫೬೦೦೮೫

ತರುತ್ತಿದ್ದು ಆ ಪತ್ರಿಕೆಯಲ್ಲಿ ಹಲವಾರು ವಿದ್ವಾಂಸರು ಲೇಖನಗಳನ್ನು ಬರೆದುಕೊಡುತ್ತಿದ್ದು ಅದು ಎಲ್ಲರ ಗಮನ ಸೆಳೆದಿದ್ದು ಅಲ್ಲದೆ ಕನ್ನಡ ಸಂಸ್ಕೃತಿಯ ಪುನರುಜ್ಜೀವನದಲ್ಲಿ ವಹಿಸಿದ ಪಾತ್ರ ಅವಿಸ್ಮರಣೀಯವಾದದ್ದು. ಅಲ್ಲಿನ ಕರ್ನಾಟಕ ಸಂಘದ ಕಾರ್ಯದರ್ಶಿಯಾಗಿ ನಿಟ್ಟೂರುರವರು ಆ ಸಂಸ್ಥೆಯ ಚಟುವಟಿಕೆಗಳಲ್ಲಿ ಭಾಗವಹಿಸುತ್ತಿದ್ದರು. ಆ ಸಂಸ್ಥೆಯು ಹೊರ ತರುತ್ತಿದ್ದ ಪ್ರಬುದ್ಧ ಕರ್ಣಾಟಕದ ಸಂಪಾದಕರೂ ಆಗಿ ಕಾರ್ಯ ನಿರ್ವಹಿಸಿದ್ದರು.

ಸೆಂಟ್ರಲ್ ಕಾಲೇಜಿನಲ್ಲಿ ಓದುತ್ತಿದ್ದಾಗ ಅವರ ದೇಹಸ್ಥಿತಿಯು ಸ್ವಲ್ಪ ಎಡವಟ್ಟಾಗಿತ್ತು. ಚೇತರಿಸಿಕೊಂಡ ನಂತರ ಅವರು ವಿಜ್ಞಾನದ ಓದನ್ನು ಮುಂದುವರಿಸುವುದು ಅವರ ಆರೋಗ್ಯಕ್ಕೆ ಕುಂದನ್ನುಂಟುಮಾಡಬಹುದೆಂದು ಅವರ ಹಿರಿಯರು ನಿಟ್ಟೂರುರವರನ್ನು ಲಾ (ಕಾನೂನು) ಓದುವುದಕ್ಕಾಗಿ ಮದರಾಸಿಗೆ ಕಳಿಸಿಕೊಟ್ಟರು. ನಿಟ್ಟೂರುರವರು ಅಲ್ಲೇ ಇದ್ದು ಬಿ.ಎಲ್. ಪರೀಕ್ಷೆಯನ್ನು ಪಾಸ್ ಮಾಡಿದರು. ನಂತರ ನಿಟ್ಟೂರು ಶ್ರೀನಿವಾಸ ರಾಯರು ಬೆಂಗಳೂರಿಗೆ ಬಂದು ೩೦ ವರ್ಷಗಳ ಸುದೀರ್ಘಕಾಲ ನ್ಯಾಯವಾದಿಗಳಾಗಿದ್ದರು. ಆಗ ಕಲಾಮಂದಿರದ ಶ್ರೀ ಅ.ನ.ಸುಬ್ಬರಾಯರ ಪರಿಚಯವಾಯಿತು. ಅ.ನ.ಸುಬ್ಬರಾಯರು ಮೊದಲು ಬಳೇಪೇಟೆಯಲ್ಲಿ ಬೋರ್ಡ್‌ಗಳನ್ನು ಬರೆಯುವಂತಹ ಒಂದು ಸಂಸ್ಥೆಯನ್ನು ಪ್ರಾರಂಭಿಸಿದ್ದರು. ೧೯೧೯ರಲ್ಲಿ ಕಲಾಮಂದಿರದ ಕಲಾಶಾಲೆ ಎಂಬ ಸಂಸ್ಥೆಯನ್ನು ಸ್ಥಾಪಿಸಿದರು. ಶ್ರೀ ನಿಟ್ಟೂರು ಶ್ರೀನಿವಾಸರಾಯರಿಗೆ ನ್ಯಾಯವಾದಿಗಳಾದಾಗ ಮೊದಲು ಕೇಸನ್ನು ಕೊಟ್ಟವರು ಕಲಾಮಂದಿರದ ಅ.ನ.ಸುಬ್ಬರಾಯರು ಎಂದು ನೆನೆಯುತ್ತಾರೆ. ನಂತರ ಅವರು ಈ ದೆಸೆಯಲ್ಲಿ ಒಬ್ಬ ದೊಡ್ಡ ನ್ಯಾಯಾವಾದಿಗಳಾಗಿ, ಬಿಡುವಿಲ್ಲದೇ ಹತ್ತಾರು ವರ್ಷಗಳು ಎಲ್ಲಾ ಕೇಸುಗಳಲ್ಲಿಯೂ ಅವರು ವಾದಿಸುತ್ತಿದ್ದ ವೈಖರಿ ನಿಜಕ್ಕೂ ಎಲ್ಲರಲ್ಲೂ ಅಚ್ಚರಿಯನ್ನುಂಟು ಮಾಡುತ್ತಿತ್ತು. ನಂತರ ಮೈಸೂರು ಸರ್ಕಾರ ಅವರನ್ನು 'ಅಡ್ವೋಕೇಟ್ ಜನರಲ್' ಆಗಿ ನೇಮಿಸಿತು. ಶ್ರೀಯುತರು ಈ ದೆಸೆಯಲ್ಲಿ ಮಾಡಿದ ಸೇವೆಯಂತೂ ಅದ್ಭುತ. ಇಂದೂ ಸಹ ಮಹಾಜನತೆ ಅದನ್ನು ನೆನೆಯುತ್ತಾರೆ.

ಶ್ರೀನಿಟ್ಟೂರುರವರು ವಿಶ್ರಾಂತಿ ಜೀವನ ಪಡೆದ ನಂತರ ಅವರನ್ನು ದೆಹಲಿಯಲ್ಲಿ ಸೆಂಟ್ರಲ್ ವಿಜಿಲೆನ್ಸ್ ಕಮಿಶನರ್ ಎಂಬ ಹೊಸ ಹುದ್ದೆಯನ್ನು ಸೃಷ್ಟಿಸಿ ಮೊದಲ ಬಾರಿಗೆ ಒಬ್ಬ ಕನ್ನಡದ ವ್ಯಕ್ತಿಯನ್ನು ಆಹ್ವಾನಿಸಿದ್ದು, ಕನ್ನಡಿಗರೆಲ್ಲ ಹೆಮ್ಮೆಪಡುವಂತಹ ವಿಷಯ. ಅವರು ಈ ಹುದ್ದೆಯಲ್ಲಿಯೂ ಉತ್ತಮ ಕಾರ್ಯಮಾಡಿ ದೆಹಲಿಯಲ್ಲಿಯೂ ಪ್ರಸಿದ್ಧರಾದರು. ಅವರು ರಾಜ್ಯಪಾಲರಾಗಿದ್ದಾಗ ನಮ್ಮಲ್ಲಿ ಜನಪ್ರಿಯ ಮುಖ್ಯಮಂತ್ರಿಗಳಾಗಿದ್ದ

ಶ್ರೀಯುತ ನಿಜಲಿಂಗಪ್ಪನವರು ನಿಟ್ಟೂರುರವರನ್ನು ಚಿತ್ರದುರ್ಗಕ್ಕೆ ಬರಮಾಡಿಕೊಂಡು ಅವರನ್ನು ಅಲ್ಲಿ ಗೌರವಿಸಿದ್ದನ್ನು ಇಂದಿಗೂ ನೆನೆಯುತ್ತಾರೆ.

ಬೆಂಗಳೂರಿನ ಪೆರೇಡ್ ಗ್ರೌಂಡ್‌ನಲ್ಲಿ ನಡೆದ ಭಾರತದ ಸ್ವಾತಂತ್ರ್ಯ ದಿನಾಚರಣೆಯಲ್ಲಿ ಶ್ರೀ ನಿಟ್ಟೂರು ಶ್ರೀನಿವಾಸರಾಯರು ಸೆಲ್ಯೂಟ್ ಸ್ವೀಕರಿಸಿದ ನಂತರ, ಅಚ್ಚ, ಅಪ್ಪಟ ಕನ್ನಡ ಕಸ್ತೂರಿಯಲ್ಲಿ ಮಾತನಾಡಿದಾಗ, ಬಂದಿದ್ದ ಪ್ರೇಕ್ಷಕರೆಲ್ಲರೂ ದೀರ್ಘ ಕರತಾಡನ ಮಾಡಿ ಈ ಹೊಸ ಆಯಾಮಕ್ಕೆ ಪ್ರೋತ್ಸಾಹಿಸಿದರು.

ಆಗ ಕನ್ನಡದ ಕುಲಬಂಧು, ಜನಪ್ರಿಯ ಕವಿಶ್ರೇಷ್ಠರಾದ ಶ್ರೀ ಕೆ.ವಿ. ಪುಟ್ಟಪ್ಪನವರು, "ಇದುವರೆವಿಗೂ ಎಲ್ಲ ರಾಜ್ಯಪಾಲರು ಸ್ವಾತಂತ್ರ್ಯ ದಿನಾಚರಣೆಯಂದು ಇಂಗ್ಲಿಷಿನಲ್ಲಿಯೇ ಭಾಷಣ ಮಾಡುವ ಪ್ರಕ್ರಿಯೆಯನ್ನು ರಾಜ್ಯಪಾಲರಾದ ಶ್ರೀ ನಿಟ್ಟೂರು ಶ್ರೀನಿವಾಸರಾಯರು ಬದಲಿಸಿ, ಕನ್ನಡದಲ್ಲಿಯೇ ಭಾಷಣ ಮಾಡಿದ್ದು ನನಗಂತೂ ಒಂದು ಹಂಡೆ ಹಾಲು ಕುಡಿದಂತಾಗಿದೆ" ಎಂದು ಪ್ರಶಂಸಿಸಿದರು.

ಎಲ್ಲ ಕಡೆಯಿಂದಲೂ ಶ್ರೀ ನಿಟ್ಟೂರು ಶ್ರೀನಿವಾಸರಾಯರಿಗೆ ಅಭಿನಂದನೆಗಳ ಸುರಿಮಳೆಯಾಯಿತೆಂದರೆ ತಪ್ಪಾಗಲಾರದು. ಇವರು ರಾಜ್ಯಪಾಲರಾಗಿದ್ದಾಗ ಒಂದು ಸಮಾರಂಭಕ್ಕೆ ರಾಜಭವನದಿಂದ ಹೊರಟಾಗ ಆಕಾಶವಾಣಿಯ ಮುಂಭಾಗದಲ್ಲಿ ನಿಂತಿದ್ದ ಜನಪ್ರಿಯ ಸಾಹಿತಿ ಶ್ರೀ ಮ.ನ. ಚೌಡಪ್ಪನವರು ಹಾಗೂ ರಂಗತಜ್ಞ ಶ್ರೀ ಎಚ್.ಕೆ. ರಂಗನಾಥ್‌ರವರನ್ನು ಕಂಡ ನಿಟ್ಟೂರರು ತಕ್ಷಣ ತಮ್ಮ ಕಾರನ್ನು ನಿಲ್ಲಿಸಿ ಅವರನ್ನು ತಮ್ಮ ಕಾರಿನೆಡೆಗೆ ಬರಲು ತಿಳಿಸಿದರು. ನಂತರ ಮ.ನ. ಚೌಡಪ್ಪನವರ ಹಾಗೂ ರಂಗನಾಥರವರ ಕುಶಲವನ್ನು ವಿಚಾರಿಸಿ ಅವರನ್ನು ವಂದಿಸಿದಾಗ ಆ ಇಬ್ಬರು ಮಹನೀಯರು "ನಿಮ್ಮಂತಹವರು ನೂರು ಕಾಲ ಬಾಳಬೇಕು" ಎಂದರು. ಅದು ಇಂದು ನಿಜವಾಗಿ 'ನಿಟ್ಟೂರರು ನೂರು ವರ್ಷಗಳನ್ನು ದಾಟಿದ್ದಾರೆ' ಎಂಬುದು ಕಾಕತಾಳೀಯ ವಾದರೂ ಅಪ್ಪಟ ಸತ್ಯ.

ಇವರ ನಂತರ, ಇತ್ತೀಚೆಗೆ ಕರ್ನಾಟಕದ ರಾಜ್ಯಪಾಲರಾಗಿದ್ದ ಶ್ರೀಮತಿ ವಿ.ಎಸ್. ರಮಾದೇವಿಯವರು ನಿಟ್ಟೂರರ ಮೇಲ್ಪಂಕ್ತಿಯನ್ನೇ ಅನುಸರಿಸಿ ಮೊದಲ ಬಾರಿಗೆ "ಕನ್ನಡದಲ್ಲಿಯೇ ಪ್ರಮಾಣ ವಚನವನ್ನು " ಸ್ವೀಕರಿಸಿದ್ದು ಕನ್ನಡ ಜನತೆ ಸದಾ ನೆನೆಯ ಬೇಕಾದ ವಿಚಾರ.

೧೯೨೨-೨೮ರಲ್ಲಿ "ಸತ್ಯಶೋಧನ ಪುಸ್ತಕ ಭಂಡಾರ" ಎಂಬ ಪುಸ್ತಕ ಪ್ರಕಟಣೆಯ ಸಂಸ್ಥೆಯನ್ನು ಶ್ರೀಯುತ ನಿಟ್ಟೂರು ಶ್ರೀನಿವಾಸರಾಯರು ಸ್ಥಾಪಿಸಿ ಹಲವಾರು ಪುಸ್ತಕಗಳನ್ನು ಮೊದಲ ಬಾರಿಗೆ ಪ್ರಕಟಿಸಿದ್ದು ಸಹ ಒಂದು ವೈಶಿಷ್ಟ್ಯ.

ಮಹಾತ್ಮಾಗಾಂಧಿಯವರನ್ನು ಮೊದಲ ಬಾರಿಗೆ ಕಂಡು ಅವರ ಭಾಷಣವನ್ನು ಕೇಳಿ ಅವರ ತತ್ವಗಳನ್ನು ಜೀವನದಲ್ಲಿ ಅಳವಡಿಸಿಕೊಂಡು ಬಂದವರು ನಮ್ಮ ನಿಟ್ಟೂರು ಶ್ರೀನಿವಾಸರಾಯರು. ಅಂದಿನಿಂದ ಇಂದಿನವರೆಗೂ ಅವರು ಖಾದಿ ಬಟ್ಟೆಯನ್ನೇ ಧರಿಸುತ್ತಾರೆಂಬುದು ಒಂದು ವೈಶಿಷ್ಟ್ಯ.

ಶ್ರೀ ಯಾಜ್ಞಿಕ್‌ರವರು, ಜವಾಹರಲಾಲ್ ನೆಹರು, ಮಹಾತ್ಮಾಗಾಂಧೀಜಿಯವರಂತಹ ಹಿರಿಯ ನಾಯಕರ ಪರಿಚಯ, ಅಲ್ಲದೆ ಶ್ರೀಯುತ ವಲ್ಲಭಭಾಯಿ ಪಟೇಲ್, ಜಯಪ್ರಕಾಶ್ ನಾರಾಯಣ್ ಹಾಗೂ ವಿನೋಬಾ ಭಾವೆಯವರಂತಹವರ ಸಹವಾಸ ದೊರೆತದ್ದು ತಮ್ಮ ಪುಣ್ಯ ಎಂದು ನೆನೆಯುತ್ತಾರೆ. ಜಯಪ್ರಕಾಶ್ ನಾರಾಯಣ್‌ರವರು ಸೇವಾಗ್ರಾಮದ ಸ್ಥಾಪಕರಾದರು.

೧೯೨೨ರಲ್ಲಿ ರಾಜಕೀಯ ಮೊಕದ್ದಮೆಯಲ್ಲಿ ಅಹಮದಾಬಾದಿನಲ್ಲಿ ಶ್ರೀ ಶಂಕರ ಲಾಲ್ ಬ್ಯಾಂಕಾ ಹಾಗೂ ಮಹಾತ್ಮಾಗಾಂಧೀಜಿಯವರನ್ನು ರಾಜದ್ರೋಹ ಮಾಡುತ್ತಿರುವುದು ನಿಜ. ನಮಗೆ ಕನಿಷ್ಠ ಪಕ್ಷ ೬ ವರ್ಷಗಳು ಕಠಿಣ ಸಜೆ ನೀಡಿ ಎಂದು ವಿನಂತಿಸಿಕೊಂಡರು. ಈ ಪತ್ರವನ್ನು ಅಚ್ಚಕನ್ನಡ ಭಾಷೆಯಲ್ಲಿ ಅದನ್ನು ಕನ್ನಡದಲ್ಲಿ ಪ್ರಕಟಿಸಿದವರು ಕಲಾಮಂದಿರದ ಅ.ನ. ಸುಬ್ಬರಾಯರು. ಅವರು ಸಹಸ್ರಾರು ಪತ್ರಗಳನ್ನು ಬೆಂಗಳೂರಿನಲ್ಲೆಲ್ಲ ಹಂಚಿದ್ದು ಒಂದು ವೈಶಿಷ್ಟ್ಯವೆಂದರೆ ತಪ್ಪಾಗಲಾರದು.

ಅಂತೆಯೇ, ಶ್ರೀಯುತ ಅ.ನ.ಸುಬ್ಬರಾಯರನ್ನು ನೆನೆಯುತ್ತಾ ಅವರು ಕಲಾಪ್ರಪಂಚಕ್ಕೆ ಮಾಡಿರುವ ಸೇವೆಯಂತೂ ಅದ್ಭುತ. ಅಲ್ಲದೇ ಮೈಸೂರು ಆರ್ಟ್ಸ್ ಅಂಡ್ ಫ್ರೇಮ್ ವರ್ಕ್ಸ್ ಎಂಬ ಸಂಸ್ಥೆಯನ್ನು ಸ್ಥಾಪಿಸಿ ಅದಕ್ಕೆ ಬೇಕಾದ ಮಿಷನರಿಗಳನ್ನು ಶ್ರೀಯುತ ಸುಬ್ಬರಾಯರೇ ಕಂಡುಹಿಡಿದು ಮೈಸೂರು ಪ್ರಾಂತ್ಯದಲ್ಲಿ ನಮ್ಮ ದಿವಾನರಾಗಿದ್ದ ಸರ್ ಎಂ. ವಿಶ್ವೇಶ್ವರಯ್ಯನವರು ಖುದ್ದಾಗಿ ಈ ಸಂಸ್ಥೆಗೆ ಭೇಟಿ ನೀಡಿ ಸುಬ್ಬರಾಯರನ್ನು ಹರಸಿದ್ದೂ ಸಹ ಒಂದು ವಿಶೇಷ.

ಕಲಾಮಂದಿರದ ಶ್ರೀ ಅ.ನ. ಸುಬ್ಬರಾಯರಿಗೆ ಮೊದಲ ಬಾರಿಗೆ ಕೋಗಿಲೆ ಕಂಠದ ಶ್ರೀ ಕಾಳಿಂಗರಾವ್‌ರವರನ್ನು ಬೆಂಗಳೂರಿಗೆ ಪರಿಚಯಿಸಿದ ಕೀರ್ತಿ ಸಲ್ಲುತ್ತದೆ. ಅಂತೆಯೇ ಶ್ರೀಮತಿ ಪಿ.ಆರ್. ಕಮಲಮ್ಮ, ಎಸ್.ಆರ್. ಸ್ವಾಮಿ ಹಾಗೂ ಚಿತ್ರಕಲಾ ಪರಿಷತ್ತಿನ ಪ್ರಸಿದ್ಧ ಕಲಾಕಾರರಾದ ಶ್ರೀ ನಂಜುಂಡರಾವ್, ಡಾ|| ವಿಜಯ ಹಾಗೂ ಇಂದು ವಿಶ್ವಖ್ಯಾತಿ ಗಳಿಸಿರುವ ಶ್ರೀ ಬಿ.ಕೆ.ಎಸ್. ವರ್ಮ ಮತ್ತು ಜನಪ್ರಿಯ ಶಿಲ್ಪಕಾರ ವೆಂಕಟಾಚಲಪತಿ ಹಾಗೂ ತುಮಕೂರಿನಲ್ಲಿದ್ದ ಶ್ರೀಮತಿ ಬಿ. ಚನ್ನಮ್ಮನವರನ್ನು ಬೆಂಗಳೂರಿಗೆ ಕರೆಸಿ ಅವರಿಗೆ ಪ್ರೋತ್ಸಾಹಿಸಿದ್ದು ಅಂತೆಯೇ ಕಲಾಮಂದಿರದಲ್ಲಿ ಶ್ರೀಮತಿ ಪದ್ಮ ಎಂಬ ಹೆಂಗಸಿಗೆ ಸ್ಯಾರಿ

ಪ್ರಿಂಟಿಂಗ್‌ನಲ್ಲಿ ಟ್ರೈನಿಂಗ್ ಕೊಟ್ಟಿದ್ದು ಅಲ್ಲದೆ ಕೊಟ್ಟಣದ ಅಕ್ಕಿ ಎಂಬ ಸಂಸ್ಥೆಯೊಂದನ್ನು ಸ್ಥಾಪಿಸಲು ಮುಖ್ಯ ಕಾರಣರಾದವರು ಶ್ರೀ ಅ.ನ. ಸುಬ್ಬರಾಯರು. ಅಲ್ಲದೆ ಸುಬ್ಬರಾಯರ ಮೊಮ್ಮಗನಾದ ಚಿ||ಎ.ಎಮ್. ಪ್ರಕಾಶನು ಈಗ ಕಲಾಮಂದಿರದ ಪ್ರಾಂಶುಪಾಲನಾಗಿ ಉತ್ತಮ ಕೆಲಸ ನಿರ್ವಹಿಸುತ್ತಿದ್ದಾನೆ. ಅಲ್ಲದೆ ಸುಬ್ಬರಾಯರ ಮಕ್ಕಳಾದ ಎ.ಎಸ್. ಮೂರ್ತಿ ಹಾಗೂ ಎ.ಎಸ್. ರಾಮಕೃಷ್ಣರವರು ರಂಗಭೂಮಿಯಲ್ಲಿ ಇಂದಿಗೂ ಶ್ರಮಿಸುತ್ತಿರುವುದು ಶ್ಲಾಘನೀಯ.

ನಾನು ವಿತಕ್ಕಾಗಿ ಶ್ರೀ. ಅ.ನ.ಸುಬ್ಬರಾಯರನ್ನು ನೆನಯುತ್ತೇನೆಂದರೆ ಅವರು ನಿರಂತರವಾಗಿ ಯಾವ ಒಂದು ಫಲಾಪೇಕ್ಷೆಯೂ ಇಲ್ಲದೆ "ಕಲಾ" ಎಂಬ ಮಾಸಪತ್ರಿಕೆ ಯಲ್ಲಿ ನಾಟಕ-ನೃತ್ಯ-ಸಂಗೀತ ವಿಭಾಗಗಳಲ್ಲಿ ಸಹಸ್ರಾರು ಜನರನ್ನು ಮುಂದೆ ತಂದಿದ್ದಾರೆ ಎಂದರು.



# ಶಿಸ್ತಿನ ಸಿಪಾಯಿ ನಿಟ್ಟೂರು ಶ್ರೀನಿವಾಸರಾಯರು

........................... ✍ ಪ್ರೇಮಾ ಭಟ್*

ಒಲ್ಲೆನೆನದಿರು ಬಾಳನ್, ಒಲವದೇನೆನ್ನದಿರು ।
ಉಲ್ಲಾಸಕೆಡೆ ಮಾತು ನಿನ್ನಿನಾದನಿತು ॥
ನಿಲ್ಲು ಕೆಚ್ಚೆದೆಯಿಂದಲನ್ಯಾಯಗಳನಳಿಸೆ ।
ಎಲ್ಲಕ್ಕು ಸಿದ್ಧನಿರು -ಮಂಕುತಿಮ್ಮ

ಎನ್ನುವಂತೆ ಬಾಳಿ ಬದುಕಿದವರು ನಿಟ್ಟೂರು ಶ್ರೀನಿವಾಸರಾಯರು. ದೃಢ ಚಿತ್ತ, ದೃಢ ಸಂಕಲ್ಪ, ದೃಢ ವಿಶ್ವಾಸ ಹೊಂದಿದ ಚೇತನ, ಸಾಂಸ್ಕೃತಿಕವಾಗಿ ಸಾಹಿತ್ಯಕವಾಗಿ ಸಾರ್ವಜನಿಕ ಕ್ಷೇತ್ರದಲ್ಲಿ ತಮ್ಮ ಹೆಜ್ಜೆ ಗುರುತನ್ನು ಮೂಡಿಸಿದ ಶ್ರೀಯುತರು ನಿಟ್ಟೂರು ಶ್ರೀನಿವಾಸರಾಯರೆಂದು ಪ್ರಸಿದ್ಧರು. ಒಂದು ಊರು ಕೆಲವರಿಗೆ ಹೆಸರು ತಂದುಕೊಡುತ್ತದೆ. ಇನ್ನೂ ಕೆಲವ್ಯಕ್ತಿಗಳಿಂದ ಊರಿಗೆ ಹೆಸರು ಬರುತ್ತದೆ. ಶ್ರೀನಿವಾಸರಾಯರಿಂದ ನಿಟ್ಟೂರಿಗೆ ಹೆಸರು. ಶ್ರೀನಿವಾಸರಾಯರದ್ದು ಬಹುದೊಡ್ಡ ವ್ಯಕ್ತಿತ್ವ. 'ನ ಭೂತೋ ನ ಭವಿಷ್ಯತಿ' ಎನ್ನುವಂತೆ ಶ್ರೀನಿವಾಸರಾಯರು ಗುಣಾತ್ಮಕವಾದ ಸಾಧನೆಯನ್ನು ಮಾಡಿ ಸಾಂಸ್ಕೃತಿಕ ವಲಯದಲ್ಲಿ ಚಿರಸ್ಮರಣೀಯವಾದ ಸಿದ್ಧಿಯನ್ನು ಗಳಿಸಿಕೊಂಡವರು. ಸ್ವಾತಂತ್ರ್ಯ ಪೂರ್ವದ ಸ್ವಾತಂತ್ರ್ಯ ನಂತರದ ಬದುಕನ್ನು ಕಂಡವರು. ಕಳೆದೊಂದು ಶತಮಾನದ ಜೀವಂತ ಸಾಕ್ಷಿಯಾಗಿ ನಮ್ಮೊಡನಿರುವ ಮಹಾನ್ ಚೇತನ. ಇವರಿಗೆ ಇದೀಗ ನೂರು ವರ್ಷ.

---

* ೮೪೫, ಶ್ರೀ ಗುರುಪ್ರಸಾದ, ೪ನೇ ಮುಖ್ಯರಸ್ತೆ
ವಿಜಯನಗರ, ಬೆಂಗಳೂರು - ೫೬೦೦೪೦

ಸಾಹಿತ್ಯಕ ಸಾಂಸ್ಕೃತಿಕ ವಲಯದಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುತ್ತ ಬಂದಿರುವ ಶ್ರೀಯುತರು ಆ ಕಾಲಕ್ಕಾಗಲೇ ಸತ್ಯ ಶೋಧನ ಪುಸ್ತಕ ಪ್ರಕಾಶನವನ್ನು ಪ್ರಾರಂಭಿಸಿ ಕನ್ನಡದ ಶ್ರೇಷ್ಠ ಕೃತಿಗಳನ್ನು ಹೊರತಂದಿರುವ ಕೀರ್ತಿಗೆ ಭಾಜನರಾದರು. ದಿ. ಎಂ.ಆರ್. ಶ್ರೀನಿವಾಸಮೂರ್ತಿಗಳ ಪ್ರೀತಿಯ ಶಿಷ್ಯರಾಗಿದ್ದ ಶ್ರೀಯುತರು ೧೯೪೪ರಲ್ಲಿ 'ರಂಗಣ್ಣನ ಕನಸುಗಳು' ಪುಸ್ತಕವನ್ನು ಪ್ರಕಟಿಸಿ ಗುರುಕಾಣಿಕೆಯನ್ನು ಸಲ್ಲಿಸಿ ಗುರುಋಣವನ್ನು ತೀರಿಸಿ ಕೊಂಡಿದ್ದಾರೆ.

ಅನುಭವಿ-ಅನುಭಾವಿ ಎಲ್ಲವೂ ಆಗಿರುವ ಶ್ರೀನಿವಾಸರಾಯರ ಗೆಳೆತನವಿದ್ದುದು ಎ.ಆರ್. ಕೃಷ್ಣಶಾಸ್ತ್ರಿ, ವೆಂಕಣ್ಣಯ್ಯ, ಡಿವಿಜಿಯವರಂಥ ಮಹಾನ್ ವ್ಯಕ್ತಿಗಳ ಜೊತೆ ಯಲ್ಲಿ. ಡಿವಿಜಿಯವರ ಜೊತೆಯಲ್ಲಿ ಆಪ್ತವಾಗಿ ವ್ಯವಹರಿಸುತ್ತಿದ್ದ ಶ್ರೀನಿವಾಸರಾಯರು ಅವರು ಹುಟ್ಟುಹಾಕಿದ್ದ ಗೋಖಲೆ ಸಾರ್ವಜನಿಕ ಸಂಸ್ಥೆಯ ಕಾರ್ಯದರ್ಶಿಯಾಗಿ ಈಗಲೂ ಸಕ್ರಿಯವಾಗಿ ಪಾಲ್ಗೊಳ್ಳುತ್ತಿದ್ದಾರೆ.

ಸರಳ ವ್ಯಕ್ತಿತ್ವ, ಸಜ್ಜನಿಕೆ, ಪ್ರಾಮಾಣಿಕ ಬದುಕು ತಮ್ಮ ನಡೆನುಡಿಗಳಿಂದ ಮನೆ ಮಾತಾಗಿರುವ ಶ್ರೀನಿವಾಸರಾಯರು ಈಗಲೂ ಗೋಖಲೆ ಸಾರ್ವಜನಿಕ ಸಂಸ್ಥೆಯ ಕಾರ್ಯಕಲಾಪಗಳಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುತ್ತಿರುವುದನ್ನು ನೋಡಬಹುದು.

"ಭಾಷಣಕಾರರಲ್ಲಿ ಕೆಲವರಿಗೆ ಹೃದಯ ನೋಡುವಂತೆ ಮಾಡುವ, ಬುದ್ಧಿ ಕೆಣಕುವಂತೆ ಮಾಡುವ, ಕಾರ್ಯಕ್ಕೆ ದೂಡುವ ದಿವ್ಯಶಕ್ತಿ ಇರುತ್ತದೆ" ಎಂದು ಪಂಜೆ ಮಂಗೇಶರಾವ್ ಅವರು ಭಾಷಣಕಾರರನ್ನು ಕುರಿತು ಒಂದು ಕಡೆ ಹೇಳಿದ್ದಾರೆ. ಅಂತಹದ್ದೊಂದು ಶಕ್ತಿ ನಿಟ್ಟೂರು ಶ್ರೀನಿವಾಸರಾಯರ ಮಾತಿನಲ್ಲಿರುವುದನ್ನು ಕಾಣಬಹುದು. ಅವರು ರಾಜ್ಯಪಾಲರಾಗಿ ಪ್ರಮಾಣವಚನ ಸ್ವೀಕರಿಸಿದ ಸಂದರ್ಭದಲ್ಲಿ ಕನ್ನಡಭಾಷೆಯನ್ನು ಕುರಿತು, ಕನ್ನಡ ಸಾಹಿತ್ಯವನ್ನು ಕುರಿತು ಕನ್ನಡ ಜನತೆಯನ್ನು ಕುರಿತು ಪ್ರಪ್ರಥಮವಾಗಿ ಕನ್ನಡಭಾಷೆಯಲ್ಲಿ ಮಾಡಿದ ಭಾಷಣದಿಂದ ಇದು ಮನವರಿಕೆಯಾಗುತ್ತದೆ. ಬಾಪೂಜಿಯ ದಿವ್ಯ ಜೀವನದ ಪೂರ್ಣ ಹಿನ್ನಲೆಯನ್ನು ಅರಿತಿದ್ದ ನಿಟ್ಟೂರು ಶ್ರೀನಿವಾಸರಾಯರು ಗಾಂಧೀಜಿಯವರು ಬೆಂಗಳೂರಿಗೆ ಬಂದಾಗಲೆಲ್ಲ ಅವರ ಒಡನಾಟದಲ್ಲಿರುತ್ತಿದ್ದರು. ವಿಜಿಲೆನ್ಸ್ ಕಮಿಶನರ್ ಆಗಿ, ಮುಖ್ಯ ನ್ಯಾಯಾಧೀಶರಾಗಿ, ರಾಜ್ಯಪಾಲರಾಗಿ ಸರ್ಕಾರದ ಉನ್ನತ ಹುದ್ದೆಯನ್ನು ಅಲಂಕರಿಸಿ ವಿವಿಧ ಕ್ಷೇತ್ರಗಳ ಅನುಭವ ಹೊಂದಿರುವ ಶ್ರೀಯುತರದ್ದು ಸರಳ ವ್ಯಕ್ತಿತ್ವ. ನಿಗರ್ವಿಯಾದ ಅವರು ವೈಭವೋಪೇತವಾದ ಬದುಕನ್ನು ಅಂಗೀಕರಿಸಿದವರಲ್ಲ.

ಒಮ್ಮೆ ನಮ್ಮದೊಂದು ಪುಸ್ತಕ ಬಿಡುಗಡೆ ಕಾರ್ಯಕ್ರಮಕ್ಕೆ ಉದ್ಘಾಟನೆಗೆ ಶ್ರೀಯುತರನ್ನು ಕರೆಸಿದ್ದೆವು. ಕಾರ್ಯಕ್ರಮ ಮುಗಿಸುವ ಹೊತ್ತಿಗೆ ಒಂಭತ್ತು ಗಂಟೆ. ಅವರನ್ನು ಮನೆಗೆ ಮುಟ್ಟಿಸಿ ಬರಬೇಕು. ಯಜಮಾನರೇ ಕಾರು ತೆಗೆದುಕೊಡು ಹೊರಟರು. ಬೀದಿ ದೀಪವಿಲ್ಲದ ರಿಂಗ್ ರೋಡ್ ಸರ್ಕಲಿನಲ್ಲಿ ಕಾರು ಚಲಿಸುತ್ತಿದ್ದಂತೆ ಕಾರಿನ ಮುಂಭಾಗದ ಚಕ್ರ ಹಳ್ಳವೊಂದರಲ್ಲಿ ಬಿತ್ತು. ಒಬ್ಬರಿಂದ ಎತ್ತಲು ಸಾಧ್ಯವಿಲ್ಲ. ಹಳ್ಳದಲ್ಲಿ ಬಿದ್ದ ಕಾರನ್ನು ಎತ್ತುವವರು ಯಾರು ಎಂಬ ಚಿಂತೆ ನಿಟ್ಟೂರುರನ್ನು ಕಾಡಿದಂತೆ ಕಾಣಲಿಲ್ಲ. ಅವರ ಗಮನವೆಲ್ಲ ಇದ್ದದ್ದು ನಮ್ಮ ಯಜಮಾನರ ಮೇಲೆ. ಕಾರನ್ನೇನೋ ಕೆಲವು ಜನರು ಬಂದು ಮೇಲೆತ್ತಿಟ್ಟರು, ಅದು ಬೇರೆ ಮಾತು. ಆದರೆ ನಿಟ್ಟೂರರ ಆತಂಕ ಕಡಿಮೆಯಾಗಲಿಲ್ಲ. ನಿಮಗೇನು ಪೆಟ್ಟಾಗಲಿಲ್ಲವೇ? ನೀವು ಹೇಗಿದ್ದೀರಿ ಎಂದು ಅವರು ಪದೇ ಪದೇ ಪ್ರಶ್ನಿಸಿದ್ದರಂತೆ. ಮನೆ ತಲುಪಿದ ಮೇಲೆ ನನಗೂ ಫೋನ್ ಮಾಡಿ ವಿಷಯ ತಿಳಿಸಿ 'ಗಾಬರಿಯಾಗುವುದು ಬೇಡ' ಎಂದಿದ್ದರು. ಇದು ಅವರ ಸೌಜನ್ಯ ಮತ್ತು ಮತ್ತೊಬ್ಬರ ಕಷ್ಟಕ್ಕೆ ಸ್ಪಂದಿಸುವ ರೀತಿ. ಎಲ್ಲೇ ಕಾರ್ಯಕ್ರಮ ನಡೆಯಲಿ ಕರೆದವರ ಹಿಂದೆ ಮುನ್ನುಗ್ಗುವ ಮನಸ್ಸು. ಕಾರ್ಯಕ್ರಮಕ್ಕೆ ಹತ್ತು ನಿಮಿಷ ಇದೆ ಎನ್ನುವಾಗಲೇ ಹಾಜರು. ಇದು ಅವರು ಬಿಟ್ಟು ಕೊಡದ ಶಿಸ್ತು. ಬಂಧುಬಳಗ ಹಿತೈಷಿಗಳ ಮನೆಯಲ್ಲಿ ಎಲ್ಲಿ ಏನೇ ಸಮಾರಂಭ ನಡೆಯಲಿ ಆಹ್ವಾನವನ್ನು ಅಲಕ್ಷಿಸದೆ ನೇರವಾಗಿ ಬಂದು ಆತಿಥ್ಯವನ್ನು ಸ್ವೀಕರಿಸಿ ಕರೆದವರಿಗೆ ಧನ್ಯತೆಯನ್ನುಂಟು ಮಾಡುತ್ತಾರೆ. 'ಸಾವಿರಕ್ಕೊಬ್ಬ ಸರದಾರ' ಎನ್ನುವಂತೆ ಇವರೊಬ್ಬ ಅಪರೂಪದ ಅಪೂರ್ವ ವ್ಯಕ್ತಿ.



# ನಿಟ್ಟೂರು ನಾನು ಕಂಡಂತೆ

. . . . . . . . . . . . . . . . . . . . . . . . . ✍ *ಇಂದಿರಾ ಹೆಗಡೆ**

ನೂರು ವರುಷಗಳ ಕಾಲವನ್ನು ನಾಲ್ಕುತಲೆಮಾರು ಎಂದು ಇತಿಹಾಸಕಾರರು ಅಭಿಪ್ರಾಯಪಡುತ್ತಾರೆ. ಒಬ್ಬನೇ ವ್ಯಕ್ತಿ ನೂರು ವರುಷಗಳ ಕಾಲ ಬದುಕಿದನೆಂದರೆ ಆತ ನಾಲ್ಕು ತಲೆಮಾರುಗಳ ಕಾಲ ಬದುಕಿದನೆಂದಾಯಿತು. ಹಾಗೆ ಬದುಕ ಬೇಕಾದರೆ ಆ ಮನುಷ್ಯ ಜೀವನದಲ್ಲಿ ಎದುರಾಗುವ ಎಲ್ಲ ಏರಿಳಿತಗಳಿಗೂ ಸಮಚಿತ್ತನಾಗಿ, ಮನಸ್ಸನ್ನು ವಿಚಲಿತಗೊಳಿ ಸದೆ ಇರುವವನಾಗುತ್ತಾನೆ. ದೇವರ ಅಸ್ತಿತ್ವದ ಬಗ್ಗೆ ನಿರ್ಲಿಪ್ತತೆ ಯನ್ನು ತೋರಿಸುತ್ತಲೇ ದೇವರ ಬಗ್ಗೆ ನನಗೆ ನಂಬಿಕೆಯಿಲ್ಲ ಎನ್ನುವ ಎ.ಎನ್. ಮೂರ್ತಿರಾಯರು ೧೦೦ ದಾಟಿದ ಆಯುಷ್ಯದ ಗುಟ್ಟು ಅವರ ಸ್ಥಿತಪ್ರಜ್ಞತೆ. ಅವರನ್ನು ಅನು ಸರಿಸುತ್ತಾ ತಾವೂ ನೂರು ಮೀರಿ ಕಿರಿಯರತ್ತ ಮುಗುಳ್ನಗು ತ್ತಿರುವ ನಿಟ್ಟೂರು ಶ್ರೀನಿವಾಸರಾಯರ ಆಯುಷ್ಯದ ಗುಟ್ಟೂ ಕೂಡಾ ಬದುಕನ್ನು ಅವರು ಸ್ವೀಕರಿಸಿದ ಪರಿಯಲ್ಲಿ ಅಡಕವಾಗಿರಬೇಕು. ಈಗಲೂ ಅವರ ಆರೋಗ್ಯ ಕಿರಿಯರಿಗೆ ಸವಾಲೆಸೆಯುವಂತೆ ಇದೆ. ಅವರಿಗಾದ ವಯಸ್ಸನ್ನು ಅವರ ದೇಹ ಪ್ರತಿನಿಧಿಸುತ್ತದೆಯಾದರೂ ಅವರ ಚಟುವಟಿಕೆಗಳಿಗೆ ಅದರಿಂದ ತೊಡಕುಂಟಾಗಲಿಲ್ಲ. ನೆರಿಗೆ ಬಿದ್ದ ಅವರ ಮುಖಕ್ಕೆ ಮುಗುಳು ನಗುವಿನ ಸಿಂಚನ ಹೊಸಚೈತನ್ಯವನ್ನು ನೀಡುತ್ತಿದೆ.

ಯಾವುದೇ ಸಮಾರಂಭಗಳಲ್ಲಿ ತಪ್ಪದೇ ಭಾಗವಹಿಸುತ್ತಿದ್ದ ನಿಟ್ಟೂರರನ್ನು ನಾನು ಗಮನಿಸಿದ್ದು ಸುಮಾರು ಹದಿನೈದು

---

* ೮೨೬, ೫ನೇ ಮುಖ್ಯರಸ್ತೆ, ವಿಜಯನಗರ, ಬೆಂಗಳೂರು - ೫೬೦೦೪೦

ವರ್ಷಗಳ ಹಿಂದೆ. ಸರಳ ಉಡುಪಿನ, ಸರಳ ಮಾತಿನ, ಹಿರಿಯ ಸರ್ವೋಚ್ಚ ನ್ಯಾಯಾಲಯದ ನ್ಯಾಯಾಧೀಶರಾಗಿ ಇದ್ದವರು ಎಂದು ನನಗೆ ಗೊತ್ತಾದಾಗ ಅವರ ಸರಳತೆಗೆ ಬೆರಗಾಗಿದ್ದೆ. ಮೊದಲ ಪರಿಚಯದಲ್ಲಿಯೇ ಆತ್ಮೀಯವಾಗಿ ಮಾತನಾಡಿದ್ದರು. ಎಲ್ಲರೊಂದಿಗೂ ಆತ್ಮೀಯವಾಗಿ ಮಾತನಾಡುವುದು ಅವರ ಸ್ವಭಾವವಾಗಿತ್ತು.

ಒಂದು ಸಮಾರಂಭದಲ್ಲಿ ಅವರ ಮಗಳನ್ನು ಕರೆದು ನನ್ನನ್ನು ಅವಳಿಗೂ ಪರಿಚಯ ಮಾಡಿಕೊಟ್ಟರು. ಅವರ ವಯಸ್ಸಿನ ಪ್ರಭಾವದಿಂದ ಅವರು ನಮ್ಮನ್ನು ಮರೆತಿರಬಹುದು ಎಂದುಕೊಂಡು ಮೊದಮೊದಲಿಗೆ ನನ್ನ ಪರಿಚಯ ಹೇಳಲು ಅವರನ್ನು ನಾನು ಒತ್ತಾಯಿಸುತ್ತಿದ್ದೆ. ನಿಟ್ಟೂರರು ಅಷ್ಟೇ ಲವಲವಿಕೆಯಿಂದ ನನ್ನ ಹೆಸರು ಹೇಳುತ್ತಿದ್ದರು. ಮುಂದೆ ಈ ತುಂಟತನವನ್ನು ಕೈ ಬಿಟ್ಟೆ. ಹೌದು ನಿಟ್ಟೂರರು ಹಿರಿ-ಕಿರಿಯರೊಡನೆ ಬೇಧವಿಲ್ಲದೆ ಬೆರೆಯಬಲ್ಲವರು.

ನಿಟ್ಟೂರರ ಆತ್ಮೀಯತೆಯಿಂದ ನಾನು ತುಂಬಾ ಪ್ರಭಾವಿತಳಾಗಿದ್ದೆ. ನಿಟ್ಟೂರರು ತಮ್ಮ ಇಳಿವಯಸ್ಸಿನಲ್ಲಿಯೂ ತಮ್ಮನ್ನು ಆಮಂತ್ರಿಸಲಾದ ಕಾರ್ಯಕ್ರಮವನ್ನು ತಪ್ಪಿಸಿಕೊಳ್ಳುತ್ತಿರಲಿಲ್ಲ. ಅವರು ಅತಿಥಿಯಾಗಿ ಆಗಲೀ, ಸಾಮಾನ್ಯ ಪ್ರೇಕ್ಷಕರಂತೆ ಆಗಲೀ, ಯಾವುದೇ ಸಮಾರಂಭವನ್ನೂ ತಪ್ಪಿಸಿಕೊಳ್ಳದಂತೆ ಭಾಗವಹಿಸುವುದು ಅವರ ದೊಡ್ಡ ಗುಣವಾಗಿತ್ತು. ಈ ಕ್ರಮ ಸಾಹಿತ್ಯ ಸಾಂಸ್ಕೃತಿಕ ಸಮಾರಂಭಗಳಿಗೆ ಮಾತ್ರ ಮೀಸಲಾಗಿರಲಿಲ್ಲ. ಮದುವೆ ಮುಂತಾದ ಕಾರ್ಯಕ್ರಮಗಳಿಗೂ ತಪ್ಪದೆ ಹಾಜರಾಗಿ ವಧೂವರರನ್ನು ಆಶೀರ್ವದಿಸಿ ಹೋಗುತ್ತಿದ್ದರು. ನನ್ನ ಮಗಳ ಮದುವೆಗೆ ಬಂದ ನಿಟ್ಟೂರರಿಗೆ ಕಲ್ಯಾಣ ಮಂಟಪದ ಮಹಡಿ ಹತ್ತಲು ವಯಸ್ಸಿನ ಪ್ರಭಾವದಿಂದ ಸಾಧ್ಯವಾಗಲಿಲ್ಲ, ಕೆಳಗಡೆ ಭೋಜನಶಾಲೆಯಲ್ಲಿ ಕುಳಿತು ನನಗೆ ಸುದ್ದಿ ಮುಟ್ಟಿಸಿದರು. ವಧೂವರರನ್ನು ಅವರ ಬಳಿ ಕರೆದುಕೊಂಡು ಹೋಗಿ ಅವರ ಆಶೀರ್ವಾದವನ್ನು ಪಡೆದೆವು.

ಸಮಾರಂಭಗಳಿಗೆ ಹೋಗುವಾಗ ಅವರಿಗೆ ಒಬ್ಬರೇ ಹೋಗಲು ಕಷ್ಟವಾಗುತ್ತಿತ್ತು. ದೇಹ ದಣಿದಿದ್ದರೂ ಅವರ ಜೀವನೋತ್ಸಾಹಕ್ಕೆ ದಣಿವು ಬಂದಿಲ್ಲ; ಅವರ ಕ್ರಿಯಾಶೀಲತೆ ಬತ್ತಿಲ್ಲ. ನೂರು ವರ್ಷಗಳ ಕಾಲ ಸಂತೃಪ್ತ ಜೀವನವನ್ನು ನಡೆಸಿದ ನಿಟ್ಟೂರುರವರು ಇವತ್ತಿಗೂ ವೇದಿಕೆಯ ಮೇಲೆ ನಿರರ್ಗಳವಾಗಿ ಮಾತನಾಡಬಲ್ಲರು. ಆದುದರಿಂದಲೇ ಇವತ್ತಿಗೂ ಜನರು ಅವರನ್ನು ಸಭೆ ಸಮಾರಂಭಗಳಿಗೆ ಆದರಪೂರ್ವಕವಾಗಿ ಕರೆಯುತ್ತಾರೆ.

ನಿಟ್ಟೂರರು ಇನ್ನೂ ಹಲವು ವರ್ಷಗಳ ಕಾಲ ಆರೋಗ್ಯವಂತರಾಗಿ ಬಾಳಲಿ. ಸಭೆ ಸಮಾರಂಭಗಳಲ್ಲಿ ಭಾಗವಹಿಸುತ್ತಿರಲಿ, ಇವರ ಆದರ್ಶಜೀವನ ನಮಗೆಲ್ಲ ದಾರಿ ದೀಪವಾಗಿರಲಿ. 

# ಸಾಂಸ್ಕೃತಿಕ ಜಲಾಶಯ

....................... ✍ *ಡಾ|| ಪಿ.ವಿ. ನಾರಾಯಣ**




ನಿಟ್ಟೂರು ಶ್ರೀನಿವಾಸರಾಯರ ಬಗ್ಗೆ ನಾನು ಬರೆಯಬಹುದಾದ್ದೆಂದರೆ ಅವರನ್ನು ಕುರಿತು ನನ್ನ ನೆನಪುಗಳನ್ನು ಮಾತ್ರ. ಅವರಿಗೂ ನನಗೂ ನಲವತ್ತು ವರ್ಷಗಳ ಅಂತರ. ಅಂದರೆ ನಾನು ಅವರ ಸಮಕಾಲೀನನಲ್ಲ. ಅವರನ್ನು ಕಂಡಿರುವುದು ದೂರದಿಂದ, ಹಾಗಾಗಿ ಅವರನ್ನು ಒಳಹೊಕ್ಕು ಚಿತ್ರಿಸಲು ನನಗೆ ಸಾಧ್ಯವಿಲ್ಲ. ಈಚೆಗೆ ಕೆಲವು ವರ್ಷಗಳಿಂದ ಅವರ ಪರಿಚಯ ಮತ್ತು ಅನೇಕ ಔಪಚಾರಿಕ ಸಂದರ್ಭಗಳಲ್ಲಿ ಭೇಟಿ ಮಾಡಿ ಮಾತಾಡಿರಬಹುದಾದರೂ, ವೈಯಕ್ತಿಕ ಎನ್ನಬಹುದಾದ ಸಂಬಂಧ ನಮ್ಮ ನಡುವೆ ಇಲ್ಲ. ಆದ್ದರಿಂದ ನಾನು ಎಲ್ಲೆಲ್ಲಿ ಹಾಗೂ ಯಾವ ಸಂದರ್ಭದಲ್ಲಿ ಅವರನ್ನು ಕಂಡೆ, ಆಗಿನ ನನ್ನ ಅನಿಸಿಕೆಯೇನು ಎಂಬುದರ ಆಧಾರದಿಂದಲೇ ಅವರ ಬಗ್ಗೆ ಕೆಲವು ಮಾತುಗಳನ್ನು ನಾನು ಬರೆಯಬಹುದು, ಅಷ್ಟೆ. ಹೀಗಾಗಿ ಅವರ ಬಗ್ಗೆ ನಾನು ಹೆಚ್ಚಿಗೆ ಬರೆಯಲು ಸಾಧ್ಯವಿಲ್ಲ ಮಾತ್ರವಲ್ಲ, ನನ್ನ ಬರವಣಿಗೆಗೆ ತುಂಬ ಮಿತಿಗಳಿರುವುದೂ ಸಹಜ. ಆದರೂ ನೂರು ವರ್ಷಗಳಾಗುವ ಸಂದರ್ಭದಲ್ಲಿ ಅವರಿಗೆ ನನ್ನ ಗೌರವವನ್ನರ್ಪಿಸುವ ಈ ಅವಕಾಶವನ್ನು ಉಪಯೋಗಿಸಿಕೊಳ್ಳಬೇಕೆಂಬ ನಿರ್ಧಾರದಿಂದ ಈ ಪ್ರಯತ್ನಕ್ಕೆ ಕೈ ಹಾಕಿದ್ದೇನೆ.

ಶ್ರೀ ನಿಟ್ಟೂರರು ನೂರು ಮುಟ್ಟಿದ್ದಾರೆ, ದಾಟಿ ದಾಪುಗಾಲಿಟ್ಟು ಮುಂದೆ ಸಾಗುತ್ತಾರೆ. ಒಂದು ವಿಧದಲ್ಲಿ ನಮ್ಮ

---

* 'ತಂಗಾಳಿ', ನಂ. ೩೦, ಆರ್ ಬಿ ಐ ಕಾಲೋನಿ, ಮೂರನೇ ಬ್ಲಾಕ್ ಜಯನಗರ (ಪೂರ್ವ), ಬೆಂಗಳೂರು - ೫೬೦ ೦೧೧

ಹಿರಿಯರ ಆದರ್ಶವನ್ನು ಅವರು ಯಶಸ್ವಿಯಾಗಿ ಸಾಧಿಸಿದ್ದಾರೆ. ಅದೇಂದರೆ, ನೂರು ವರ್ಷ ಬಾಳುವುದೇ. "ಜೀವೇಮ ಶರದಃ ಶತಂ" ಎಂಬ ಆದರ್ಶವಾಕ್ಕು ಅದು. ಅಲ್ಲದೆ, ಅದರೊಡನೆ ಇನ್ನೂ ಕೆಲವು ಮಾತುಗಳಿವೆ: ನೂರು ವರ್ಷ ಪಂಚೇಂದ್ರಿಯಗಳು ತಮ್ಮ ಪಟುತ್ವವನ್ನು ಕಳೆದುಕೊಳ್ಳದಿರಲಿ ಎಂಬುದು. ಶ್ರೀ ರಾಯರ ಇಂದ್ರಿಯಗಳು ಎಷ್ಟು ಚುರುಕಾಗಿವೆಯೆಂಬುದನ್ನು ಯಾರೂ ಬಿಡಿಸಿ ಹೇಳಬೇಕಾಗಿಲ್ಲ. ಅವರ ಕಣ್ಣು ತಟಕ್ಕನೆ ಕಂಡವರನ್ನು ಗುರುತಿಸಬಲ್ಲದು, ಕಿವಿ ಪಿಸುಮಾತನ್ನೂ ಕೇಳಿಸಿಕೊಳ್ಳಬಲ್ಲದು. ಮಾತು ತನ್ನ ಪಟುತ್ವದ ಜೊತೆಗೆ ನಿರರ್ಗಳತೆಯನ್ನೂ ತೋರಬಲ್ಲದು, ಅವರ ದೇಹ ಆ ವಯಸ್ಸಿನ ಭಾರವನ್ನು ಮೀರಿ ನೆಟ್ಟಗೆ ನಿಲ್ಲಬಲ್ಲದು. ಇದೆಲ್ಲಕ್ಕೂ ಕಾರಣ ಅವರ ಜೀವನ ರೀತಿಯೇ ಇರಬೇಕು. ಕೆಲವು ವೇಳೆ ಅತ್ಯಂತ ಋಜು ಜೀವನವನ್ನು ನಡೆಸಿದವರು ಬೇಗ ತೀರಿಕೊಳ್ಳಬಹುದು. ಇನ್ನು ಹಲವು ಸಂದರ್ಭಗಳಲ್ಲಿ ಸಾಕಷ್ಟು ಬೇಕಾಬಿಟ್ಟಿ ಎನ್ನ ಬಹುದಾದ ರೀತಿಯಲ್ಲಿ ಬದುಕಿದವರು ದೀರ್ಘಾಯುಷಿಗಳಾಗಿರಬಹುದು. ಹೀಗಾಗಿ ಆಯಸ್ಸಿಗೂ ಜೀವನವಿಧಾನಕ್ಕೂ ಬಹು ನೇರವಾದ ಸಂಬಂಧವಿದೆಯೆಂಬುದನ್ನು ನಾನು ಒಪ್ಪಲಾರೆ. ಆದರೆ ನಿಟ್ಟೂರರರ ಬಗ್ಗೆ ಹಿರಿಯರು ಹೇಳುವುದನ್ನು ಕೇಳಿ ಅವರ ದೀರ್ಘಾಯುಷ್ಯದ ಗುಟ್ಟು ಅವರು ಬದುಕಿದ ರೀತಿ ಎಂದು ಹೇಳಲು ಹಿಂಜರಿಯ ಬೇಕಾದ್ದಿಲ್ಲ ಎಂದು ನನ್ನ ಭಾವನೆ.

ಆಗ ಐವತ್ತರ ದಶಕದ ಉತ್ತರಪಾದ. ನಾನು ಆಗ ಹೈಸ್ಕೂಲು ತರಗತಿಗಳ ವಿದ್ಯಾರ್ಥಿ. ನಮ್ಮ ಮನೆ ಇದ್ದುದು ಗವೀಪುರ ಗುಟ್ಟಹಳ್ಳಿಯ ಸಮೀರಪುರದಲ್ಲಿ. ಬೇಗನೆ ಕೆಲಸಕ್ಕೆ ಹೋದ ನಮ್ಮ ತಂದೆಯವರಿಗೆ ಮಧ್ಯಾಹ್ನ ಊಟ ತೆಗೆದುಕೊಂಡು ಹೋಗುವ ಕೆಲಸ ಕೆಲವು ವೇಳೆ ನನ್ನ ಮೇಲೆ ಬೀಳುತ್ತಿತ್ತು. ನಮ್ಮ ತಂದೆಯವರು ಕೆಲಸದಲ್ಲಿದ್ದುದು ಸರ್ಕಾರಿ ಮುದ್ರಣಾಲಯದಲ್ಲಿ. ಹಾಗಾಗಿ ನಮ್ಮಮ್ಮ ಬಸ್ಸಿಗೆಂದು ದುಡ್ಡು ಕೊಟ್ಟರೂ ಬಹು ವೇಳೆ ನಾನು ನಡೆದೇ ಹೋಗುತ್ತಿದ್ದೆ, ಕಾಸು ಉಳಿಸಿಕೊಳ್ಳಲು. ಚಾಮರಾಜಪೇಟೆ ಮೂಲಕ ಹಾದು ಅವೆನ್ಯೂ ರಸ್ತೆಯಲ್ಲಿ ಸಾಗಿ ನೇರವಾಗಿ ಮುದ್ರಣಾಲಯಕ್ಕೆ ಹೋಗುವುದು ರೂಢಿ. ಸಮಯವಿದ್ದರೆ ಹೋಗುವಾಗಲೋ, ಇಲ್ಲ ವಾಪಸಾಗುವಾಗಲೋ ಕೋಟೆ ವೆಂಕಟರಮಣ ಸ್ವಾಮಿ ದೇವಸ್ಥಾನದ ಮುಂದಿನ ಟಿಪ್ಪೂಸುಲ್ತಾನನ ಕೋಟೆ ಪಕ್ಕದಲ್ಲಿನ ಜಾಗದಲ್ಲಿ (ಈಗ ಅಲ್ಲೆಲ್ಲ ಬಸ್ಸುಗಳು ನಿಲ್ಲುತ್ತವೆ) ನಡೆಯುತ್ತಿದ್ದ ಹಾವಾಡಿಗರ ಆಟವನ್ನು ನೋಡುತ್ತ ನಿಲ್ಲುತ್ತಿದ್ದೆ. ಅಲ್ಲಿನ ಆಟದ ಮಧ್ಯೆ ಹಾಗೂ ಓಡಾಟದ ಸಮಯದಲ್ಲಿ, ದೇವಸ್ಥಾನಕ್ಕೆ ಅಂಟಿಕೊಂಡಿದ್ದ(ರುವ) ಮಳಿಗೆಗಳ ಸಾಲಿನ ಕಡೆ ಗಮನ ಹೋಗುತ್ತಿದ್ದುದು ಸಹಜ ವಾಗಿಯೇ ಇತ್ತು. ಅಲ್ಲೊಂದು ಖಾದಿ ಮಳಿಗೆ ಇತ್ತು. ಅದರ ಪಕ್ಕದಲ್ಲಿಯೇ 'ಸತ್ಯ ಶೋಧನ ಪ್ರಕಟಣ ಮಂದಿರ' ಇತ್ತು. ಪ್ರೌಢಶಾಲೆಯಲ್ಲಿದ್ದಾಗಲೇ ನನಗೆ ಕನ್ನಡದ

ಬಗ್ಗೆ ಮತ್ತು ಸಾಹಿತ್ಯದ ಬಗ್ಗೆ ಸುಮಾರು ಆಸಕ್ತಿ ಇತ್ತು. ಹೀಗಾಗಿ ಕೈಲಿ ಕೊಳ್ಳಲು ದುಡ್ಡಿಲ್ಲದಿದ್ದರೂ ಒಂದೆರಡು ಸಲ ಪುಸ್ತಕದ ಅಂಗಡಿ ಹೊಕ್ಕು ಸುತ್ತಮುತ್ತ ಕಣ್ಣಾಡಿಸಿದ್ದೆ. ಒಂದೇ ಒಂದು ಸಲ ಎಂದು ಕಾಣುತ್ತದೆ, ನಾನು ಯಾವುದೋ ಒಂದು ಸಣ್ಣ ಪುಸ್ತಕವನ್ನು ಕೊಂಡ ನೆನಪು ತೀರ ಮಸುಕಾಗಿದೆ. ಆದರೆ ಅದು ಯಾವ ಪುಸ್ತಕ, ಬೆಲೆಯೇನು ಇತ್ಯಾದಿ ಯಾವ ವಿವರಗಳೂ ನನ್ನ ನೆನಪಿನಾಗರದಲ್ಲಿ ನೆಲೆಸಿಲ್ಲ. ಆಗ ನಾನು ಯಾವತ್ತಾದರೂ ನಿಟ್ಟೂರರನ್ನು ಅಂಗಡಿಯಲ್ಲಿ ಕಂಡದ್ದಂತೂ ಇಲ್ಲ ಎಂದು ಹೇಳಬಲ್ಲೆ. ಅಲ್ಲದೆ, ನನಗೆ ಆಗ ಅವರ ಹೆಸರೂ ತಿಳಿಯದು. ಅವರ ಮಹತ್ತಂತೂ ತಿಳಿಯದೇ ತಿಳಿಯದು. ಕಾಲಕ್ರಮೇಣ ಅವರ ಬಗ್ಗೆ ತಿಳಿಯತೊಡಗಿದ ಮೇಲೆ "ಈ ಪುಸ್ತಕ ಭಂಡಾರ ಇವರದಾ!" ಅಂದುಕೊಂಡಿದ್ದೇನೆ.

ಈ ಮಧ್ಯೆ ನನ್ನ ಓದಿಗಾಗಿ ಹಾಗೂ ಉದ್ಯೋಗಿಯಾಗಿ ಬೆಂಗಳೂರಿನ ಹೊರಗೆ ಇದ್ದುದರಿಂದ ಇಲ್ಲಿನ ಆಗುಹೋಗುಗಳ ಬಗ್ಗೆ ನನಗೆ ತಿಳಿಯುತ್ತಿರಲಿಲ್ಲ. ಆದರೆ ರಜೆಯಲ್ಲಿ ಬೆಂಗಳೂರಿಗೇ ಬರುತ್ತಿದ್ದೆ. ಬೇರೆ ಓರಗೆಯವರಲ್ಲಿ ಇರಬಹುದಾದಂತೆಯೇ, ನನ್ನ ಮನಸ್ಸಿನಲ್ಲಿಯೂ ಆಗ ಅನೇಕ ಕಲ್ಪನೆಗಳು ಆದರ್ಶಗಳು (ಈಗ ಭ್ರಮೆ ಎನ್ನಿಸುವ) ತುಂಬಿಕೊಂಡಿದ್ದವು. ಸಂಜೆಯ ಹೊತ್ತು ಸಾಹಿತ್ಯ ಪರಿಷತ್ತಿನಲ್ಲೋ, ಗೋಖಲೆ ವಿಚಾರ ಸಂಸ್ಥೆಯಲ್ಲೋ, ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ವರ್ಲ್ಡ್ ಕಲ್ಚರ್‌ನಲ್ಲೋ ನಿಟ್ಟೂರರನ್ನು ನಾನು ಸಾಕ್ಷಾತ್ತಾಗಿ ಕಂಡಿರಬೇಕು. ಮೊದಲ ಬಾರಿಗೆ ನಾನು ಅವರನ್ನು ಕಂಡದ್ದು ಯಾವಾಗ ಎಂಬುದು ನೆನಪಿಲ್ಲ. ಆದರೆ ಬರಬರುತ್ತ ಅವರ ಬಗ್ಗೆ ಅವರಿವರಾಡಿದ್ದನ್ನು ಕೇಳಿಸಿಕೊಂಡು, ಕಣ್ಣಾರೆ ಅವರ ನಡಾವಳಿಯನ್ನು ನೋಡಿ ನನ್ನ ಮನಸ್ಸಿನಲ್ಲಿ ಅವರ ಬಗೆಗಿನ ತಿಳಿವಳಿಕೆ ಹೆಚ್ಚು ಸ್ಫುಟವಾಗುತ್ತ ಹೋಯಿತು. ಅವರು ರಾಜ್ಯದ ಹೈಕೋರ್ಟಿನ ಮುಖ್ಯ ನ್ಯಾಯಾಧೀಶರಾಗಿದ್ದಾಗ ಅವರು ಕೆಲ ಕಾಲ ಹಂಗಾಮಿ ರಾಜ್ಯಪಾಲರಾಗಿ ಕಾರ್ಯನಿರ್ವಹಿಸಬೇಕಾದ ಸನ್ನಿವೇಶ ಒದಗಿ ಬಂತು. ಕಾಕತಾಳೀಯವೆಂಬಂತೆ, ಆ ಅವಧಿಯಲ್ಲೇ ಗಣರಾಜ್ಯ ದಿನವೂ ಬಂತು. ಸರ್ಕಾರದ ವತಿಯಿಂದ ನಡೆಯುವ ಉತ್ಸವದ ಸಂದರ್ಭದಲ್ಲಿ ಅವರು ರಾಜ್ಯಪಾಲರಾಗಿ ಮುಖ್ಯ ಭಾಷಣ ಮಾಡಬೇಕಾದಾಗ ಶ್ರೀ ನಿಟ್ಟೂರರು ಮೊತ್ತ ಮೊದಲು ಕನ್ನಡದಲ್ಲಿ ಭಾಷಣ ಮಾಡಿದ್ದು ನನ್ನಂಥ ಲಕ್ಷಾಂತರ ಕನ್ನಡಪ್ರೇಮಿಗಳ ಹೃದಯಗಳಲ್ಲಿ ರೋಮಾಂಚನವನ್ನುಂಟು ಮಾಡಿತ್ತು. ಅದರ ಪ್ರತೀಕವಾಗಿ ಕುವೆಂಪು ಅವರು ಹಂಡೆ ಹಾಲು ಕುಡಿದಂತಾಯಿತು ಎಂಬಂತಹ ಪದಸಮುಚ್ಚಯದೊಡನೆ ಒಂದು ಪದ್ಯವನ್ನೂ ಪ್ರಕಟಿಸಿದ್ದು ನನಗೆ ನೆನಪಿದೆ. ಜತೆಗೆ, ನನಗೆ ವೈಯಕ್ತಿಕವಾಗಿ ಆದ ಅಂದಿನ ಸಂತೋಷವೂ ನೆನಪಿದೆ. ಅಲ್ಲದೆ, ಆ ವಿಷಯ ನನ್ನ ಮನಸ್ಸಿನಲ್ಲಿ ಎಷ್ಟು ಸ್ಫುಟವಾಗಿದೆಯೆಂದರೆ, ಮಾರನೇ ದಿನ ಸಮಾರಂಭದ

ಚಿತ್ರ ಪತ್ರಿಕೆಗಳಲ್ಲಿ ಪ್ರಕಟವಾಗಿತ್ತು. ಅವರು ಕಚ್ಚೆ ಪಂಚೆ ಹಾಕಿ ಕೋಟು ಧರಿಸಿ, ಕತ್ತಿನ ಬಳಿ ಉತ್ತರೀಯ ಹಾಕಿಕೊಂಡು ಒಂದು ಟೋಪಿಯನ್ನು ಧರಿಸಿದ್ದ ಚಿತ್ರ ಈಗಲೂ ನನ್ನ ನೆನಪಿನಲ್ಲಿ ಸ್ಫುಟವಾಗಿದೆ.

ಮತ್ತೊಂದು ಸನ್ನಿವೇಶ ನನ್ನ ಮನಸ್ಸಿನಲ್ಲಿ ಅಚ್ಚಳಿಯದೆ ಉಳಿದಿದೆ. ಆಗ ನಮ್ಮ ಮನೆ ಗುಟ್ಟಹಳ್ಳಿಯಿಂದ ಜಯನಗರದ ಮೂಲೆಯೊಂದಕ್ಕೆ ವರ್ಗಾವಣೆಗೊಂಡಿತ್ತು. ನಾನು ರಜೆಯಲ್ಲಿ ಬೆಂಗಳೂರಿಗೆ ಬಂದಾಗ ಭೇಟಿಯಾಗುತ್ತಿದ್ದ ಗೆಳೆಯರೊಬ್ಬರ ಮನೆ ನೆಟ್ಟಕಲ್ಲಪ್ಪ ವೃತ್ತಕ್ಕೆ ಹತ್ತಿರವಿರುವ ಮಾಡೆಲ್‌ಹೌಸ್ ರಸ್ತೆಯಲ್ಲಿ. ಅಲ್ಲಿಂದ ವಾಪಸು ಮನೆಗೆ ನಡೆದೇ ಹೋಗುವುದು ವಾಡಿಕೆ. ಈಗ ಎಡಿಯೂರು ಟರ್ಮಿನಸ್ ವೃತ್ತದಲ್ಲೇ ನಿಟ್ಟೂರರ ಮನೆ. ದೊಡ್ಡ ಮನೆ, ಸುತ್ತಲೂ ವಿಶಾಲವಾದ ಕೌಂಪೌಂಡು, ಮೂಲೆಯ ಮನೆ. ಅವರು ಅಷ್ಟು ಹೊತ್ತಿಗೆ ನ್ಯಾಯಾಧೀಶ ಹುದ್ದೆಯಿಂದ ನಿವೃತ್ತರಾಗಿದ್ದರು. ಒಂದು ದಿನ ಸಂಜೆ ನಾಗಸಂದ್ರ ವೃತ್ತದ ಕಡೆಯಿಂದ ಸೌತ್ ಎಂಡ್ ವೃತ್ತದ ಕಡೆಗೆ ನಡೆದು ಹೋಗುತ್ತಿದ್ದೆ. ನಿಟ್ಟೂರರ ಮನೆಯ ಎದುರಿನ ಮೂಲೆಯಲ್ಲೇ ಬಸ್ ಸ್ಟಾಪ್. ಆ ಹೊತ್ತಿಗೆ ಜಯನಗರ ದೊಡ್ಡದಾಗಿ ಬೆಳೆದಿತ್ತು. ಸಾಕಷ್ಟು ದೂರದವರೆಗೆ ಬಸ್ಸುಗಳು ಹೋಗು ತ್ತಿದ್ದವು. ನಮ್ಮ ಮನೆ ಇದ್ದ ಕಡೆ ಬಸ್ ಹೋಗುತ್ತಿರಲಿಲ್ಲ. ಅಲ್ಲದೆ ನನ್ನ ಕೈಯಲ್ಲಾಗಲೀ ಜೇಬಲ್ಲಾಗಲೀ ದುಡ್ಡು ಇರುತ್ತಿದ್ದುದು ಕಡಿಮೆ. ಹೀಗಾಗಿ ನಡೆದೇ ಹೋಗುವುದು ನನ್ನ ರೂಢಿ. ನಡೆಯುವುದನ್ನು ವಿನೋಬಾ ಟ್ರಾನ್ಸ್‌ಪೋರ್ಟ್ ಎಂದು ನಾವು ಗೆಳೆಯರು ಕರೆದುಕೊಳ್ಳುತ್ತಿದ್ದೆವು. ಆವತ್ತು ನಾನು ನಡೆದೇ ಹೋಗುತ್ತಿದ್ದೆ. ನೋಡುತ್ತೇನೆ: ಬಸ್‌ಸ್ಟಾಪಲ್ಲಿದ್ದ ಬಸ್ಸೊಂದಕ್ಕೆ ನಿಟ್ಟೂರರು ಹತ್ತುತ್ತಿದ್ದಾರೆ! ಭಾರಿ ದೊಡ್ಡ ಮನುಷ್ಯರು ಅಂದುಕೊಂಡಿದ್ದ ನಿವೃತ್ತ ಮುಖ್ಯ ನ್ಯಾಯಮೂರ್ತಿಗಳೂ, ಒಮ್ಮೆ ಹಂಗಾಮಿ ಯಾಗಾದರೂ ಆಗಲಿ ರಾಜ್ಯಪಾಲರಾಗಿದ್ದವರೂ ಆದ ಇವರು ಬಸ್ಸಲ್ಲಿ ಪ್ರಯಾಣಿಸುತ್ತಾರೆ ಎಂಬುದು ದೊಡ್ಡ ವಿಸ್ಮಯವೆಂಬಂತೆ ಕಂಡಿತು. ಜೊತೆಗೆ ನನ್ನಂಥ ಸದಾ ಬರಿ ಜೋಬಿಗನಾದವನಿಗೆ ಎಷ್ಟೇ ದೂರವಿರಲಿ, ನಡೆದು ಹೋಗುವುದೇ ಸರಿ ಎಂಬ ಮನವರಿಕೆಯೂ ಉಂಟಾಯಿತು. ನಿಟ್ಟೂರರ ಇಂಥ ನಡವಳಿಕೆಗೆ ವ್ಯಾಖ್ಯಾನ ಬೇಕೇ?

ಮುಂದೆ, ನಿಟ್ಟೂರರನ್ನು ಗೋಖಲೆ ವಿಚಾರ ಸಂಸ್ಥೆಯ ಕಾರ್ಯಕ್ರಮಗಳಲ್ಲಿ ಹೆಚ್ಚಾಗಿ ಕಾಣುವ ಅವಕಾಶವಾಯಿತು. ಅವರು ದಿವಂಗತ ಎಂ.ವಿ. ಸೀತಾರಾಮಯ್ಯನರು ಸ್ಥಾಪಿಸಿದ ಬಿ.ಎಂ.ಶ್ರೀ. ಪ್ರತಿಷ್ಠಾನದ ಗೌರವಾಧ್ಯಕ್ಷರಾದ ಮೇಲೆ ಪರಿಚಯ ಹೆಚ್ಚಾಯಿತು. ಆ ಪ್ರತಿಷ್ಠಾನದ ಕಾರ್ಯಕಾರಿ ಸಮಿತಿಯಲ್ಲಿ ಎಂ.ವಿ.ಸೀ. ನನ್ನನ್ನೂ ಇರಿಸಿಕೊಂಡಿದ್ದರಿಂದ ಅದರ ಸಭೆಗಳಲ್ಲಿ ಹಾಗೂ ಕಾರ್ಯಕ್ರಮಗಳಲ್ಲಿ ನಿಟ್ಟೂರರನ್ನು ಕಾಣುವ ಮಾತನಾಡುವ

ಸಂದರ್ಭಗಳು ಆಗಾಗ್ಗೆ ಒದಗುತ್ತಿದ್ದವು. ಇಂಥ ಸಮಯದಲ್ಲಿ ನಮಸ್ಕಾರ ಹೇಳಿದಾಗ, ಕೆಲವು ವೇಳೆ ಅವರು "ಬೆಳಿಗ್ಗೆ ಆಕಾಶವಾಣಿಯಲ್ಲಿ ನಿಮ್ಮ ಚಿಂತನ ಕೇಳಿದೆ, ಸೊಗಸಾಗಿತ್ತು!" ಎಂದು ಹೇಳಿ ನನ್ನನ್ನು ಚಕಿತಗೊಳಿಸುತ್ತಿದ್ದರು. ಎಷ್ಟೋ ವೇಳೆ ನಾನೇ ಕೇಳಿರುತ್ತಿರಲಿಲ್ಲ; ಯಾಕೆಂದರೆ ಈಚೀಚೆಗೆ ರೇಡಿಯೋ ಕಡೆ ನಮ್ಮ ಗಮನವೇ ಇಲ್ಲವಲ್ಲ. ಅವರ ರೂಢಿ ಎಂಥದು ಎಂಬುದು ಮಾತ್ರವಲ್ಲ, ಅದನ್ನು ಚಿಕ್ಕವನಿಗೆ ಹೇಳಿ ಮುದಗೊಳಿಸುವ ಹೃದಯವಂತಿಕೆ ಮನಮುಟ್ಟುವಂಥದು. ಇಂಥ ಮಾತು ಕೇಳಿದ ಕಿರಿಯರು ನಾಚಿ ನೀರಾಗಬೇಕು, ಅಂಥ ಸೌಜನ್ಯ ಅವರದು.

ಕರೆದೆಡೆ ಅವರು ಬಿಗುಮಾನವಿಲ್ಲದೆ ಬರುತ್ತಾರೆ. ಸಭೆ ಸಮಾರಂಭಗಳಲ್ಲಿ ಮೊದಲ ಸಾಲಿನ ಶ್ರೋತೃಗಳಲ್ಲಿ ಅವರೂ ಒಬ್ಬರು. ಅವರ ದೀರ್ಘವೂ ವೈವಿಧ್ಯಮಯವೂ ಆದ ಅನುಭವದ ಕಾರಣದಿಂದ ಅವರನ್ನು ಕಾರ್ಯಕ್ರಮಗಳಿಗೆ ಆಮಂತ್ರಿಸುವವರ ಸಂಖ್ಯೆಯೂ ದೊಡ್ಡದು. ಸಮಯಕ್ಕೆ ಸರಿಯಾಗಿ ಹಾಜರಾಗುವ ಅವರ ಪ್ರವೃತ್ತಿ ನಮಗೆ ಮಾರ್ಗದರ್ಶಕವಾಗಬೇಕು. ಸಮಾರಂಭದಲ್ಲಿ ಅತಿಥಿಗಳಾಗಿಯೋ ಅಧ್ಯಕ್ಷರಾಗಿಯೋ ಪಾಲುಗೊಂಡರಂತೂ ಅವರ ಮಾತುಗಳು ಖಚಿತ ಮಾಹಿತಿಯ ಆಗರವಾಗಿರುತ್ತದೆ. ಅವರದು ವಿಮರ್ಶಾದೃಷ್ಟಿಗಿಂತ ಸಮೀಕ್ಷಾದೃಷ್ಟಿಯೆಂದರೆ ಒಪ್ಪುತ್ತದೆ. ಅವರಿವರ ಕೆಲಸ ಕಾರ್ಯಗಳನ್ನು ತೂಗಿ ನೋಡುವವರಲ್ಲ ಅವರು; ಬದಲು ಎಲ್ಲರ ಕೆಲಸಗಳನ್ನು ಸಹೃದಯತೆಯಿಂದ ಸ್ಮರಿಸಿಕೊಳ್ಳುವ ಸ್ವಭಾವ. ಅವರ ಮಾತುಗಳೆಂದರೆ ನೆನಪುಗಳ ರಾಶಿ. ಯಾವ ವಿಷಯದ ಬಗ್ಗೆ ತಾವು ಮಾತನಾಡಬೇಕೋ ಅದನ್ನು ಕುರಿತ ಸ್ವಂತ ಅನುಭವದ ಮೆಲುಕುಗಳು ಅವು. ಇಪ್ಪತ್ತನೇ ಶತಮಾನದ ಎಲ್ಲ ಆಗುಹೋಗುಗಳ ಸಾಕ್ಷಿಯಾಗಿರುವುದರಿಂದ ಯಾವ ಪುಸ್ತಕದಲ್ಲೂ ದೊರೆಯದ ಆತ್ಮೀಯ ಚಿತ್ರಣ ಅವರ ಮಾತುಗಳಲ್ಲಿ ಹರಿದುಬರುತ್ತದೆ. ಕಾರಂತರ ಬಗ್ಗೆ ಮಾತನಾಡಬೇಕಾದರೆ, ಅವರೊಡನೆ ತಮ್ಮ ಒಡನಾಟದ ಚಿತ್ರ ಕೊಡುತ್ತಾರೆ: ಕೆ.ವಿ. ಅಯ್ಯರ್ ಅವರ ಬಗ್ಗೆಯಾದರೆ ಅವರು ತಮ್ಮ ವ್ಯಾಯಾಮಶಾಲೆಯನ್ನು ನಡೆಸುತ್ತಿದ್ದ ರೀತಿ, ಆ ಕಾಲದ ಬೆಂಗಳೂರಿನ ಸ್ವರೂಪ ಇವುಗಳನ್ನು ಹೇಳುತ್ತಾರೆ: ವಿ.ಸೀ. ಅವರ ಬಗ್ಗೆಯಾದರೆ, ಸ್ವಂತ ಅನುಭವವನ್ನು ಆಧರಿಸಿದ ಅವರ ಸ್ವಭಾವವನ್ನು ಚಿತ್ರಿಸುತ್ತಾರೆ. ಸ್ವಾತಂತ್ರ್ಯ ಚಳವಳಿಯ ಬಗ್ಗೆಯಾದರೆ ಅಪ್ರತಿಕಾವಾರ್ತೆ ಎಂದು ಕುವೆಂಪು ಕರೆಯುತ್ತಾರಲ್ಲ, ಅಂಥ ಸೂಕ್ಷ್ಮವೂ ಸ್ವಂತವೂ ಆದ ವಿವರಗಳನ್ನು ನೀಡುತ್ತಾರೆ. ಎಂದರೆ ಅವರ ಮಾತು ಎಂದೂ ಕೇವಲ ವಸ್ತುನಿಷ್ಠ ಎಂದು ಕರೆಯಬಹುದಾದುದಲ್ಲ. ಎಲ್ಲದಕ್ಕೂ ವೈಯಕ್ತಿಕತೆಯ ಲೇಪ. ನಿಮ್ಮ ತಾತ ಅಥವಾ ಮುತ್ತಾತರ ಪ್ರಸ್ತಾಪ ಮಾಡಿದಿರೆನ್ನಿ, ಅವರು ನಿಟ್ಟೂರರು ಕೆಲಸ ಮಾಡಿದ ಪ್ರದೇಶದವರಾಗಿದ್ದರೆ, ಅವರಿಗೆ ಅವರ ಪರಿಚಯವಿರುತ್ತದೆ. ಎಳೆ ಎಳೆಯಾಗಿ ತಮ್ಮ ಪರಿಚಯ

ಅಥವಾ ಸ್ನೇಹವನ್ನು ಬಿಡಿಸಿಡುತ್ತಾರೆ. ಕಿತ್ತಿಳೆ ಹಣ್ಣು ಬಿಡಿಸಿ ಕುಸುಮೆಗಳನ್ನು ತೆರೆದಿಟ್ಟ ಹಾಗೆ. ಎಷ್ಟೋ ಸಲ ನಿಮಗೇ ತಿಳಿಯದ ನಿಮ್ಮ ಹಿರಿಯರ ವಿವರಗಳನ್ನು ಅವರು ನೀಡಬಲ್ಲರು. ತೇದಿಗಳ ಸಮೇತ ಕೊಡುವ ವಿವರಗಳೆಲ್ಲ ಕರಾರುವಾಕ್ಕು. ಅವರ ನೆನಪಿನ ಶಕ್ತಿ ಅಷ್ಟು ಅದ್ಭುತ, ಸಮೃದ್ಧ. ಆದರೆ ಅವರು ಬರೆಯುವ ಸ್ವಭಾವದವರಲ್ಲ. ಅವರೊಡನೆಯೇ ಅವರ ಸ್ಮೃತಿಯ ಭಾಂಡಾಗಾರ ಅಳಿಸಿಹೋಗಬಾರದೆಂಬ ಕಾರಣದಿಂದ ಅವರನ್ನು ಕೆದಕಿ ಮಾತುಗಳನ್ನು ಟೇಪು ಮಾಡಿಕೊಂಡು ಅದನ್ನು ಪುಸ್ತಕರೂಪದಲ್ಲಿ ಪ್ರಕಟಿಸುವ ಪ್ರಯತ್ನವನ್ನು ಕೆಲವರು ಮಾಡಿ ಮುಗಿಸುತ್ತಿದ್ದಾರೆ ಎಂಬುದು ಸಮಾಧಾನದ ಸಂಗತಿ. ಅದು ಹೊರ ಬಂದಾಗ ಇಪ್ಪತ್ತನೇ ಶತಮಾನದ ಬೆಂಗಳೂರು ಮತ್ತು ಕರ್ನಾಟಕದ ಬಹು ಅಮೂಲ್ಯ ನೆನಪುಗಳು ದಾಖಲಾಗಿರುತ್ತದೆಂಬುದರಲ್ಲಿ ಸಂಶಯವಿಲ್ಲ.

ಅವರು ಸ್ವತಃ ಬರೆಯುವ ಚಟದವರಲ್ಲವಾದ್ದರಿಂದ ಮತ್ತಷ್ಟು ಅಪೂರ್ವ ಮಾಹಿತಿ ಸಿಕ್ಕುವುದಿಲ್ಲ ಎಂಬುದು ನಿಜ. (ಅವರೂ ಅವರ ಶ್ರೀಮತಿಯವರೂ ಸೇರಿ ಗಾಂಧಿಯವರ ಆತ್ಮಕಥೆಯನ್ನು 'ಸತ್ಯ ಶೋಧನೆ' ಎಂಬ ಹೆಸರಿನಿಂದ ಅನುವಾದಿಸಿದ್ದರಂತೆ. ತಮ್ಮ ಪುಸ್ತಕ ಭಂಡಾರಕ್ಕೆ, ಪ್ರಕಾಶನಕ್ಕೆ ನಿಟ್ಟೂರರು ಕೊಟ್ಟ ಹೆಸರಿನ ಹಿನ್ನೆಲೆ ಇಲ್ಲಿದೆ. ಆ ಹೆಸರನ್ನು ಪುಸ್ತಕಕ್ಕೆ ನೀಡಿದವರು ಅವರೋ ಅವರ ಶ್ರೀಮತಿಯವರೋ?) ಆದರೆ ಇದರಿಂದಾಗಿಯೇ ಏನೋ ನಿಟ್ಟೂರರು ನಿರ್ಮತ್ಸರರು ಎನ್ನಬೇಕು. "ಕವಿಗೆ ಕವಿ ಮುಳಿವಂ" ಎಂಬ ಮಾತಿದೆಯಲ್ಲ, ಹಾಗೆ ಒಬ್ಬ ಬರಹಗಾರನಿಗೆ ಮತ್ತೊಬ್ಬ ಲೇಖಕನ ಬಗ್ಗೆ ಎಷ್ಟೇ ಗೌರವವಿದ್ದರೂ ತನಗಿಂತ ಅವನು ಉತ್ತಮ ಲೇಖಕನಲ್ಲ ಎಂಬಷ್ಟು ಮಟ್ಟಿಗಾದರೂ ಅವನ ಅಹಂಕಾರ ಜಾಗೃತವಾಗಿರುತ್ತದೆ. ಆದರೆ ನಿಟ್ಟೂರರ ಬರವಣಿಗೆ ಬಹುತೇಕ ತಮ್ಮ ತೀರ್ಪುಗಳಿಗೇ ಸೀಮಿತವಾದುದೆನ್ನಬೇಕು. ಹಾಗಾಗಿ ಅವರು ಎಲ್ಲ ಲೇಖಕರನ್ನೂ ಒಂದೇ ನಿಲವಿನಲ್ಲಿ ಕಾಣಬಲ್ಲರು. ಅಷ್ಟೇ ಅಲ್ಲ. ಅವರ ಬಗ್ಗೆ ಏಕತ್ರವಾದ ಮಮತೆಯನ್ನು ಸುರಿಸಬಲ್ಲರು. ಆಗಲೇ ಹೇಳಿದ ಹಾಗೆ ಅವರದ್ದು ಕೈಯಲ್ಲಿ ಚಾಟಿ ಹಿಡಿದ ವಿಮರ್ಶಕನ ಪ್ರಜ್ಞೆಯಲ್ಲ, ತೆರೆದ ಮನದ ಸಹೃದಯತೆಯದು. ಹಾಗಾಗಿ ಎಲ್ಲ ಲೇಖಕರ ಬಗ್ಗೆ ತುಸು ಹೆಚ್ಚೇ ಎನ್ನಬಹುದಾದ ಉದಾರಭಾವ.

ನಿಟ್ಟೂರರು ತಮ್ಮ ಪ್ರಕಾಶನವನ್ನು ಇಪ್ಪತ್ತು ಮೂವತ್ತು ವರ್ಷಗಳ ಕಾಲ ನಡೆಯಿಸಿ ಕೊಂಡು ಬಂದರಂತೆ. ಆ ಪ್ರಕಾಶನದ ಮೂಲಕ ಬೇರೆ ಯಾವ ಪುಸ್ತಕಗಳನ್ನು ಅವರು ಪ್ರಕಟಿಸಿದ್ದಾರೋ ನನಗೆ ತಿಳಿಯದು. ಆದರೆ ತಮ್ಮ ಮೊದಲ ಗೀತಗಳ ಪುಸ್ತಕವನ್ನು ನಿಟ್ಟೂರರು ಹೊರ ತಂದ ಬಗ್ಗೆ ವಿ ಸೀ ಅವರು ವಿಶದವಾಗಿ ಬರೆದಿದ್ದಾರೆ. ಪುಸ್ತಕ ಹೇಗೆ ಬರಬೇಕೆಂಬ ಹಂಬಲ ಲೇಖಕನದೋ ಅದೆಲ್ಲಕ್ಕೂ ತಮ್ಮ ಬೆಂಬಲವನ್ನು ನೀಡಿ ವೆಚ್ಚವನ್ನು

ಗಮನಿಸದೆ ಲೇಖಕನ ತೃಪ್ತಿಗೆ ಆದ್ಯತೆಯೀಯುವ ಉದಾರ ಪ್ರಕಾಶಕರು ನಿಟ್ಟೂರರು. ಇದು ವೃತ್ತಿ ಪ್ರಕಾಶಕರಿಗೆ ಸಾಧ್ಯವಾಗದ್ದು. ನಿಟ್ಟೂರರಾದರೆ ಪ್ರಕಾಶನವನ್ನು ನಡೆಸುವುದರ ಮೂಲಕ ಒಂದು ಆದರ್ಶವನ್ನು ಸಾಕಾರಗೊಳಿಸುವ ಪ್ರಯತ್ನ ಮಾಡುತ್ತಿದ್ದುದರಿಂದ ಇದು ಸಾಧ್ಯವಾಗಿರಬಹುದು. ಆದ್ದರಿಂದಲೇ ವಿ ಸೀ ಅವರು ತಮಗೆ ಬೇಕಾದ ಕಾಗದ, ಬೇಕಾದಂತೆ ರಕ್ಷಾಕವಚ, ಅದರ ಚಿತ್ರ ಇವುಗಳನ್ನೆಲ್ಲ ಸೇರಿಸಲು, ಲಂಡನ್‌ನಿಂದಲೇ ರಕ್ಷಾಪುಟವನ್ನು ಮುದ್ರಿಸಿ ತರಿಸಲು ಸಾಧ್ಯವಾದದ್ದು. ಇದರ ಎಲ್ಲ ವಿವರಗಳನ್ನೂ ವಿ.ಸೀ. ಅವರು ನಿಟ್ಟೂರರ ಬಗೆಗಿನ ತಮ್ಮ ವ್ಯಕ್ತಿಚಿತ್ರದಲ್ಲಿ ಮೂರು ಪುಟಗಳಲ್ಲಿ ನೀಡುತ್ತಾರೆ. ಹಾಗಾಗಿ ನಿಟ್ಟೂರರು ಒಬ್ಬ ಕಿಂಗ್ ಮೇಕರ್, ಲೇಖಕ ಪೋಷಕರು.

ಡಿವಿಜಿಯವರಾದ ಮೇಲೆ ನಿಟ್ಟೂರರು ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆಯನ್ನು ಬಹು ದೀರ್ಘ ಕಾಲ ತಮ್ಮ ಮಾರ್ಗದರ್ಶನದಿಂದ ನಡೆಸಿಕೊಂಡು ಬಂದವರು. ಅಲ್ಲಿ ನಡೆಯುವ ಎಲ್ಲ ಸಭೆ ಸಮಾರಂಭಗಳಲ್ಲೂ ಪಾಲ್ಗೊಂಡು ಅಚ್ಚುಕಟ್ಟಾಗಿ ನಡೆಯಲು ಕಾರಣಕರ್ತರಾದವರು. ಡಿವಿಜಿ ಶತಮಾನೋತ್ಸವ, ಡಿವಿಜಿ ಪುಸ್ತಕ ಶ್ರೇಣಿಯ ಪ್ರಕಟಣೆ, ಸಂಸ್ಥೆಯ ಗ್ರಂಥಭಂಡಾರದ ಪೋಷಣೆ-ಇವುಗಳನ್ನೆಲ್ಲ ಸಮರ್ಥವಾಗಿ ನಿಭಾಯಿಸಿದವರು. ಹಾಗೆಯೇ ಅವರು ಎಂವಿಸೀ ಅವರ ಸೃಷ್ಟಿಯಾದ ಬಿ ಎಂ ಶ್ರೀ ಪ್ರತಿಷ್ಠಾನಕ್ಕೆ ಅದರ ಆರಂಭಕಾಲದಿಂದಲೂ ಮಾರ್ಗದರ್ಶನ ಮಾಡುತ್ತಿರುವವರು. ಆ ಸಂಸ್ಥೆಗೆ ಬೆಂಗಳೂರು ಮಹಾನಗರ ಪಾಲಿಕೆಯು ಒಂದು ನಿವೇಶನವನ್ನು ಮಂಜೂರು ಮಾಡಿದ್ದರೂ ಅದು ಪ್ರತಿಷ್ಠಾನದ ಕೈ ಸೇರಿರಲಿಲ್ಲ. ಅದಕ್ಕೆ ಸರ್ಕಾರದ ಕೆಂಪು ಪಟ್ಟಿಯೇ ಕಾರಣ. ಎಂ ವಿ ಸೀ ಇರುವವರೆಗೆ ಪ್ರತಿಷ್ಠಾನ ಅವರ ಮನೆಯಲ್ಲೇ ತನ್ನ ಕಾರ್ಯ ನಿರ್ವಹಿಸುತ್ತಿತ್ತು. ಆದರೆ ಅವರ ತರುವಾಯ ಮನೆ ಮಾರಾಟವಾಗಿ ಕೆಲಕಾಲ ಅದು ತನ್ನ ಕಚೇರಿಯನ್ನು ಮಾಸ್ತಿ ಅವರ ಮನೆಯ ಹಿಂದಿನ ಗ್ಯಾರೇಜಿನಲ್ಲಿ ನಡೆಸಿ, ಆ ಬಳಿಕ ಗೋಖಲೆ ಸಂಸ್ಥೆಯ ಒಂದೆರಡು ಕೊಠಡಿಗಳಲ್ಲೇ ಕಾಲ ಕಳೆಯಬೇಕಾದ ಪರಿಸ್ಥಿತಿ ಬಂತು. ಎಷ್ಟು ದಿನ ತಾನೇ ಈ ವ್ಯವಸ್ಥೆ ಸಾಧ್ಯ? ತನ್ನದೇ ಆದ ಕಟ್ಟಡವನ್ನು ಆದಷ್ಟೂ ಬೇಗ ಕಟ್ಟಿಕೊಳ್ಳಬೇಕಾದ ಜರೂರು ಅದಕ್ಕಿತ್ತು. ಆದರೆ ನಿವೇಶನವೇ ಕೈ ಹತ್ತಿಲ್ಲ. ಎಷ್ಟೋ ಬಾರಿ ಪ್ರತಿಷ್ಠಾನದ ಪದಾಧಿಕಾರಿಗಳು ಸರ್ಕಾರದ ಹಿರಿಯ ಅಧಿಕಾರಿಗಳನ್ನು ಭೇಟಿಯಾಗಿದ್ದರೂ ಪ್ರಯೋಜನವಾಗಿರಲಿಲ್ಲ. ಈ ಬಗ್ಗೆ ಪತ್ರಿಕಾ ಗೋಷ್ಠಿಯಲ್ಲಿ ವಿವರಿಸಿ ಈ ವಿಷಯವನ್ನು ಸಾರ್ವಜನಿಕರ ಹಾಗೂ ಸರ್ಕಾರದ ಗಮನಕ್ಕೆ ತರಲು ಯೋಚಿಸಲಾಯ್ತು. ಆ ಗೋಷ್ಠಿಯಲ್ಲಿ ನಿಟ್ಟೂರರು ತಮ್ಮ ಜಾಯಮಾನಕ್ಕೆ ಒಗ್ಗದ ನಿಷ್ಠೂರ ಮಾತುಗಳನ್ನು ಬಳಸಿದರು. ಅದೇನೂ ಮಹಾ ಒರಟು ಮಾತುಗಳಲ್ಲ; ಅವರ ಸೌಮ್ಯಸ್ವಭಾವಕ್ಕೆ ಹೋಲಿಸಿದರೆ ಸ್ವಲ್ಪ ಗಟ್ಟಿ, ಅಷ್ಟೆ. ವೀರಪ್ಪ ಮೊಯ್ಲಿ ಆಗ ಮುಖ್ಯಮಂತ್ರಿ. 'ಮೃದೂನಿ ಕುಸುಮಾದಪಿ' ಅನ್ನುವ ಹಾಗೆ ಇರುವ

ನಿಟ್ಟೂರರು ಹೀಗೆ ಆಡಬೇಕಾದರೆ ಸರ್ಕಾರದ ಲೋಪ ಎಂಥದೆಂಬುದು ಮುಖ್ಯಮಂತ್ರಿಯವರಿಗೆ ಮನದಟ್ಟಾಗಿರಬೇಕು. ಹಾಗಾಗಿ ಈ ಬಗ್ಗೆ ಆದಷ್ಟು ಬೇಗ ಕಾರ್ಯಶೀಲರಾಗುವಂತೆ ಅವರು ಅಧಿಕಾರಿಗಳಿಗೆ ನೇರವಾಗಿ ಆದೇಶಿಸಿದರು. ಕೆಲಸ ಇದ್ದುದರಲ್ಲಿ ತ್ವರಿತವಾಗಿ ಆಯಿತು. ಈಗ ಪ್ರತಿಷ್ಠಾನ ಸ್ವಂತವಾದ ಒಂದು ಚಿಕ್ಕ ಕಟ್ಟಡದಲ್ಲಿರುವ ಹಾಗಾಗಿದೆ. ನಿಟ್ಟೂರರಂಥವರು ಹುಬ್ಬು ಗಂಟಿಕ್ಕಿಕೊಳ್ಳುವುದರಿಂದಲೂ ಕೆಲಸ ಆಗುತ್ತದೆ. ಆದರೆ ಹಾಗೆ ಮಾಡುವ ಮೊದಲು ಅವರು ಎಷ್ಟು ಕಾಲ ತಾಳ್ಮೆಯಿಂದ ಇದ್ದರೆಂಬುದೂ ಮುಖ್ಯ. ಅದಕ್ಕೇ ಅವರ ಗಟ್ಟಿ ಮಾತಿಗೆ ಬೆಲೆ.

ಇಂತಹ ವ್ಯಕ್ತಿ ಇಷ್ಟು ದೀರ್ಘ ಕಾಲ ಆರೋಗ್ಯವಾಗಿರುವುದರ ಗುಟ್ಟು ಏನು ಎಂದು ಎಲ್ಲರಿಗೂ ಆಶ್ಚರ್ಯವೇ. ಇದರ ಗುಟ್ಟೇನೆಂದು ಇಂಥ ದೀರ್ಘಾಯುಷಿಗಳನ್ನೇ ಕೇಳಿದರೆ ಒಬ್ಬೊಬ್ಬರು ಒಂದೊಂದು ಉತ್ತರ ಕೊಡಬಹುದು. ನಿಟ್ಟೂರರೂ ತಮ್ಮದೇ ಆದ ಉತ್ತರವನ್ನು ಹೊಂದಿರಬಹುದು. ಆದರೆ ನನಗನಿಸುತ್ತದೆ...ಇಂಥ ಎಲ್ಲರೂ, ಅವರು ಕಾರಂತರೇ ಆಗಲಿ, ಮೂರ್ತಿರಾಯರೇ ಆಗಲಿ, ಕುವೆಂಪು ಅವರೇ ಆಗಲಿ, ನಿಜಲಿಂಗಪ್ಪನವರೇ ಆಗಲಿ, ಸಿದ್ಧಗಂಗಾ ಸ್ವಾಮಿಗಳೇ ಆಗಲಿ-ಅವರ ವೈಯಕ್ತಿಕ ಬದುಕು ಶುಭ್ರ ಮಾರ್ಗದಲ್ಲಿ ನಡೆದದ್ದು ಮಾತ್ರವಲ್ಲದೆ, ಅವರ ಆಲೋಚನೆಗಳು ಸದಾ ಸ್ವಾರ್ಥದೂರವಾಗಿದ್ದು ಸಮಾಜಮುಖಿಯಾದದ್ದೇ ಆಗಿರುವುದು ಇದಕ್ಕೆ ಕಾರಣ. ಹಲವಾರು ಅಲ್ಪಾಯುಷಿಗಳಲ್ಲೂ ಈ ಗುಣಗಳಿರಬಹುದು. ಆದರೆ ಶತಮಾನ ವೀರರಿಗಂತೂ ಇದು ಇದ್ದೇ ಇದ್ದು, ಅವರ ಜೀವನಪ್ರೀತಿ ಅವರ ಬದುಕಿಗೆ ಒಂದು ಮೊನಚನ್ನು ನೀಡಿರುತ್ತದೆ ಎಂದು ನಾನು ಭಾವಿಸುತ್ತೇನೆ.



# ನೂರರ ನಿಟ್ಟೂರು

. . . . . . . . . . . . . . . . . . . . . . ✍ *ಎಂ.ಪಿ. ಈಶ್ವರಪ್ಪ**

ಕರ್ನಾಟಕದ ರಾಜ್ಯದ ಗಣ್ಯರಲ್ಲಿ ಇತ್ತೀಚಿನ ವರ್ಷಗಳಲ್ಲಿ ನೂರು ವರ್ಷಗಳು ತುಂಬಿ ಶತಾಯುಷಿಗಳಾದವರಲ್ಲಿ ಸರ್. ಎಂ. ವಿಶ್ವೇಶ್ವರಯ್ಯನವರನ್ನು ಬಿಟ್ಟರೆ ಶ್ರೀ ನಿಟ್ಟೂರು ಶ್ರೀನಿವಾಸರಾಯರೆ ಎರಡನೆಯವರು. ಶ್ರೀ ವಿಶ್ವೇಶ್ವರಯ್ಯನವರು ಇಂಜಿನೀಯರಿಂಗ್ ಮತ್ತು ಆಡಳಿತ ಕ್ಷೇತ್ರಗಳಲ್ಲಿ ಹೆಸರಾಂತ ಸೇವೆಯನ್ನು ಸಲ್ಲಿಸಿದರೆ, ಶ್ರೀ ನಿಟ್ಟೂರು ಶ್ರೀನಿವಾಸರಾಯರು ಕಾನೂನು, ನ್ಯಾಯಾಂಗ ಮತ್ತು ಸಾಹಿತ್ಯ ಕ್ಷೇತ್ರಗಳಲ್ಲಿ ಸೇವೆಯನ್ನು ಸಲ್ಲಿಸಿದ್ದಾರೆ. ಈ ಇಬ್ಬರಲ್ಲಿ ಕಾಣುವ ಸಾಮ್ಯ ವೇನೆಂದರೆ ಸರಳ ಜೀವನ, ಕಾರ್ಯಪ್ರವೃತ್ತಿ ಮತ್ತು ಉದಾತ್ತ ಧ್ಯೇಯಗಳು.

ವಕೀಲರಾಗಿ ನ್ಯಾಯಮೂರ್ತಿಗಳಾಗಿ ಮತ್ತು ಕೇಂದ್ರದ ಜಾಗೃತ ಆಯೋಗದ ಪ್ರಧಾನರಾಗಿ ಅವರು ಸಲ್ಲಿಸಿದ ಸೇವೆ ಪ್ರಶಂಸನೀಯವಾದದ್ದು. ಸ್ವಾತಂತ್ರ್ಯ ಪೂರ್ವದಲ್ಲಿ ಮಹಾತ್ಮ ಗಾಂಧೀಜಿಯವರ ಕರೆಯಿಂದ ಸ್ಫೂರ್ತಿಗೊಂಡು ಖಾದಿ ಚಳವಳಿ ಮುಂತಾದ ರಚನಾತ್ಮಕ ಕಾರ್ಯಕ್ರಮಗಳಲ್ಲಿ ಪಾಲ್ಗೊಂಡಿದ್ದರಲ್ಲದೆ ಸಾಹಿತ್ಯ ಕ್ಷೇತ್ರದಲ್ಲಿಯೂ ಕೂಡ ಅವರ ಸೇವೆ ಅಮೋಘವಾದದ್ದು.

ನನ್ನ ಮತ್ತು ಅವರ ಪರಿಚಯ ೧೯೫೨ನೇ ಇಸವಿಯಿಂದ ಆದದ್ದು. ಆಗ ತಾನೇ ಕಾನೂನು ಪದವಿಯನ್ನು ಪಡೆದು

---

* ನಂ. ೧೦೭, ೭ನೇ ಕ್ರಾಸ್, ಲೋಯರ್ ಪ್ಯಾಲೆಸ್ ಆರ್ಚರ್ಡ್ಸ್
ಬೆಂಗಳೂರು - ೫೬೦೦೦೩

ದಿವಂಗತ ಶ್ರೀ ವಿ.ಕೃಷ್ಣಮೂರ್ತಿಯವರ ಅಡ್ವೋಕೇಟ್ ಕಛೇರಿಯಲ್ಲಿ ನಾನು ವಕೀಲಿ ವೃತ್ತಿ ತರಬೇತಿ ಪಡೆಯುತ್ತಿದ್ದೆ, ಅಂದಿನ ದಿನಗಳಲ್ಲಿ ಅಡ್ವೋಕೇಟ ಆಗಿ ಸನ್ನದನ್ನು ಪಡೆಯಲು ಮುಖ್ಯ ನ್ಯಾಯಾಧೀಶರ ಕೋರ್ಟಿನಲ್ಲಿ ಹಿರಿಯ ವಕೀಲರೊಬ್ಬರ ಹೆಸರನ್ನು ಸೂಚಿಸಿ ಇನ್ನೊಬ್ಬ ಹಿರಿಯ ವಕೀಲರು ಅನುಮೋದನೆ ಮಾಡಬೇಕಾಗಿತ್ತು. ನಾನು ವಕೀಲಿ ವೃತ್ತಿಗೆ ಸನ್ನದನ್ನು ಪಡೆಯಲು ಶ್ರೀ ವಿ. ಕೃಷ್ಣಮೂರ್ತಿಯವರು ನನ್ನ ಹೆಸರನ್ನು ಅನುಮೋದನೆಗೆ ಶ್ರೀ ನಿಟ್ಟೂರು ಶ್ರೀನಿವಾಸರಾಯರನ್ನು ಕೇಳಿಕೊಂಡಾಗ ಅವರು ಕೂಡಲೇ ಒಪ್ಪಿಕೊಂಡಿದ್ದು ಮಾತ್ರವಲ್ಲದೆ ಕಾಲಕ್ಕೆ ಸರಿಯಾಗಿ ಮುಖ್ಯ ನ್ಯಾಯಾಧೀಶರ ನ್ಯಾಯಾಲಯಕ್ಕೆ ಬಂದು ನನ್ನ ಹೆಸರನ್ನು ಅನುಮೋದಿಸಿದರು. ಅಂದಿನಿಂದ ನನಗೆ ಅವರ ನಿಕಟ ಸಂಬಂಧ ಆರಂಭವಾಯಿತು.

ಬಹುಶಃ ಉನ್ನತ ಹುದ್ದೆಗಳನ್ನು ಹೊಂದಿದ ಯಾವ ವ್ಯಕ್ತಿಯು ಕೂಡಾ ಇವರಷ್ಟು ಆಡಂಬರ ರಹಿತವಾದವರನ್ನು ನಾನು ಕಂಡಿಲ್ಲ. ದೊಡ್ಡವರು ಮತ್ತು ಚಿಕ್ಕವರೆಂಬ ಭೇದ ಭಾವನೆ ಇಲ್ಲದೆ ಆತ್ಮೀಯತೆಯನ್ನು ತೋರುವ ಬೇರೊಬ್ಬ ವ್ಯಕ್ತಿಯನ್ನು ಕಾಣುವುದು ಅಪರೂಪ.

ಈ ಇಳಿವಯಸ್ಸಿನಲ್ಲಿಯೂ ಕೂಡಾ ಅವರಷ್ಟು ಲವಲವಿಕೆ ಇರುವವರು ಬೇರೊಬ್ಬರಿಲ್ಲ. ಯಾವ ಸಮಾರಂಭಕ್ಕೆ ಅವರನ್ನು ಆಹ್ವಾನಿಸಿದರೂ ಕೂಡಾ ತಪ್ಪದೇ ಕಾಲಕ್ಕೆ ಸರಿಯಾಗಿ ಅವರು ಬರುವಂತಹವರು. ಅವರಿಗೆ ಸಮಾರಂಭಕ್ಕೆ ಹೋಗಲು ಕಾರೇ ಬೇಕು ಅಂತ ಏನಿಲ್ಲ. ಸ್ಕೂಟರ್‌ನ ಹಿಂಭಾಗದಲ್ಲಿ ಕೂಡ ಕೂತು ಹೋಗುತ್ತಾರೆ.

ಅವರ ಆಡಂಬರ ರಹಿತ ಸರಳ ಜೀವನಕ್ಕೆ ಇದು ಒಂದು ಉದಾಹರಣೆ. ಸರಳತೆ ಮತ್ತು ಸಜ್ಜನಿಕೆಗೆ ಇನ್ನೊಂದು ಹೆಸರು ಶ್ರೀ ನಿಟ್ಟೂರು ಶ್ರೀನಿವಾಸರಾಯರು. ಇಳಿವಯಸ್ಸಿನಲ್ಲಿಯೂ ಕೂಡಾ ಚಟುವಟಿಕೆಗಳ ಚಿಲುಮೆಯಾಗಿರುವ ಯುವಕರನ್ನು ನಾಚಿಸುವಂತೆ ಇರುವ ಅವರ ನಿರಂತರ ಕಾರ್ಯವೈಖರಿ ಮತ್ತು ಅವರ ಆದರ್ಶಗಳು ಇಂದಿನ ಜನಾಂಗಕ್ಕೆ ಸ್ಫೂರ್ತಿಯಾಗಿರಲಿ ಎಂದು ಆಶಿಸೋಣ.

ಕರ್ನಾಟಕದ ಭೀಷ್ಮರಾದ ನಿಟ್ಟೂರು ಶ್ರೀನಿವಾಸರಾಯರು ಬಹುಕಾಲ ನಮ್ಮ ಮಧ್ಯೆ ಉಪಯುಕ್ತ ಜೀವನ ನಡೆಸಿ ದೇಶಕ್ಕೆ ಮಾರ್ಗದರ್ಶಕರಾಗಿರಲಿ ಎಂದು ಭಗವಂತನನ್ನು ಪ್ರಾರ್ಥಿಸೋಣ.

❑

# ನಿಟ್ಟೂರು ನನ್ನ ದೃಷ್ಟಿಯಲ್ಲಿ

. . . . . . . . . . . . . . . . . . . ✍ *ಹೆಚ್.ಜಿ. ಸೋಮಶೇಖರ್ ರಾವ್**

ಆ ದಿನ ಬೆಳಗ್ಗೆ ಸುಮಾರು ೭ ಗಂಟೆ ಇರಬಹುದು; ಅದು ೧೯೭೬-೭೭ರಲ್ಲಿ -ನಾನು ಮೈಸೂರಿನ ಸರಸ್ವತಿಪುರದ ಕೆನರಾ ಬ್ಯಾಂಕ್ ಶಾಖೆಯಲ್ಲಿ ಮ್ಯಾನೇಜರನಾಗಿದ್ದೆ. ಬೆಳಗ್ಗೆ ೮ ಗಂಟೆಗೆ ಬ್ಯಾಂಕಿಗೆ ಹೋಗಬೇಕು. ನಾನು ಆಗ ದಿನನಿತ್ಯ ವಾಯುವಿಹಾರಕ್ಕೆಂದು ಬೆಳಗ್ಗೆ ೫-೩೦ ಗಂಟೆಗೆ ಹೊರಟು, ಮಾನಸ ಗಂಗೋತ್ರಿಯ ಆವರಣದಲ್ಲಿ ಓಡಾಡಿ, ಕುಕ್ಕರಹಳ್ಳಿ ಕೆರೆಯ ಬದುವಿನ ಮೇಲೆ ಓಡಿ, ಸರಸ್ವತಿಪುರದ ಕಾಮಾಕ್ಷಿ ಆಸ್ಪತ್ರೆ ರಸ್ತೆಯಲ್ಲಿದ್ದ ನನ್ನ ಮನೆಗೆ ವಾಪಸ್ಸಾಗುತ್ತಿದ್ದೆ. ಆಗ ಬ್ಯಾಂಕಿನಲ್ಲಿ ಶೇಕಡ ೪ರಂತೆ ಬಡ್ಡಿಯ ಮೇಲೆ ಕೆಳಸ್ತರದ ಬಡವರಿಗೆ ಸಾಲ ಕೊಡಬೇಕೆಂಬ ಆದೇಶ ಬಂದಿತ್ತು; ಜೊತೆ ಜೊತೆಗೆ 'ಸಾಲುಮೇಳ'ವೂ ನಡೆಯುತ್ತಿದ್ದು, ಅನೇಕ ಸಂಘ ಸಂಸ್ಥೆಗಳವರು (ಕೆಲವು ಆಗತಾನೇ ಹುಟ್ಟಿಕೊಂಡಿದ್ದವು!) ಮ್ಯಾನೇಜರನಾದ ನನ್ನ ಮೇಲೆ ಅನೇಕ ರೀತಿ ಒತ್ತಡ ತರುತ್ತಿದ್ದರು. ದಿನ ಬೆಳಗಾದರೆ 'ಸಾಲದವರ ಗೋಳು' ಅಂತ ಬ್ಯಾಂಕಿನ ಮ್ಯಾನೇಜರುಗಳು ಗೊಣಗುತ್ತಿದ್ದ ಕಾಲವದು. ನನಗೂ ಒತ್ತಡವಿತ್ತೇ ವಿನಃ ನಾನು ಎಂದೂ ಗೊಣಗಿದವನಲ್ಲ.... ಆ ದಿನಗಳವು.

ನನ್ನ ವಾಕಿಂಗ್ ಮುಗಿಸಿ ಮನೆಗೆ ವಾಪಸ್ಸಾದೆ. ನನ್ನ ಮನೆಯ ವರಾಂಡದಲ್ಲಿ ಒಬ್ಬ ವ್ಯಕ್ತಿ ಪೇಪರ್ ಓದುತ್ತಾ ಸೋಫಾದಲ್ಲಿ ಕುಳಿತಿದ್ದರು. ಪೇಪರಿನಿಂದಾಗಿ ಮುಖ

---

* ನಂ. ೮೦, ಶ್ರೀನಿವಾಸ, ೧೧ನೇ ಮುಖ್ಯರಸ್ತೆ, ಶ್ರೀನಗರ ಬನಶಂಕರಿ ಮೊದಲ ಹಂತ, ಬೆಂಗಳೂರು - ೫೬೦೦೫೦

ಮುಚ್ಚಿದ್ದು, ವ್ಯಕ್ತಿ ಯಾರೆಂದು ಗೊತ್ತಾಗುವ ಹಾಗಿರಲಿಲ್ಲ. ಸಾಲ ಕೇಳುವ ಅಥವಾ ಸಾಲ ಕೊಡಿಸುವ ಯಾವುದೇ ಜನಮುಖಂಡರೋ ಯಾರೋ ಇರಬೇಕೆಂದುಕೊಂಡವನು ನಾನು ಬೇಸರಗೊಂಡೆ.

'ಯಾರು....' ನನ್ನ ಧ್ವನಿ ಗಡುಸಾಗಿತ್ತು.

'ನಾನಪ್ಪ.....ನಿಟ್ಟೂರು ಶ್ರೀನಿವಾಸರಾವ್...' ಅನ್ನುತ್ತ ಮುಖ ಮುಚ್ಚಿದ್ದ ಪೇಪರ್ ತೆಗೆದರು. ನನ್ನ ಮೈ ಬೆವರಿತು; ಕೈ ಕಾಲು ಕುಸಿಯಿತು. ಎಂಥ ತಪ್ಪು ಮಾಡಿದೆನಪ್ಪಾ, ಎಂದು ತಡಮಾಡದೆ ಅವರ ಕಾಲು ಹಿಡಿದು ಸಾಷ್ಟಾಂಗ ನಮಸ್ಕಾರ ಮಾಡಿದೆ; ಹೆಂಡತಿ ಲಲಿತಾಳನ್ನೂ ಕೂಗಿ ಅವಳಿಗೂ ನಮಸ್ಕರಿಸಲು ಹೇಳಿದೆ. ನಮ್ಮ ಬಾಯಿ ಒಣಗಿತ್ತು.

'ತಪ್ಪಾಯಿತು ಗೊತ್ತಾಗಲಿಲ್ಲ. ಕ್ಷಮಿಸಿ' ಅಂದೆ.

'ಪರವಾಗಿಲ್ಲಪ್ಪ...ನಾನು ಈ ಊರಿಗೆ ಒಂದು ಲಗ್ನಕ್ಕೆ ಬಂದಿದ್ದೆ...ಹಾಗೇ ನಡೆದು ಬರುವಾಗ ನಿಮ್ಮ ಮನೆಯ ಮುಂದಿನ ಬೋರ್ಡ್ ನೋಡಿದೆ; ಹೆಚ್. ಜಿ. ಸೋಮಶೇಖರ ರಾವ್, ಕೆನರಾ ಬ್ಯಾಂಕ್ ಅಂದಿತ್ತು. ನಿಮ್ಮ ಹೆಸರು ಜ್ಞಾಪಕವಿದೆ; ಕೆನರಾ ಬ್ಯಾಂಕ್‌ನಲ್ಲಿ ಕೆಲಸ ಮಾಡುವುದು ಗೊತ್ತಿದೆ, ಮೇಲೆ ಹೆಚ್.ಜಿ. ಅಂತ ಇದೆಯಲ್ಲ-ಹರಿಹರ ಗುಂಡೂರಾಯರು...ನನ್ನ ಸ್ನೇಹಿತರ ಮಗ...ನೋಡಿಕೊಂಡು ಹೋಗೋಣ ಅಂತ ಬಂದೆ...." ಎದ್ದು ನಿಂತರು.

ಬಿಳಿ ಕಚ್ಚೆಪಂಚೆ, ಬಿಳಿ ಜುಬ್ಬಾ; ಹೆಗಲ ಮೇಲೇರಿದ ವಸ್ತ್ರ....ಅತ್ಯಂತ ಒಬ್ಬ ಸಾಧಾರಣ ವ್ಯಕ್ತಿಯೆಂಬಂಥ ಮುಖಭಾವ...ಅಚ್ಚರಿ ಹುಟ್ಟಿಸುವಂಥದ್ದು.

'ಕಾಫಿ ಕುಡಿಯುತ್ತೀರಾ?'

'ಬೆಳಗ್ಗೆ ಎಲ್ಲಾ ಆಗಿದೆ....ಮದುವೆಗೆ ಬಂದಿದ್ದೇವೆ....ನಿಮ್ಮ ಮನೇಲಿ ಊಟ ಮಾಡಲು ಆಗೋಲ್ಲ....ಸ್ವಲ್ಪ ಕಾಫಿ ಕೊಟ್ಟುಬಿಡಮ್ಮ....ಸಾಕು' ಅಂದರು. ಕೊಂಚ ಕಾಫಿ ಕುಡಿದರು....ನಮ್ಮ ಮೈದಡವಿ ಆಶೀರ್ವಾದ ಮಾಡಿ ಹೊರಟರು....

ನಮ್ಮ ಅಪ್ಪ ದಿ. ಹರಹರ ಗುಂಡೂರಾವ್ ಅವರು ಚಿತ್ರದುರ್ಗದಲ್ಲಿ ವಕೀಲಿವೃತ್ತಿಯಲ್ಲಿದ್ದವರು. ಅವರು ಜೀವಂತರಾಗಿದ್ದಿದ್ದರೆ ಅವರಿಗೆ ಈಗ ೧೧೦ ವರ್ಷಗಳಾಗಿರುತ್ತಿತ್ತು. ಶ್ರೀ ನಿಟ್ಟೂರು ಶ್ರೀನಿವಾಸರಾಯರು ನಮ್ಮಪ್ಪನಿಗಿಂತ ೧೦ ವರ್ಷ ಕಿರಿಯರು. ರಾಯರು ವಕೀಲಿ ಪರೀಕ್ಷೆಗಳನ್ನು ಮುಗಿಸಿಕೊಂಡು ಎಲ್ಲಿ ಯಾವ ಊರಲ್ಲಿ ವಕೀಲಿ ವೃತ್ತಿ

ಪ್ರಾರಂಭಿಸಬೇಕೆಂದು ಯೋಚಿಸುತ್ತಿದ್ದಾಗ ಚಿತ್ರದುರ್ಗದಲ್ಲಿ ಏಕೆ ಆಗಬಾರದು ಎಂದು ಅಲ್ಲಿ ಬಂದು ನೆಲೆಸಿದ್ದು ಕೆಲಕಾಲ ಇದ್ದರು.

ನಮ್ಮ ಅಜ್ಜ(ದಿ) ಹೆಚ್.ಜೆ. ಕೃಷ್ಣರಾಯರು ದುರ್ಗದಲ್ಲಿ ಜಂಟಿ ಆಫೀಸು ನಡೆಸುತ್ತ ಒಳ್ಳೆಯ ವಕೀಲರೆಂಬ ಹೆಸರು ಪಡೆದಿದ್ದರು. ನಿಟ್ಟೂರರಿಗೆ ನಮ್ಮ ತಾತನವರಿಂದ ಪ್ರಾರಂಭಿಸಿ. ಈಗ ನನ್ನ ಮಕ್ಕಳವರೆಗೂ ಎಲ್ಲರ ಪರಿಚಯವಿದೆ. ಅಚ್ಚರಿ ಅಂದರೆ ಯಾವಾಗ ಭೇಟಿಯಾದರೂ ನನ್ನ ಅಣ್ಣಂದಿರ ಕುಟುಂಬದವರು ನನ್ನ ಕುಟುಂಬದವರೆಲ್ಲರ ಹೆಸರನ್ನು ತಪ್ಪದೆ ಹೇಳಿ ಎಲ್ಲರ ಯೋಗಕ್ಷೇಮ ವಿಚಾರಿಸುತ್ತಾರೆ. ಅವರ ಜ್ಞಾಪಕಶಕ್ತಿ ಅದ್ಭುತ. ಎಷ್ಟೇ ಹಳೆಯ ವಿಚಾರವಿರಲಿ ಎಲ್ಲ ತಪಶೀಲುಗಳನ್ನು ಹೇಳಬಲ್ಲರು.

ಅವರು ವಕೀಲರಾಗಿದ್ದು, ಮುಂದೆ ಕರ್ನಾಟಕದ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರಾದರು. ನಮ್ಮ ದೇಶದ ಮೊದಲ ವಿಜಿಲೆನ್ಸ್ ಕಮೀಶನರ್ ಆಗಿದ್ದರು. ಕೊಂಚಕಾಲ ಕರ್ನಾಟಕದ ರಾಜ್ಯಪಾಲರಾಗಿದ್ದರು. ಗಾಂಧಿ ಪ್ರತಿಷ್ಠಾನದ ಸಂಸ್ಥೆಯಲ್ಲಿ ದುಡಿಯುತ್ತಿದ್ದರು. ಸತ್ಯ ಶೋಧನ ಪುಸ್ತಕ ಭಂಡಾರ ನಡೆಸುತ್ತಿದ್ದರು. ಅನೇಕ ಸಂಘ ಸಂಸ್ಥೆಗಳ ಜೊತೆ ಸಂಬಂಧವಿರಿಸಿಕೊಂಡಿದ್ದವರು. ಈಗಲೂ - ೧೦೦ ವರ್ಷದ ಇಳಿವಯಸ್ಸಿನಲ್ಲೂ, ಗೋಖಲೆ ಸಂಸ್ಥೆಯ ಮುಖ್ಯಸ್ಥರಾಗಿ ಕಾರ್ಯ ನಡೆಸುತ್ತಿದ್ದಾರೆ....

ನಾನು ಅವರನ್ನು ಕೇಳಿಕೊಂಡಿದ್ದೆ. ಎಂ.ಎ. ಪಾಸಾಗಿದ್ದೆ, ಕೆಲಸವಿಲ್ಲ. ಯಾವುದಾದರೂ ಕೆಲಸಕ್ಕೆ ಶಿಫಾರಸ್ ಮಾಡಿ ಅಂತ ಕೇಳಿಕೊಂಡೆ....ಮರುದಿನವೇ ಪತ್ರ ಬಂತು. ಮುಖ್ಯ ನ್ಯಾಯಾಧೀಶರಾಗಿ-

"ನೀವು ನಿಮ್ಮ ಅಣ್ಣಂದಿರೆಲ್ಲಾ ನನಗೆ ಪರಿಚಿತರು, ತುಂಬ ಚುರುಕು ಬುದ್ಧಿಯವರು. ನಿಮಗೆ ಏನು ಸಹಾಯ ಮಾಡಲು ನನಗೆ ಇಷ್ಟ. ನನ್ನ ಹೆಸರನ್ನು ರೆಫರನ್ಸ್‌ನಲ್ಲಿ ಕಾಣಿಸಲು ನನ್ನ ಅಭ್ಯಂತರವಿಲ್ಲ... ಶುಭವಾಗಲಿ..."

ನನ್ನ ಮೊದಲನೇ ಪುಸ್ತಕ 'ಸೋಮಣ್ಣನ ಸ್ಟಾಕ್‌ನಿಂದ' ಅನಾವರಣದ ಕಾರ್ಯಕ್ರಮಕ್ಕೆ ಅವರು ಅಧ್ಯಕ್ಷತೆ ವಹಿಸಿದ್ದರು. ನಮ್ಮ ಕುಟುಂಬದವರನ್ನೆಲ್ಲಾ ನೆನಪುಮಾಡಿಕೊಂಡರು. ಹಾಗೆಯೇ ನನ್ನ ಎರಡನೇ ಪುಸ್ತಕ 'ಸೂರ್ಯಸ್ಮರಣೆ' ಪುಸ್ತಕದ ಅನಾವರಣಕ್ಕೆ ಬರಲು ಕೇಳಿಕೊಂಡಿದ್ದೆ. ಅವತ್ತು ಸೆಪ್ಟೆಂಬರ್ [illegible]ನೇ ತಾರೀಖು ೨೦೦೨ (ಭಾನುವಾರ). ಅಂದೇ ಶ್ರೀ ರಾಯರಿಗೆ ೧೦೦ ವರ್ಷ ತುಂಬಿದ ದಿನ ಮನೆಯಲ್ಲಿ ಹೋಮ, ಹವನ, ಪೂಜೆ ಏರ್ಪಡಿಸಿದರು. ಅವರ ಬಂಧು-ಬಳಗ ಎಲ್ಲಾ ಸೇರಿದ್ದರು. ನನಗೆ ಫೋನ್ ಮಾಡಿ

ವಿಷಯ ತಿಳಿಸಿದ್ದರು. 'ನಿಮ್ಮ ಹುಟ್ಟುಹಬ್ಬದ ದಿನ ನನ್ನ ಪುಸ್ತಕದ ಬಿಡುಗಡೆ ಆಗಲಿ..ದಯಮಾಡಿ ಬನ್ನಿ' ಅಂದೆ.... ಎಷ್ಟೇ ಕೆಲಸವಿದ್ದರೂ ಪುರಸೊತ್ತು ಮಾಡಿಕೊಂಡು ಬಂದು ನನ್ನ ಕಾರ್ಯಕ್ರಮದಲ್ಲಿ ಕುಳಿತು ನನ್ನನ್ನು ಆಶೀರ್ವದಿಸಿದರು....

ಇಂಥ ವಯಸ್ಸಿನಲ್ಲೂ ಎಂಥಾ ಜೀವನೋತ್ಸಾಹ....ಉಲ್ಲಾಸ...ಪ್ರೀತಿ....ವಿಶ್ವಾಸ, ಅಂಥವರ ಪಡೆ ಹೆಚ್ಚಾಗಲಿ.



# ನಮ್ಮ ಸಾಂಸ್ಕೃತಿಕ ಪ್ರತಿನಿಧಿ - ಶ್ರೀ ನಿಟ್ಟೂರು ಶ್ರೀನಿವಾಸರಾವ್

........................ ✍ ಕೊಂಡಜ್ಜಿ. ಕೆ. ವೆಂಕಟೇಶ್*

ಕನ್ನಡ ನಾಡಿನ ಹಿರಿಯರೂ, ಶತಾಯುಷಿಗಳೂ ಆದ ಶ್ರೀ ನಿಟ್ಟೂರು ಶಾಮಣ್ಣ ಶ್ರೀನಿವಾಸರಾವ್ ಅವರು ನಮ್ಮ ಕಾಲದ ಸಾಂಸ್ಕೃತಿಕ ಪ್ರತಿನಿಧಿ. ಅವರನ್ನು ಕೇವಲ ಕರ್ನಾಟಕಕ್ಕೆ ಸೀಮಿತಗೊಳಿಸದೇ ರಾಷ್ಟ್ರ ದೃಷ್ಟಿಯಲ್ಲಿ ನೋಡಿದರೆ ಅವರೊಬ್ಬ 'ರಾಷ್ಟ್ರ ರತ್ನ' ಎಂದರೆ ತಪ್ಪಾಗಲಾರದು. ಯಾಕೆಂದರೆ ಗಾಂಧೀಯುಗದಲ್ಲಿ ಗಾಂಧೀಜಿ, ಪಂಡಿತ ಜವಹರಲಾಲ ನೆಹರು, ಲಾಲಬಹದ್ದೂರ್ ಶಾಸ್ತ್ರಿ, ಪಟೇಲ್ ಮುಂತಾದ ಮಹನೀಯರ ಸಹವಾಸ, ೧೯೩೦, ೧೯೩೨ ಹಾಗೂ ೧೯೪೨ರ ಚಳವಳಿಗಳ ನಿಕಟ ಸಂಪರ್ಕ ಹೊಂದಿದ್ದ ಶ್ರೀ ನಿಟ್ಟೂರು ಶ್ರೀನಿವಾಸರಾವ್ ಅವರು ಆಯ್ದುಕೊಂಡಿದ್ದು ವಕೀಲಿ ವೃತ್ತಿ, ಅಲಂಕರಿಸಿದ್ದು ಮೈಸೂರು (ಕರ್ನಾಟಕ) ಶ್ರೇಷ್ಠ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರಾಗಿ.

ತುಮಕೂರು ಜಿಲ್ಲೆ ಗುಬ್ಬಿ ತಾಲ್ಲೂಕು ನಿಟ್ಟೂರಿನ ಶಾಮಣ್ಣನವರ ಮಗನಾಗಿ ಶ್ರೀನಿವಾಸರಾವ್ ಅವರು ದಿನಾಂಕ ೨೪-೮-೧೯೦೩ರಂದು ಬೆಂಗಳೂರಿನಲ್ಲಿ ಜನಿಸಿದರು. ತಾಯಿ ಸೀತಮ್ಮನವರು. ತಂದೆ ಎ. ವಿ. ಸ್ಕೂಲ್ ಮುಖ್ಯೋಪಾಧ್ಯಾಯರು. ಪ್ರಾಥಮಿಕ ಶಾಲಾ ಶಿಕ್ಷಣ ಚಳ್ಳಕೆರೆ-ಹೊಸದುರ್ಗದ ಸರ್ಕಾರಿ ಶಾಲೆಗಳಲ್ಲಿ ಹೈಸ್ಕೂಲು

---

* ೨೦೫, ೭ನೇ ಅಡ್ಡರಸ್ತೆ, ಒಂದನೇ 'ಎನ್' ಬ್ಲಾಕ್
ರಾಜಾಜಿನಗರ, ಬೆಂಗಳೂರು - ೫೬೦೦೧೦

ಶಿವಮೊಗ್ಗದಲ್ಲಿ ಮೈಸೂರು ವಿಶ್ವವಿದ್ಯಾಲಯದಿಂದ ಬಿ.ಎಸ್ಸಿ. ಪದವಿ. ಮದರಾಸ್ ವಿಶ್ವವಿದ್ಯಾಲಯದಿಂದ ಕಾನೂನು ಪದವಿ, ಬೆಂಗಳೂರಿನಲ್ಲಿ ವಕೀಲಿ ವೃತ್ತಿ ೧೯೨೭ರಲ್ಲಿ ಆರಂಭ. ೧೯೫೩ರಲ್ಲಿ ಮೈಸೂರಿನ ಅಡ್ವೋಕೇಟ್ ಜನರಲ್, ೧೯೫೫ರಲ್ಲಿ ಮೈಸೂರು ಹೈಕೋರ್ಟಿನ ನ್ಯಾಯಾಧೀಶರು, ೧೯೬೧ರಲ್ಲಿ ಹೈಕೋರ್ಟಿನ ಮುಖ್ಯ ನ್ಯಾಯಾಧೀಶರಾಗಿ, ೧೯೬೩ರಲ್ಲಿ ಕರ್ನಾಟಕದ (ಅಂದಿನ ಮೈಸೂರು ) ಹಂಗಾಮಿ ರಾಜ್ಯಪಾಲರು ನಂತರ ೧೯೬೪ರಲ್ಲಿ ಕೇಂದ್ರ ಜಾಗೃತ ದಳದ ಪ್ರಥಮ ಆಯುಕ್ತರು. ಹೀಗೆ ಅವರ ಜೀವನದ ಉನ್ನತಿಯನ್ನು ಪಟ್ಟಿ ಮಾಡುತ್ತಾ ಹೋಗಬಹುದು. ವೃತ್ತಿಯ ಈ ಸಾಲಿಗೇ ಅವರು ಅಖಂಡ ಭಾರತದ ಸ್ವತಂತ್ರದತ್ತಲೂ ಕನಸು ಕಂಡಿದ್ದರು. 'ನನಸೂ' ಅವರು ಕಂಡವರು. 'ಇಂಡಿಯನ್ ನ್ಯಾಷನಲ್ ಕಾಂಗ್ರೆಸ್'ನ ದೀರ್ಘ ಕಾಲದ ಸದಸ್ಯರು. ಸ್ವಾತಂತ್ರ್ಯ ಹೋರಾಟಗಾರರ ನಿಕಟ ಸಂಪರ್ಕ, ಜೊತೆಗೆ ಸಾಹಿತ್ಯದ ಒಲವು, ಸಾಹಿತ್ಯ, ಪ್ರೋತ್ಸಾಹಕರು. ಶುದ್ಧ ಖಾದಿಧಾರಿ.

ಕನ್ನಡದ 'ರೆನೈಸಾನ್ಸ್' ಕಾಲದಲ್ಲಿ ಕನ್ನಡವನ್ನು ಶ್ರೀಸಾಮಾನ್ಯನಿಗೆ ತಲುಪಿಸುವ ಜವಾಬ್ದಾರಿ ಹೊಣೆ ಹೊತ್ತವರು ಶ್ರೀ ನಿಟ್ಟೂರು ಶ್ರೀನಿವಾಸರಾವ್ ಅವರು. ೧೯೨೮ರಲ್ಲಿ 'ಸತ್ಯ ಶೋಧನಾ ಪ್ರಕಟಣಾಲಯ'ವನ್ನು ಸ್ಥಾಪಿಸುವುದರ ಮೂಲಕ ತಾವೇ ಸ್ವತಃ ತಮ್ಮ ಪತ್ನಿ ಶ್ರೀಮತಿ ಪದ್ಮಮ್ಮನವರೊಡನೆ ಮಹಾತ್ಮಾಗಾಂಧೀಜಿ ಅವರ ಆತ್ಮಚರಿತ್ರೆ ಹಾಗೂ ಭಗವದ್ಗೀತೆ ಮೇಲಿನ 'ಅನಾಸಕ್ತಿಯೋಗ'ವನ್ನು ಕನ್ನಡಕ್ಕೆ ಅನುವಾದಿಸಿ ಪ್ರಕಟಿಸಿದ್ದಾರೆ. ಜೊತೆಗೆ ಡಾ|| ಕೋಟ ಶಿವರಾಮ ಕಾರಂತ, ಡಾ|| ಕುಪ್ಪಳ್ಳಿ ವೆಂಕಟಪ್ಪ ಪುಟ್ಟಪ್ಪ, ಶ್ರೀ ವಿ. ಸೀತಾರಾಮಯ್ಯ, ಡಾ|| ಗೊರೂರು ಮೊದಲಾದ ಕನ್ನಡ ದಿಗ್ಗಜರ ಕೃತಿಗಳನ್ನು ಪ್ರಕಟಿಸಿದ್ದಾರೆ. ಇದು ಆ ಕಾಲದ ಒಂದು ಮಹತ್ ಸಾಧನೆ!

**ಶ್ರೀ ನಿಟ್ಟೂರು ಶ್ರೀನಿವಾಸರಾವ್ ಅವರ ಜೀವನ ಘಟನೆಗಳು**

೧. ೧೯೦೩ - ಶ್ರೀಮತಿ ಸೀತಮ್ಮ ಮತ್ತು ಶ್ರೀ ನಿಟ್ಟೂರು ಶಾಮಣ್ಣನವರ ಮಗನಾಗಿ ದಿನಾಂಕ ೨೪.೮.೧೯೦೩ ರಂದು ಬೆಂಗಳೂರಿನಲ್ಲಿ ಜನನ.

೨. ೧೯೨೪ - ಬಿ.ಎಸ್ಸಿ. ಪದವಿ

೩. ೧೯೨೭ - ಕಾನೂನು ಪದವಿ

೪. ೧೯೨೭ - ವಕೀಲಿ ವೃತ್ತಿ ಆರಂಭ

೫. ೧೯೨೮ - ಸತ್ಯ ಶೋಧನಾ ಪ್ರಕಟಣಾಲಯ ಸ್ಥಾಪನೆ

೬. ೧೯೫೩ - ಹಳೇ ಮೈಸೂರು ಸಂಸ್ಥಾನದ ಅಡ್ವೋಕೇಟ್ ಜನರಲ್ ಆಗಿ ನೇಮಕ

೭. ೧೯೫೫ - ಮೈಸೂರು ಹೈಕೋರ್ಟಿನ ನ್ಯಾಯಾಧೀಶರಾಗಿ ನೇಮಕ, ಏಕೀಕೃತ ಮೈಸೂರು ರಾಜ್ಯದಲ್ಲೂ ಹೈಕೋರ್ಟಿನ ನ್ಯಾಯಾಧೀಶರಾಗಿ ಮುಂದುವರಿಕೆ

೮. ೧೯೬೧ - ಹೈಕೋರ್ಟಿನ ಮುಖ್ಯ ನ್ಯಾಯಾಧೀಶರಾಗಿ ನೇಮಕ

೯. ೧೯೬೩ - ಕರ್ನಾಟಕ (ಅಂದಿನ ಮೈಸೂರು) ರಾಜ್ಯದ ಹಂಗಾಮಿ ರಾಜ್ಯಪಾಲರಾಗಿ ನೇಮಕ.

೧೦. ೧೯೬೪ - ಭಾರತ ಸರ್ಕಾರದ ವಿಜಿಲೆನ್ಸ್ ಕಮೀಶನರ್ ಆಗಿ ನೇಮಕ.

೧೧. ೧೯೯೬ - ದಕ್ಷಿಣ ಭಾರತ ಹಿಂದೀ ಪ್ರಚಾರ ಸಭಾದಿಂದ ಗೌರವ ಡಾಕ್ಟೋರೇಟ್ ಪದವಿ ಪ್ರಧಾನ

೧೨. ೧೯೯೭ - ಗುಬ್ಬಿಯಲ್ಲಿ ನಡೆದ ತುಮಕೂರು ಜಿಲ್ಲಾ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ.

೧೩. ೧೯೯೭ - ಕನ್ನಡ ರಾಜ್ಯೋತ್ಸವ ಪ್ರಶಸ್ತಿ ಪ್ರಾಪ್ತಿ

ಶ್ರೀ ನಿಟ್ಟೂರು ಶ್ರೀನಿವಾಸರಾವ್ ಅವರ ಶುಭ್ರ ಜೀವನ, ಕಾರ್ಯನಿಷ್ಠೆ, ಪ್ರಾಮಾಣಿಕತೆ, ನ್ಯಾಯ ಪ್ರಬುದ್ಧತೆ, ಅಲಂಕರಿಸಿದ ನ್ಯಾಯಪೀಠ, ಅವರು ನಿರ್ವಹಿಸಿದ ಕಾರ್ಯಗಳು, ಆ ನಂತರದ ಸಾರ್ವಜನಿಕ ಜೀವನದಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡು ಶ್ರೀಸಾಮಾನ್ಯನಲ್ಲಿ ಬೆರೆತುಹೋದ ಸಹೃದಯತೆ ಇವು ಅವರ ಅಪಾರ ಅಭಿಮಾನಿಗಳ ಗಳಿಕೆ ಹಾಗೂ ಯಶಸ್ಸಿಗೆ ಕಾರಣವಾಗಿದೆ. "ತುಂಬಾ ಸರಳ ಜೀವಿ, ಪ್ರಾಮಾಣಿಕ ವ್ಯಕ್ತಿ ಹಾಗೂ ರಾಷ್ಟ್ರದ ಹಿರಿಯ ಜೀವ" - ಎನ್ನುತ್ತಾರೆ ಅವರನ್ನು ಚೆನ್ನಾಗಿ ಬಲ್ಲ ಹಿರಿಯರು - ಗಾಂಧೀವಾದಿಗಳೂ, ಸ್ವಾತಂತ್ರ್ಯ ಹೋರಾಟಗಾರರೂ ಆದ ಶ್ರೀ ಸಿ. ರಾಜಗೋಪಾಲಾಚಾರ್ ಅವರು.

ಶ್ರೀ ನಿಟ್ಟೂರರನ್ನು ಶ್ರೇಷ್ಠ ನ್ಯಾಯವಾದಿಗಳೆಂದೇ ನಾವು ಗುರುತಿಸಬೇಕಾಗುತ್ತದೆ. ಏಕೆಂದರೆ ಅವರು ತಮ್ಮ ಜೀವನದಲ್ಲಿ ಹೆಚ್ಚು ಒತ್ತು ಕೊಟ್ಟಿದ್ದು ನ್ಯಾಯಿಕ ವಿಷಯಗಳಿಗೆ.

ಹೈಕೋರ್ಟಿನ ನ್ಯಾಯಾಧೀಶರಾಗಿ, ಹೈಕೋರ್ಟಿನ ಮುಖ್ಯ ನ್ಯಾಯಾಧೀಶರಾಗಿ, ಹಂಗಾಮಿ ರಾಜ್ಯಪಾಲರಾಗಿ ಕೊನೆಗೆ ಕೇಂದ್ರ ಸರ್ಕಾರದ ಜಾಗೃತ ದಳದ ಆಯುಕ್ತರಾಗಿ ದುಡಿದಿದ್ದಾರೆ. ಅಪಾರ ಯಶಸ್ಸು ಕಂಡಿದ್ದಾರೆ. ಮಧ್ಯಮ ವರ್ಗದ ಉಲಚಕಮ್ಮೆ ಸ್ಮಾರ್ತ ಬ್ರಾಹ್ಮಣ ಕುಟುಂಬದಲ್ಲಿ ಹುಟ್ಟಿ ಅಪಾರ ಪರಿಶ್ರಮದಿಂದ ರಾಷ್ಟ್ರಮಟ್ಟಕ್ಕೆ ಬೆಳೆದು ನಿಂತ ಒಬ್ಬ ಕನ್ನಡದ ಅಸಾಧಾರಣ ವ್ಯಕ್ತಿಯನ್ನು ವೈಯಕ್ತಿಕವಾಗಿ ಮಾತನಾಡಿಸಿ, ಅವರ

ಅಭಿಪ್ರಾಯಗಳನ್ನು ಈ ಲೇಖನದೊಂದಿಗೇ ಸೇರಿಸುವ ಉದ್ದೇಶದಿಂದ ಶ್ರೀ ನಿಟ್ಟೂರರನ್ನು ದಿನಾಂಕ ೯-೧೨-೨೦೦೨ರಂದು ದೂರವಾಣಿ ಮೂಲಕ ಸಂಪರ್ಕಿಸಿ "ನಾಳೆ ನಾಡಿದ್ದರಲ್ಲಿ ಯಾವುದೇ ವೇಳೆಯಾದರೂ ಸರಿ, ತಮ್ಮ ದರ್ಶನ ಪಡೆಯ ಬೇಕೆಂದಿರುವೆ" - ಎಂದಾಗ ಶ್ರೀ ನಿಟ್ಟೂರರು "ಎಂದಾದರೂ ಏಕೆ, ಇಂದೇ ಬನ್ನಿ, ಇಂದು ಸಂಜೆ ಯಾವ ಕಾರ್ಯ ಕ್ರಮವೂ ಇಲ್ಲ" ಎಂದರು. ಕೂಡಲೇ ಈ ದಿಗ್ಗಜರ ದರ್ಶನಕ್ಕೆ ಹೊರಟೆ. ಹಾಗೆಯೇ ಸಂದರ್ಶನವೂ ಆದೀತೆಂದು ಜಯನಗರದ ಐದನೇ ಬ್ಲಾಕು ನಲವತ್ತೇಳನೇ ಕ್ರಾಸು, ಒಂಭತ್ತನೇ ಮುಖ್ಯರಸ್ತೆಯಲ್ಲಿನ ಮನೆ ೪೫೬ ಹುಡುಕಾಡಿದೆ. ಬೇಗ ಸಿಕ್ಕಿತು. ಮನೆಯ ವರಾಂಡದಲ್ಲಿ ಫೋನಿನಲ್ಲಿ ಯಾರೊಡನೆಯೋ ಮಾತನಾಡುತ್ತಾ ಕುಳಿತಿದ್ದರು ನಿಟ್ಟೂರರು. ಅವರ ಕಿರಿಯ ಮಗ ಶ್ರೀ ಸುಬ್ಬಣ್ಣನವರು -"ಕೊಂಡಜ್ಜಿಯವರು ಬಂದಿದ್ದಾರೆ" ಎಂದು ಶ್ರೀ ನಿಟ್ಟೂರರಿಗೆ ಹೇಳಿ ಕಾರ್ಯನಿಮಿತ್ತ ಆಚೆ ಹೋದರು. "ಬನ್ನಿ, ಬನ್ನಿ, ಕುಳಿತುಕೊಳ್ಳಿ" - ಎಂದರು ನಿಟ್ಟೂರರು, ಅವರಿಗೆ ನಮಸ್ಕರಿಸಿದೆ. ತುಮಕೂರು ಜಿಲ್ಲೆ ತುರುವೇಕೆರೆ ತಾಲ್ಲೂಕು ಕೊಂಡಜ್ಜಿ ಗ್ರಾಮದ ದಿವಂಗತ ಕೃಷ್ಣಮೂರ್ತಿ ಮಗ "ನಾನು ತಮ್ಮ ದರ್ಶನಕ್ಕೆ ಬಂದಿದ್ದೇನೆ " - ಎಂದು ನನ್ನ ಪ್ರವರ ಹೇಳಿದೆ. "ಓಹೊ, ತಾಳ್ಕೆರೆ ಸುಬ್ರಹ್ಮಣ್ಯರ ಪಕ್ಕದ ಊರು ಅಲ್ಲವೆ? ಸಂತೋಷ" ಎಂದರು ಶ್ರೀ ನಿಟ್ಟೂರರು. ಅವರ ನೆನಪಿನ ಶಕ್ತಿ ನೂರನೇ ವಯಸ್ಸಿನಲ್ಲೂ ಅಗಾಧ!

'ಸಾಮಾನ್ಯ ಜ್ಞಾನ' ಪತ್ರಿಕೆಯ ಪ್ರತಿಯೊಂದನ್ನು ನೀಡಿ - "ಮಕ್ಕಳಿಗಾಗಿ ಇಪ್ಪತ್ತೊಂದು ವರ್ಷದಿಂದ ಪ್ರಕಟಿಸುತ್ತಿದ್ದೇನೆ, ನಾನು ಇದರ ಸಂಪಾದಕ" ಎಂದೆ. ಕುತೂಹಲದಿಂದ ಪತ್ರಿಕೆಯ ಪ್ರತಿಯೊಂದು ಪುಟವನ್ನೂ ತಿರುವಿ ನೋಡಿದರು. "ಶ್ರೀ ಗೌರಿಸುಂದರರು ತಮ್ಮ ಬಗ್ಗೆ ಗ್ರಂಥವನ್ನು ಪ್ರಕಟಿಸುವವರಿದ್ದಾರೆ. ಅದಕ್ಕಾಗಿ ತಮ್ಮ ದರ್ಶನ - ಸಂದರ್ಶನ ಎಂದು ಬಂದೆ" ಎಂದಾಗ "ಆಯ್ತು"- ಎಂದವರು ಶ್ರೀ ನಿಟ್ಟೂರರು. ಮಾತಿನ ಮಧ್ಯೆ ನಾನು ಕೇಳಿದೆ -"ನೂರು ವರ್ಷ ಕಂಡ ನಮ್ಮ ನಾಡಿನ ಹಿರಿಯರು ತಾವು. ತಮ್ಮೊಡನೆ ಒಂದೆರಡು ಮಾತನಾಡುವುದೂ ನನ್ನ ಭಾಗ್ಯ" ಎಂದೆ. ಆತ್ಮೀಯವಾಗಿ ನಕ್ಕರು.

**ಶ್ರೀ ನಿಟ್ಟೂರರ ಸಾರ್ವಜನಿಕ ಚಟುವಟಿಕೆಗಳು**

**೧. ಅಧ್ಯಕ್ಷತೆ :**

ಅ. ಗಾಂಧೀ ಸ್ಮಾರಕ ನಿಧಿ ಹಾಗೂ ಗಾಂಧೀ ಶಾಂತಿ ಸ್ಥಾಪನೆ-ಕರ್ನಾಟಕ ಶಾಖೆಯ ಅಧ್ಯಕ್ಷತೆ.

ಆ. ಕರ್ನಾಟಕ ಪ್ರಕೃತಿ ಚಿಕಿತ್ಸಾ ಪರಿಷತ್ ಅಧ್ಯಕ್ಷರು

ಇ. ಅಂತರ ರಾಷ್ಟ್ರೀಯ ವಿಶ್ವ ಸಂಘಟನೆ - ಭಾರತೀಯ ರಾಷ್ಟ್ರೀಯ ಕೇಂದ್ರದ ಅಧ್ಯಕ್ಷರು.

ಈ. ಮೈಸೂರು ರಾಜ್ಯ ಬಾರ್ ಕೌನ್ಸಿಲ್‌ನ ಅಧ್ಯಕ್ಷತೆ.

ಉ. ಬೆಳಗಾವಿಯಲ್ಲಿ ನಡೆದ ಅಖಿಲ ಕರ್ನಾಟಕ ವಕೀಲರ ಸಮ್ಮೇಳನದ ಅಧ್ಯಕ್ಷತೆ.

ಊ. ಮದರಾಸ್ ಬಾರ್ ಫೆಡರೇಷನ್ ಮತ್ತು ಚಿತ್ತೂರು ಜಿಲ್ಲಾ ಲಾ ಕಾನ್‌ಫರೆನ್ಸ್‌ದ ಅಧ್ಯಕ್ಷತೆ.

ಋ. ಅರಬಿಂದೊ ಸೊಸೈಟಿ ಅಧ್ಯಕ್ಷರು

ೠ. ಬರೋಡಾದಲ್ಲಿ ನಡೆದ ಹೊರನಾಡ ಕನ್ನಡಿಗರ ಸಮ್ಮೇಳನಾಧ್ಯಕ್ಷತೆ.

ಎ. ತುಮಕೂರು ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ (ಗುಬ್ಬಿ - ೧೯೯೭)

**೨. ಕಾರ್ಯದರ್ಶಿ :**

ಗೋಖಲೆ ಸಾರ್ವಜನಿಕ ವೇದಿಕೆ (Gokhale Institute of Public Affairs) ಇದರ ಇಂದಿನ ಕಾರ್ಯದರ್ಶಿ-ನೂರನೇ ವಯಸ್ಸಿನಲ್ಲಿ!!

## ಸಂದರ್ಶನ

**ಕೊಂಡಜ್ಜಿ** : ವಿಜ್ಞಾನದ ವಿದ್ಯಾರ್ಥಿಯಾದ ನೀವು ಕಾನೂನು ಪದವೀಧರರಾಗಲು ಕಾರಣವೇನು?

**ನಿಟ್ಟೂರು** : ಅದೊಂದು ದೊಡ್ಡಕತೆ. ತಾತಾ ಇನ್‌ಸ್ಟಿಟ್ಯೂಟಿನಲ್ಲಿ ಕೆಲಸ ಮಾಡಬೇಕಾಗಿತ್ತು. ಆದರೆ ಆರೋಗ್ಯ ಅಡ್ಡ ಬಂದುದೇ ಕಾರಣವಾಗಿ ನಾನು ಕಾನೂನು ಪದವಿ ಪಡೆದು ವಕೀಲನಾದೆ.

**ಕೊಂಡಜ್ಜಿ** : 'ಭಾರತ ಸಂವಿಧಾನವು ವರ್ತಮಾನದಲ್ಲಿ ತನ್ನ ಪ್ರಭಾವವನ್ನು ಉಳಿಸಿಕೊಂಡಿದೆಯೇ ಮತ್ತು ಜನರ ಆಶೋತ್ತರಗಳನ್ನು ಈಡೇರಿಸಬಲ್ಲ ಸಾಮರ್ಥ್ಯವನ್ನು ಹೊಂದಿದೆಯೇ?

**ನಿಟ್ಟೂರು** : ಖಂಡಿತಾ ಸಾಮರ್ಥ್ಯವನ್ನು ಹೊಂದಿದೆ. ಮಾತ್ರವಲ್ಲ, ದೇಶದ ಎಲ್ಲಾ ಪ್ರಜೆಗಳ ಅಗತ್ಯತೆಗಳನ್ನು ಪೂರೈಸಬಲ್ಲ ಸಾಮರ್ಥ್ಯವನ್ನು ಹೊಂದಿದೆ. ವರ್ತಮಾನದ ಪರಿಸ್ಥಿತಿಯಲ್ಲಿ ಕೆಲವೊಂದು ಅಂಶಗಳನ್ನು ತಿದ್ದುಪಡಿಗಳ ಮೂಲಕ ನಿವಾರಿಸಿಕೊಳ್ಳಬಹುದು.

**ಕೊಂಡಜ್ಜಿ** : ಅಂದರೆ ಸಂವಿಧಾನಕ್ಕೆ ತಿದ್ದುಪಡಿಗಳು ಆಗುತ್ತಲೇ ಇರಬೇಕೇಕೆ?

**ನಿಟ್ಟೂರು** : ಅನಗತ್ಯವಾದ ತಿದ್ದುಪಡಿಗಳಾಗಬಾರದು. ನೋಡಿ- ಅಮೆರಿಕಾ ಸಂಯುಕ್ತ ಸಂಸ್ಥಾನದ ಸಂವಿಧಾನವು ನಮ್ಮ ಸಂವಿಧಾನವು ರಚನೆಯಾಗುವುದಕ್ಕೆ ಸುಮಾರು ಒಂದು ನೂರು ವರ್ಷಕ್ಕೂ ಮುಂಚೆ ರಚನೆಯಾಗಿತ್ತು. ಅವತ್ತಿನಿಂದ ಇಂದಿನವರೆಗೆ ೧೦-೧೨ ತಿದ್ದುಪಡಿಗಳು ಮಾತ್ರ ಆಗಿವೆ. ಆದರೆ ನಮ್ಮ ಸಂವಿಧಾನವು ಕೇವಲ ೫೦ ವರ್ಷಗಳಲ್ಲಿ ನೂರರ ತನಕ ತಿದ್ದುಪಡಿಗಳಾಗಿವೆ.

**ಕೊಂಡಜ್ಜಿ** : ನಮ್ಮ ದೇಶದ ಕಾನೂನು ಸ್ವರೂಪಕ್ಕೂ ಬೇರೆ ದೇಶದ ಸ್ವರೂಪಕ್ಕೂ ವ್ಯತ್ಯಾಸವಿದೆಯೇ?

**ನಿಟ್ಟೂರು** : ಹೆಚ್ಚಾಗಿ ವ್ಯತ್ಯಾಸವೇನೂ ಇಲ್ಲ. ಬ್ರಿಟಿಷ್ ಪೀನಲ್ ಕೋಡಿಗೂ ಭಾರತೀಯ ದಂಡ ಸಂಹಿತೆಗೂ (IPC) ಏಕಸಾಮ್ಯವಿದೆ. ಎಂದರೆ ಕಾನೂನು ದೃಷ್ಟಿಯಲ್ಲಿ ವಿಶ್ವದ ಎಲ್ಲಾ ಜನತೆ ಒಂದೇ ಎಂದು ಸಾರಿದಂತೆ ಆಗುತ್ತದೆ ಅಲ್ಲವೇ?

**ಕೊಂಡಜ್ಜಿ** : ತಾವು ನ್ಯಾಯಾವಾದಿಗಳಾಗಿ, ಕರ್ನಾಟಕದ (ಅಂದಿನ ಮೈಸೂರು) ಶ್ರೇಷ್ಠ ನ್ಯಾಯಾಲಯದ ನ್ಯಾಯಾಧೀಶರಾಗಿ ಮತ್ತು ಶ್ರೇಷ್ಠ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರಾಗಿ ನಮ್ಮ ಜನತೆಯನ್ನು ತಾವು ಕಂಡಿದ್ದೀರಿ. ಅಂದಿನ ದಿನಗಳಲ್ಲಿ ನ್ಯಾಯಾಲಯದ ಬಗ್ಗೆ ಜನ ಸಾಮಾನ್ಯರಲ್ಲಿ ಗೌರವಿತ್ತೇ?

**ನಿಟ್ಟೂರು** : ಬಹಳ ಗೌರವವಿತ್ತು, ಮರ್ಯಾದೆ ಇತ್ತು, ಇಂದಿಗೂ ಇದೆ.

**ಕೊಂಡಜ್ಜಿ** : ಅಂದರೆ ಈ ಮರ್ಯಾದೆ ಮತ್ತು ಗೌರವ ಅಂದಿನ ರಾಜರ ಭಯ ದಿಂದಲೋ ಅಥವಾ ಸ್ವಾಭಾವಿಕವಾಗಿಯೋ?

**ನಿಟ್ಟೂರು** : ಭಯವೂ ಇತ್ತು ಹಾಗೂ ಸಹಜವಾಗಿಯೂ ಇತ್ತು. ಅಂದಿನ ದಿನಗಳಲ್ಲಿ ಶ್ರೀ ಶೇಷಾದ್ರಿ ಅಯ್ಯರ್, ಸರ್ ಎಂ. ವಿಶ್ವೇಶ್ವರಯ್ಯನವರಂತಹ ಶ್ರೇಷ್ಠ ಮಟ್ಟದ ದಿವಾನರುಗಳೂ ಇದ್ದರು.

**ಕೊಂಡಜ್ಜಿ** : ತಾವು ಗಾಂಧೀಜಿ ಅವರನ್ನು ಕಂಡವರು. ಗಾಂಧೀವಾದಿಗಳು ಇಂದಿನ ದಿನಗಳಲ್ಲಿ ಗಾಂಧೀ ತತ್ತ್ವಗಳ ಬಗ್ಗೆ ಜನರಲ್ಲಿ ಗೌರವ ಇದೆಯೇ?

**ನಿಟ್ಟೂರು** : ಇಂದಿಗೂ ಶ್ರೀಸಾಮಾನ್ಯರಲ್ಲಿ ಗಾಂಧೀ ತತ್ತ್ವಗಳ ಬಗ್ಗೆ ಒಟ್ಟಾರೆ ಗೌರವಿದೆ ಎಂದು ಅಭಿಪ್ರಾಯ ಪಡುತ್ತೇನೆ.

**ಕೊಂಡಜ್ಜಿ** : ತಾವು ಕರ್ನಾಟಕದ (ಅಂದಿನ ಮೈಸೂರು ರಾಜ್ಯ) ರಾಜ್ಯಪಾಲರಾಗಿ ಕರ್ತವ್ಯ ನಿರ್ವಹಿಸಿದ್ದೀರಿ. ಅಂದಿನ ದಿನಗಳಲ್ಲಿ ರಾಜ್ಯದ ಮುಖ್ಯಮಂತ್ರಿಗಳು ಮತ್ತು ಮಂತ್ರಿಗಳ ಸಂಪರ್ಕ ಹೇಗಿತ್ತು?

**ನಿಟ್ಟೂರು** : ಮೈಸೂರಿನ ಅಂದಿನ ಮಹಾರಾಜ ಶ್ರೀ ಜಯಚಾಮರಾಜ ಒಡೆಯರ್ ಅವರು ರಾಜ್ಯಪಾಲರಾಗಿದ್ದರು. ಅವರು ರಜೆಯ ಮೇಲೆ ಅಮೇರಿಕ ಪ್ರವಾಸಕ್ಕೆಂದು ತೆರಳಿದರು. ಆ ಜಾಗಕ್ಕೆ ನನ್ನನ್ನು ಹಂಗಾಮಿಯಾಗಿ ರಾಜ್ಯಪಾಲರನ್ನಾಗಿ ನೇಮಿಸಿದ್ದರು (To act as a Governor) ಆಗ ಶ್ರೀ ನಿಜಲಿಂಗಪ್ಪನವರು ಮುಖ್ಯ ಮಂತ್ರಿಗಳಾಗಿದ್ದರು. ಅವರು ನನ್ನ ಸಲಹೆಯನ್ನು ಪಡೆಯುತ್ತಿದ್ದರು. ಆದರೆ ತಮ್ಮ ಮಂತ್ರಿ ಮಂಡಳದ ತೀರ್ಮಾನಕ್ಕೆ ಬದ್ಧರಾಗಿರುತ್ತಿದ್ದರು. ಆಗಿನ ಮಂತ್ರಿ ಮಂಡಳದಲ್ಲಿ ಒಳ್ಳೊಳ್ಳೆ ಮಂತ್ರಿಗಳಿರುತ್ತಿದ್ದರು.

**ಕೊಂಡಜ್ಜಿ** : ತಾವು ಕೇಂದ್ರ ಸರ್ಕಾರದಲ್ಲಿ ಪ್ರಥಮ ಜಾಗೃತ ದಳದ ಆಯುಕ್ತರಾಗಿ ದುಡಿದಿದ್ದೀರಿ. ಆ ಅನುಭವ ಕುರಿತ ಒಂದರೆಡು ಮಾತು.....

**ನಿಟ್ಟೂರು** : ಶ್ರೀ ಲಾಲ್ ಬಹದ್ದೂರ್‌ಶಾಸ್ತ್ರಿ ಅವರು ಕೇಂದ್ರದಲ್ಲಿ ಗೃಹಮಂತ್ರಿಗಳಾಗಿದ್ದರು. ಭುವನೇಶ್ವರದಲ್ಲಿ ನಡೆದ ಅಖಿಲ ಭಾರತ ಕಾಂಗ್ರೆಸ್ ಅಧಿವೇಶನದಲ್ಲಿ ಶ್ರೀ ಗುಲ್ಜಾರಿಲಾಲ್ ನಂದ, ನಿಜಲಿಂಗಪ್ಪ ಇವರೆಲ್ಲರ ಒತ್ತಾಯದ ಮೇಲೆ ಸಂತಾನಂ ಸಮಿತಿಯ ಶಿಫಾರಸ್ಸಿನಂತೆ ಸಾರ್ವಜನಿಕ ಆಡಳಿತದಲ್ಲಿನ ಭ್ರಷ್ಟಾಚಾರ ಕುರಿತ ವಿಚಾರಣೆಗಾಗಿ ೧೯೬೪ರಲ್ಲಿ Government of India set up a General Agency. ಆಗ ಸರ್ಕಾರದ ತೀವ್ರ ಒತ್ತಡಕ್ಕೆ ಮಣಿದು ನಾನು ವಿಜಿಲನ್ಸ್ ಕಮೀಶನರ್ ಹುದ್ದೆ ಒಪ್ಪಿಕೊಳ್ಳಬೇಕಾಯ್ತು. ವೃತ್ತಿಗೆ ಸಂಬಂಧಿಸಿದಂತೆ ಕಾರ್ಯ ನಿರ್ವಹಿಸಿದ್ದೇನೆ.

**ಕೊಂಡಜ್ಜಿ** : ನಮ್ಮ ದೇಶದ ಬಗ್ಗೆ - ಅಂದರೆ ನಮ್ಮ ದೇಶ ಅಭಿವೃದ್ಧಿ ಹೊಂದಿದೆಯೇ? ಹೊಂದುತ್ತಿದೆಯೋ?

**ನಿಟ್ಟೂರು** : ನಮ್ಮ ಭಾರತ ದೇಶ ಮುಂದೆ ಬಂದಿದೆ. ಓದುವ ವಿದ್ಯಾರ್ಥಿಗಳು ಸಾವಿರ ವಿದ್ದ ಜಾಗದಲ್ಲಿ ಇಂದು ಲಕ್ಷ ದಾಟಿದ್ದಾರೆ. ಕೃಷಿಯಲ್ಲೂ ನಾವು ಮುಂದು ವರಿದಿದ್ದೇವೆ. ದಿಲ್ಲಿಗೂ ಹೋಗಿ ಬರುತ್ತಾರೆ ನಮ್ಮ ರೈತರು. ಈಗ ರೇಡಿಯೋ, ಟಿ.ವಿ. ಎಲ್ಲಾ ಬಂದಿದೆ. ಮನೆಯಲ್ಲಿ ಕುಳಿತು ಮಕ್ಕಳು

ಪ್ರಪಂಚ ನೋಡುತ್ತಾರೆ. ಹಿಂದೆ ಗುಂಡುಸೂಜಿ, ಕತ್ತರಿ, ಪೆನ್ನು ಮೊದಲಾದವುಗಳಿಗೆ ಇಂಗ್ಲೆಂಡಿಗೆ ಹೋಗಬೇಕಿತ್ತು. ಆದರೆ ಈಗ ಇಲ್ಲಿಯೇ ನಮ್ಮಲ್ಲಿ ನೂರಾರು ಕೈಗಾರಿಕೆಗಳು ಇವೆ. ಒಟ್ಟಾರೆ ಜೀವನದ ಪರಿಕಲ್ಪನೆಯೇ (Life Concept) ಬದಲಾವಣೆ ಆಗಿದೆ. ಅಂದರೆ ಅನುಕೂಲಕರ ವಾತಾವರಣ ನಿರ್ಮಾಣವಾಗಿದೆ.

**ಕೊಂಡಜ್ಜಿ** : ತಮಗೆ ಮಕ್ಕಳು?

**ನಿಟ್ಟೂರು** : ನಾಲ್ಕು ಮಂದಿ. ಹಿರಿಯ ಚಂದ್ರಶೇಖರ ವಕೀಲನಾಗಿದ್ದಾನೆ. ಎರಡನೆಯವಳು ಮಗಳು ಜಯಸೀತ, ಮೂರನೆಯವಳು ಲಲಿತ ಈ ಇಬ್ಬರೂ ಅಮೆರಿಕೆಯಲ್ಲಿ ಶಿಕ್ಷಕರಾಗಿದ್ದಾರೆ. ಕೊನೆಯವನನೇ ಸುಬ್ಬಣ್ಣ. ಅವರೊಡನೆಯೇ ನಾನಿದ್ದೇನೆ.

ಇನ್ನೂ ಸಾಹಿತ್ಯದತ್ತ ಶ್ರೀ ನಿಟ್ಟೂರರ ಗಮನ ಸೆಳೆಯುವ ಮನಸ್ಸಾಯ್ತು.

**ಕೊಂಡಜ್ಜಿ** : ತಾವು ಹೆಚ್ಚು ಬರೆಯಲಿಲ್ಲವೇಕೆ?

**ನಿಟ್ಟೂರು** : ಕನ್ನಡ ಸಾಹಿತ್ಯದ ನವೋದಯ (Renaisance) ಕಾಲವದು. ಸೆಂಟ್ರಲ್ ಕಾಲೇಜ್ ಕರ್ನಾಟಕ ಸಂಘ, ಕನ್ನಡ ಸಾಹಿತ್ಯ ಪರಿಷತ್ತುಗಳ ನಿಕಟ ಸಂಪರ್ಕ ಬಗ್ಗೆ ನನ್ನ ಒಲವಿತ್ತು. ಅಂತೆಯೇ ಪ್ರಖ್ಯಾತರಾಗುತ್ತಿದ್ದ ಡಾ|| ಕೋಟ ಶಿವರಾಮ ಕಾರಂತ ಅವರ ಬಾಲ ಪ್ರಪಂಚ, ಡಾ|| ಕುವೆಂಪು ಅವರ ಕೊಳಲು ಅಂದಿನ ದಿನಗಳಲ್ಲಿ ಪ್ರಕಟಿಸಿದ್ದೇನೆ. ಡಿವಿಜಿ, ಬಿ.ಎಂ.ಶ್ರೀ., ತಳುಕಿನ ವೆಂಕಣ್ಣಯ್ಯ, ಸಿದ್ದವನಹಳ್ಳಿ ಕೃಷ್ಣಶರ್ಮ, ಮಾಸ್ತಿ, ಶಂಬಾ, ಬೇಂದ್ರೆ, ವೀಸೀ ಮೊದಲಾದ ಶ್ರೇಷ್ಠ ಮಟ್ಟದ ಬರಹಗಾರರ ಪರಿಚಯ ಭಾಗ್ಯ ಒದಗಿ ಬಂತು. ಗಾಂಧೀಜಿ ಅವರ ಆತ್ಮಕಥೆ ಹಾಗೂ ಅನಾಸಕ್ತಿಯೋಗ ಇವುಗಳನ್ನು ಅನುವಾದಿಸಿ ಪ್ರಕಟಿಸಿದ್ದೇನೆ. ಸಾಹಿತ್ಯ ಪ್ರೋತ್ಸಾಹಕನಾಗಿ ದುಡಿದಿದ್ದೇನೆ.

**ಕೊಂಡಜ್ಜಿ** : ಇನ್ನು ಕೊನೆಯದಾಗಿ ಒಂದು ಪ್ರಶ್ನೆ; ಇಂದಿನ ಕಿರಿಯರ ಬಗ್ಗೆ ತಮ್ಮ ಅಭಿಪ್ರಾಯವೇನು?

**ನಿಟ್ಟೂರು** : ಇಂದಿನ ಕಿರಿಯರನ್ನು ಗೌರವದಿಂದ ಕಾಣಬೇಕು. "ನಮೋ ಅರ್ಭಕೇಭ್ಯೋ ನಮಃ" ಬುದ್ಧಿವಂತ ಮಕ್ಕಳಿಂದ ನಾವು ತಿಳಿಯುವುದು ಬಹಳಷ್ಟಿವೆ. ಬುದ್ಧಿವಂತ ವಿದ್ಯಾರ್ಥಿಗಳಿದ್ದರೆ. ಹೆಚ್ಚು ಹೆಚ್ಚು ವಿಷಯಗಳನ್ನು ತಿಳಿದು

ಕೊಳ್ಳಲು ನಮಗೆ ದಾರಿ ಕಾಣುತ್ತದೆ. ಇಂದಿನ ಮಕ್ಕಳೆಲ್ಲರೂ ಬಹಳ ಬುದ್ಧಿವಂತರು.

ಒಂದು ಗಂಟೆ ಕಾಲ ಶ್ರೀ ನಿಟ್ಟೂರರು ಮಾತನಾಡಿದ್ದಾರೆ. ಅವರ ಸರಳತೆಗೆ, ಶ್ರೇಷ್ಠತೆಗೆ ಇದಕ್ಕಿಂತ ಇನ್ನೇನು ಬೇಕು? ರಾಜ್ಯಮಟ್ಟದಲ್ಲಿ, ರಾಷ್ಟ್ರಮಟ್ಟದಲ್ಲಿ ಅವರಿಗೆ ಮನ್ನಣೆ ಇನೂ ಸಲ್ಲಬೇಕಿದೆ. ಬೇಗ ಸಂದರೆ ಅದು ನಮ್ಮ ಭಾಗ್ಯವೂ ಹೌದು, ರಾಷ್ಟ್ರದ ಹೆಮ್ಮೆಯೂ ಹೌದು.



# ‘ನ್ಯಾಯಮೂರ್ತಿ’ ‘ನಿತ್ಯಸ್ಫೂರ್ತಿ’ಗೆ ನಿಟ್ಟೂರು ‘ನೂರು’

. . . . . . . . . . . . . . . . . . . . . ✍ *ಕಣಗಾಲ್ ಪುರುಷೋತ್ತಮ**

ಹಿರಿಯ ಮಿತ್ರ ಗೌರಿಸುಂದರ್ ನ್ಯಾಯಮೂರ್ತಿ ನಿಟ್ಟೂರು ಶ್ರೀನಿವಾಸರಾಯರ ಬಗ್ಗೆ ಲೇಖನವೊಂದನ್ನು ಕೇಳಿದಾಗ ಸಖೇದ ಆಶ್ಚರ್ಯವಾಯಿತು. ನಮ್ಮ ನಡುವಣ ಗಾಂಧಿ ನಿಟ್ಟೂರರ ಬಗ್ಗೆ ನನಗೇನೂ ತಿಳಿದಿಲ್ಲ ಎಂಬ ಖೇದ. ಬರಹ ಗಾರನಲ್ಲದ ನನ್ನನ್ನು ಬರೆದುಕೊಡಿ ಎಂದು ಒತ್ತಾಯಿಸುವ ವಿಶ್ವಾಸಕ್ಕೆ ನಾನು ಆಶ್ಚರ್ಯಗೊಂಡೆ. ವಿನಯದಿಂದ ನನಗೆ ನಿಟ್ಟೂರರ ಬಗ್ಗೆ ಏನೂ ಗೊತ್ತಿಲ್ಲ ಎಂದು ಪ್ರಾಮಾಣಿಕವಾಗಿ ಒಪ್ಪಿಕೊಂಡೆ. ತಿಳಿದುಕೊಂಡು ಬರೀರಿ ಎಂದು ಆಗ್ರಹಪೂರ್ವಕ ವಾಗಿ ತಿಳಿಸಿದರು. ಅದು ನ್ಯಾಯ ಅನ್ನಿಸಿತು. ಕೆಲವು ವರ್ಷಗಳ ಹಿಂದೆ ನನ್ನ ಬಳಿ ವೇದೋಪನಿಷತ್ತುಗಳ ಬಗ್ಗೆ ಪಾಠ ಹೇಳಿಸಿ ಕೊಳ್ಳುವ ಸಲುವಾಗಿ ವಿದೇಶೀಯರೊಬ್ಬರು ಸಂಪರ್ಕಿಸಿದರು. ನಾನು ನನ್ನ ಇತಿಮಿತಿ ತಿಳಿಸಿದೆ. ನೇರವಾಗಿ ನನ್ನ ಅಲ್ಪಜ್ಞಾನ ಯಾನೆ ಅಜ್ಞಾನದ ಬಗ್ಗೆ ಸೂಚಿಸಿದೆ. ಅದಕ್ಕೆ ಅವರು ನೀವು ಓದಿ ತಿಳಿದಿಲ್ಲ ಒಪ್ತೀವಿ. ಆದರೆ ಓದಿ ತಿಳಿದುಕೊಂಡು ತಿಳಿಸಿರಿ ಅಂದರೆ ಕಲಿಯಿರಿ ಕಲಿತು ಕಲಿಸಿರಿ ಎಂದು ವಿವೇಕ ಹೇಳಿದರು. ನನಗೆ ಅವರ ಮಾತು ಸರಿ ಅನ್ನಿಸಿತು. ಅದೇ ರೀತಿ ಗೆಳೆಯ ಗೌರಿಸುಂದರ್ ಮಾತು ನನ್ನನ್ನು ನೂರರ ನಿಟ್ಟೂರರ ಬಗ್ಗೆ ಬರೆಯಲು ಪ್ರೇರೇಪಿಸಿತು.

ಸಾಮಾನ್ಯವಾಗಿ ಒಬ್ಬ ವ್ಯಕ್ತಿ ಎಷ್ಟು ವರ್ಷ ಬದುಕಿದ್ದಾನ ಎಂಬುದಕ್ಕಿಂತ ಹೇಗೆ ಬದುಕಿದ್ದಾನೆ ಎಂಬ ಸಂಗತಿ ಬಹು

---

* ೯೯೦/ಬಿ, ಕಾಳಪ್ಪ ಬ್ಲಾಕ್, ೧೧ನೇ ಕ್ರಾಸ್
ಶ್ರೀನಗರ, ಬೆಂಗಳೂರು - ೫೬೦೦೫೦

ಮುಖ್ಯ. ಈ ನಿಟ್ಟಿನಲ್ಲಿ ನಿಟ್ಟೂರರ ಬಗ್ಗೆ ಯೋಚಿಸಿದಾಗ ಅವರ ಅನನ್ಯತೆ ನಮ್ಮ ಕಣ್ಣಿಗೆ ರಾಚುತ್ತದೆ. ನಿಟ್ಟೂರರ ಜೀವನ ಸೂತ್ರ ಸರಳತೆ. ನಿಟ್ಟೂರರ ಆದರ್ಶ ಸರಳತೆ. ನಿಟ್ಟೂರರ ಆಶಯ ಸರಳತೆ. ನಿಟ್ಟೂರರ ನಂಬಿಕೆ ಸರಳತೆ. ನಿಟ್ಟೂರರ ಸಿದ್ಧಾಂತ ಸರಳತೆ. ನಿಟ್ಟೂರರ ಉಸಿರು ಸರಳತೆ. ಸರಳವಾಗಿ ಬದುಕನ್ನು ಸ್ವೀಕರಿಸಿ ನಡೆದುಕೊಂಡ ನಿಟ್ಟೂರರು ನೂರಲ್ಲ ಇನ್ನೂ ನೂರು ವರ್ಷ ಬದುಕಬೇಕು. ನಿರುಪದ್ರವಿಯಾಗಿ ಬದುಕುವ ಕಲೆ ರೂಢಿಸಿಕೊಂಡ ನಿಟ್ಟೂರರು ಬದುಕಲೇ ಬೇಕು. ಅವರು ಖಂಡಿತಾ ಬದುಕುತ್ತಾರೆ. ಕಾರಣ LESS LUGGAGE MORE COMFORT ಎಂಬಂತೆ ಜೀವನವೆಂಬ ಪಯಣದಲ್ಲಿ ಆಸೆಗಳು ಅನ್ನೋ ಲಗ್ಗೇಜು ಹೆಚ್ಚಿಸಿಕೊಳ್ಳದ ಅಪರೂಪದ ವ್ಯಕ್ತಿತ್ವ ನಿಟ್ಟೂರರದು.

ನಿಟ್ಟೂರರು ಹಿರಿಯ ನ್ಯಾಯಮೂರ್ತಿ ಎಂದು ಕೀರ್ತಿ ಪಡೆದಿದ್ದಾರೆ. ಮೃದುಮನಸ್ಸಿನ ಮೆದು ಸ್ವಭಾವದ ನಿಟ್ಟೂರರು "ನಿಷ್ಠೂರ ನ್ಯಾಯಪೀಠ"ವನ್ನು ಹೇಗೆ ನಿಭಾಯಿಸಿದರೆಂದು ನನಗೆ ಕುತೂಹಲವಿದೆ. ಅಷ್ಟೇ ಏಕೆ ಅವರು ರಾಜ್ಯಪಾಲರಾಗಿ ಕಾರ್ಯ ನಿರ್ವಹಿಸಿದರು ಎಂಬ ಸಂಗತಿಯು ನನಗೆ ವಿಚಾರ ಮಾಡಬೇಕೆನಿಸುತ್ತದೆ. ನಮ್ಮ ದೇಶದಲ್ಲಿ ಸರ್ಕಾರದ ಒಂದು ಚಿಕ್ಕ ಹುದ್ದೆಯನ್ನು ಅಲಂಕರಿಸಿದವರೂ ಬಂಗ್ಲೆ ಕಾರು ತೋಟ ಹಣ ಮಾಡಿಕೊಂಡ ಸಂಗತಿ ಸರ್ವವಿದಿತ. ಹಾಗಿರುವಾಗ ಒಂದು ರಾಜ್ಯದ ರಾಜ್ಯಪಾಲರಾಗಿ ಕಾರ್ಯ ನಿರ್ವಹಿಸಿ ಹಣ ಹೆಸರು ಹಗರಣ ಮಾಡದ ನಿಟ್ಟೂರರು ಹೇಗೆ ಸಮರ್ಥರು ಎಂಬ ಭೇತಾಳ ಪ್ರಶ್ನೆ ನನ್ನನ್ನು ಕಾಡುತ್ತಿದೆ. ಬಹುಶಃ ಅವರ ಮುಗ್ಧತೆ ಅವರನ್ನು ಅಲ್ಲಿಯು ಇಲ್ಲಿಯು ಎಲ್ಲೆಲ್ಲಿಯೂ ಸಲ್ಲುವಂತೆ ಮಾಡಿರಬಹುದು. ದುಡುಕಿನಲ್ಲಿ ನಿಟ್ಟೂರರು ಹಣ ಮಾಡದ್ದರಿಂದ ನಾಲಾಯಕ್ಕು ಅಂತ ನಿರ್ಧಾರಕ್ಕೆ ಬಂದರೆ ಅವಿವೇಕ. ನಿಟ್ಟೂರರ ನಿಷ್ಠೆ, ಪ್ರಾಮಾಣಿಕತೆ ಅವರೇ ಲಾಯಕ್ಕು ಅಂತ ಘೋಷಿಸುತ್ತಲೇ ಇರುತ್ತದೆ.

ಅರುವತ್ತಕ್ಕೆ ಅರಳು ಮರಳು ಅಂತ ಗಾದೆ ಮಾತು. ಆದರೆ ಅರುವತ್ತರ ಮೇಲೆ ಅರಿವಿಗೆ ಮರಳುವವರ ಮುಂಚೂಣಿಯಲ್ಲಿ ನಿಟ್ಟೂರರು ಶತಕ ಬಾರಿಸಿದ್ದಾರೆ. ನಿಟ್ಟೂರರ ಬಗ್ಗೆ ಬರೆಯುವಾಗ "ಬಾರಿಸು" ಶಬ್ದ ಯೋಗ್ಯ ಬಳಕೆ ಅಲ್ಲ. ನೂರರ ಅಂಚು ಮುಟ್ಟಿದ್ದಾರೆ ದಾಟಿದ್ದಾರೆ. ಅಲ್ಲ ನೂರು ಮೀರಿ ಮೀಟಿದ್ದಾರೆ, ಮಿಡಿದಿದ್ದಾರೆ, ಮಿಡಿಯುತ್ತಲೇ ಇರುತ್ತಾರೆ.

ಭಾಷಾಶಾಸ್ತ್ರಜ್ಞರು ನಿಷ್ಠೂರ ಶಬ್ದಗಳ ತದ್ಭವ ಎಂದು ಕನ್ನಡದ ನಿಟ್ಟೂರ ಎಂದು ಹೇಳಬಹುದು ಆದರೆ ನಿಟ್ಟೂರರು ನಿಡಿದಾದ ನೀಳವಾದ ಬದುಕನ್ನು ಬದುಕಿದವರು ಎಂದು ನಿಷ್ಠೂರತೆಯಿಂದ ಹೇಳಲು ನನ್ನ ಮನಸ್ಸು ಬಯಸುತ್ತಿದೆ. ಅವರನ್ನು ಹತ್ತಿರದಿಂದ

ತಿಳಿಯದ ನಾನು ನಾಡಿನ ಅನೇಕ ಸಾಂಸ್ಕೃತಿಕ ಸಭೆ ಸಮಾರಂಭಗಳಲ್ಲಿ ಅವರು ಭಾಗವಹಿಸಿದ್ದನ್ನು ನೋಡಿದ್ದೇನೆ. ಅವರು ಉತ್ಸಾಹದಿಂದ ಚಟುವಟಿಕೆಯಿಂದ ಲವಲವಿಕೆಯಿಂದ ನಡೆದಾಡುವುದನ್ನು ಕಂಡಿದ್ದೇನೆ. ಇದೆಲ್ಲದರ ತಾಯಿ ಬೇರು ಅವರ ಬದುಕಿನ ಬಗ್ಗೆ ತಳೆದುಕೊಂಡಿರುವ ಅಸೀಮ ಪ್ರೇಮ ಎಂದು ನನ್ನ ನಂಬಿಕೆ. ಯಾರು ಬದುಕನ್ನು ಅತಿಯಾಗಿ ಪ್ರೀತಿಸುತ್ತಾರೋ ಅವರು ಅಮರರಾಗಿ ಬದುಕುತ್ತಾರೆ. ನಿಟ್ಟೂರರು ಅಜರರು, ಅಮರರು.






# ನಮ್ಮ ನಾಡಿನ ಅಪರೂಪದ ವ್ಯಕ್ತಿ - ಶ್ರೀ ನಿಟ್ಟೂರು

*ಜಿ. ಮಣಿಪ್ರಕಾಶ್**

೯೯ ವಸಂತಗಳನ್ನು ಕಂಡಿರುವ ಶ್ರೀ ನಿಟ್ಟೂರು ಶ್ರೀನಿವಾಸ ರಾವ್ ನಮ್ಮ ನಾಡು ಕಂಡ ಅಪರೂಪದ ವ್ಯಕ್ತಿ. ಸ್ವಾತಂತ್ರ್ಯ ಪೂರ್ವದಿಂದಲೇ ವಕೀಲ ವೃತ್ತಿಯೊಂದಿಗೆ ಆರಂಭವಾದ ಅವರ ಜನರ ಒಡನಾಟ ಇಂದಿನವರೆಗೂ ಹಲವು ಸ್ತರಗಳಲ್ಲಿ ಅನುಭವಗೊಂಡಿದೆ. ಸರ್ಕಾರದ ಉನ್ನತ ಹುದ್ದೆಗಳಲ್ಲಿ ತಮ್ಮ ಜವಾಬ್ದಾರಿಯನ್ನು ಸಮರ್ಪಕವಾಗಿ ನಿರ್ವಹಿಸಿದ ಅವರು 'ನಿವೃತ್ತಿ' ಜೀವನದ 'ನಿಜವಾದ' ಅರ್ಥವನ್ನು ಎಲ್ಲರಿಗೂ ತಮ್ಮ ಜೀವನ ಶೈಲಿಯಿಂದ ಸಾರಿದ್ದಾರೆ. ವೃತ್ತಿ ಜೀವನ ದಲ್ಲಿಯೂ ಅವರು ಹಲವು ಸಂಘಟನೆಗಳಲ್ಲಿ ಸಕ್ರಿಯವಾಗಿ ಭಾಗಿಯಾಗಿದ್ದು, ಕನ್ನಡ ಸಾಹಿತ್ಯ ಲೋಕಕ್ಕೆ ಅಪರೂಪ ಹಾಗೂ ಅತಿ ಉಪಯುಕ್ತ ಸೇವೆಯನ್ನು ನೀಡಿದ್ದಾರೆ. ೩೦ರ ದಶಕ ದಲ್ಲಿಯೇ ಕನ್ನಡ ಪುಸ್ತಕಗಳ ಪ್ರಕಟಣೆ ಹಾಗೂ ವಿವಿಧ ಬರಹಗಾರರ ಕೃತಿಗಳ ಮಾರಾಟ ಮಳಿಗೆಯ ವ್ಯವಸ್ಥೆ ಇವುಗಳು ಶ್ರೀನಿವಾಸರಾವ್ ಕನ್ನಡ ಸಾಹಿತ್ಯ ಪ್ರಪಂಚಕ್ಕೆ ನೀಡಿದ ಅಗತ್ಯ ಉತ್ತೇಜನ.

**ಬದುಕಿನ ಶೈಲಿ :**

ನಿಟ್ಟೂರು ಶ್ರೀನಿವಾಸರಾವ್ ಅವರ ಜೀವನ ಹಂತ ಹಂತವಾಗಿ ಮೇಲೇರಿ ಗೌರವ ಸ್ಥಾನಗಳಲ್ಲಿ ಗುರುತಿಸಿ ಕೊಂಡರೂ ಅದು ಹೊರನೋಟಕ್ಕೆ ಮಾತ್ರ ಎನ್ನಿಸುವಂಥದು. ಏಕೆಂದರೆ ಅವರ ಸರಳ ಹಾಗೂ ಶಿಸ್ತಿನ ಜೀವನ ಅವರನ್ನು

---

* ೧೫೭೬, ೫ನೇ ಕ್ರಾಸ್, ನಾಗಪ್ಪ ಬ್ಲಾಕ್
ಶ್ರೀರಾಮಪುರ, ಬೆಂಗಳೂರು - ೫೬೦೦೨೧

ಮಾದರಿಯಾಗಿಸಿದೆ. ಉನ್ನತ ಹುದ್ದೆ - ಸ್ಥಾನದಲ್ಲಿದ್ದವರು ಎಂದರೆ ಸಮಾಜದಲ್ಲಿ ಪ್ರತ್ಯೇಕತೆ ಕಂಡುಕೊಳ್ಳಲು ತವಕಿಸುವವರೇ ಹೆಚ್ಚಾಗಿರುವ ಇಂದಿನ ದಿನಗಳಲ್ಲಿ ಶ್ರೀನಿವಾಸರಾವ್ ವಿಶಿಷ್ಟ ವ್ಯಕ್ತಿಯಾಗಿ ನಮ್ಮೆದುರು ನಿಲ್ಲುತ್ತಾರೆ. ಯಾವುದೇ ಸಮಾರಂಭ ಕಾರ್ಯಕ್ರಮಗಳಿರಲಿ, ವೇದಿಕೆ ಮೇಲಾಗಲಿ, ವೇದಿಕೆಯ ಮುಂಭಾಗದಲ್ಲಾಗಲಿ ನಿಟ್ಟೂರು ಶ್ರೀನಿವಾಸರಾವ್ ಅವರು ಅತಿ ಉತ್ಸಾಹ, ಆಸಕ್ತಿಗಳೊಂದಿಗೆ ಭಾಗವಹಿಸುತ್ತಿರುವುದು ಅವರು ರೂಢಿಸಿಕೊಂಡ ಜೀವನ ಕ್ರಮಗಳಲ್ಲಿ ಒಂದು.

**ಜನಸ್ಪಂದನ :** ಸಾಮಾಜಿಕವಾಗಿ ನಿಟ್ಟೂರು ಶ್ರೀನಿವಾಸರಾವ್ ಅವರು ತಮ್ಮ ಜೀವನದ ಹೆಚ್ಚು ಕಾಲವನ್ನು ಸಾರ್ಥಕಗೊಳಿಸಿಕೊಳ್ಳುತ್ತಾರೆ. ಸಭೆ, ಸಮಾರಂಭ, ಕಾರ್ಯಕ್ರಮ ಕಲಾಪಗಳಿಗೆ ಎಂದೂ ತಪ್ಪಿಸಿಕೊಂಡವರಲ್ಲ. ತಮ್ಮನ್ನು ಭೇಟಿ ಮಾಡಿದ ವ್ಯಕ್ತಿಯೊಡನೆ ಕೂಲಂಕುಷವಾಗಿ ಚರ್ಚಿಸುವುದು ಅವರ ಸಜ್ಜನಿಕೆ ಮೆರೆಸುವಂಥಹುದು. ಕಾಟಾಚಾರಕ್ಕೆ ಎನ್ನುವಂತೆ ಕಾರ್ಯಕ್ರಮಗಳಿಗೆ ಬಂದು ಹೋಗುವುದ ನಡುವೆಯೇ ಕಾಣಸಿಗುವ ತದ್ವಿರುದ್ಧ ವ್ಯಕ್ತಿ ಇವರು. ಸರಿಯಾದ ಸಮಯಕ್ಕೆ ತಲುಪುವುದು, ಪೂರ್ತಿಯಾಗಿ ತಮ್ಮನ್ನು ತಾವು ತೊಡಗಿಸಿಕೊಂಡು ಭಾಗವಹಿಸುವಿಕೆಯನ್ನು ಇವರು ಸಾಕಾರಗೊಳಿಸುತ್ತಾರೆ. ಇಂದಿಗೂ ಈ ವಿಶಿಷ್ಟತೆಯನ್ನು ಅವರಲ್ಲಿ ಕಾಣಬಹುದು.

ಇಲ್ಲಿ ನನ್ನ ಸ್ವಂತ ಅನುಭವದ ಸ್ಮರಣೆ ಎಂದರೆ, ಮದುವೆಯೊಂದಕ್ಕೆ ಮಲ್ಲೇಶ್ವರದಲ್ಲಿನ ಕಲ್ಯಾಣ ಮಂಟಪಕ್ಕೆ ನನ್ನ ಸಹೋದ್ಯೋಗಿಯೊಂದಿಗೆ ಹೋಗಿದ್ದೆ. ಅಲ್ಲಿ ಮುಂದಿನ ಸಾಲಿನಲ್ಲಿ ಶ್ರೀನಿವಾಸರಾವ್ ಕುಳಿತಿದ್ದರು. ಮದುವೆಯ ಜನಜಂಗುಳಿಯ ನಡುವೆಯೇ ಹೋಗಿ ಅವರಿಗೆ ವಂದಿಸಿದೆ. ಆ ಗದ್ದಲದ ನಡುವೆಯೂ ಅವರು ನನ್ನ ಹೆಸರು ಕೇಳಿ "ಏನು ಮಾಡಿಕೊಂಡಿದ್ದೀರ? ನೀವು ಕೆಲಸ ಮಾಡುವ ಬ್ಯಾಂಕು ಹೇಗೆ ನಡೆಯುತ್ತಿದೆ? ಇಂದಿನ ಪೈಪೋಟಿ ಪರಿಸ್ಥಿತಿಯನ್ನು ಹೇಗೆ ನಿಭಾಯಿಸುತ್ತಿದ್ದೀರ" ಇತ್ಯಾದಿಗಳನ್ನು ವಿಚಾರಿಸಿದರು. ಅವರ ಅದ್ಭುತ ಸಂಯಮ, ಕಾಳಜಿ, ವಿಷಯ ಗ್ರಹಿಕೆ, ವ್ಯಕ್ತಿಯೊಂದಿಗೆ ಅವರು ಸ್ಪಂದಿಸುವ ರೀತಿ ಇವುಗಳು ನನಗೆ ಆ ಕೇವಲ ಐದಾರು ನಿಮಿಷಗಳಲ್ಲಿ ಉಂಟಾಯಿತು. ಇಂದಿಗೂ ಸಹ ಅವರೊಂದಿಗಿನ ಭೇಟಿ ಮೆಲಕು ಹಾಕುವಂಥಹುದು.

ಸ್ವಾತಂತ್ರ್ಯ ಪೂರ್ವದಿಂದಲೇ ಶ್ರೀನಿವಾಸರಾವ್ ಒಪ್ಪಿದ ಗಾಂಧೀವಾದ ಹಾಗೂ ಪಾಲಿಸಿದ ಖಾದಿ ಸಿದ್ಧಾಂತ ಈವರೆವಿಗೂ ತಮ್ಮ ಸರಳ ಜೀವನದಲ್ಲಿ ಅಳವಡಿಸಿಕೊಂಡಿರುವುದು ಅವರ ಲವಲವಿಕೆಗೆ ಕಾರಣವೇನೋ ಎನ್ನಿಸುತ್ತದೆ. ನಿರಾಡಂಬರದ ಆಕರ್ಷಣೆ ಎಂತಹವರನ್ನೂ ಶ್ರೀನಿವಾಸರಾಯರತ್ತ ಸೆಳೆಯುತ್ತದೆ. ಗಾಂಧೀಜಿ, ಜೆ.ಪಿ. ಯವರೇ ಮೊದಲಾದ ಶ್ರೇಷ್ಠ ವ್ಯಕ್ತಿಗಳ ಪ್ರಭಾವದ ಅಚ್ಚು ಅವರಲ್ಲಿ ಎದ್ದು ಕಾಣುತ್ತದೆ.

ಕನ್ನಡ ಸಾಹಿತ್ಯಲೋಕದ ದಿಗ್ಗಜರುಗಳಾದ ಶಿವರಾಮ ಕಾರಂತರು, ವಿ. ಸೀತಾರಾಮಯ್ಯ ರವರೇ ಮೊದಲಾದ ಸಾಹಿತಿಗಳ ಒಡನಾಟ, ಕೃತಿಗಳ ಅಧ್ಯಯನದೊಂದಿಗೆ ಶ್ರೀನಿವಾಸ ರಾವ್ ಅವರ ಜ್ಞಾನ ಭಂಡಾರ ಶ್ರೀಮಂತಗೊಂಡಿದೆ. ನ್ಯಾಯಾಂಗ, ಸಾಹಿತ್ಯ, ರಾಷ್ಟ್ರೀಯ ಚಿಂತನೆ, ಸಂಘಟನೆಗಳ ನಿರ್ವಹಣೆ, ಸಂಘ ಸಂಸ್ಥೆಗಳ ಜವಾಬ್ದಾರಿ-ಹೀಗೆ ಹಲವು ಕ್ಷೇತ್ರಗಳ ಅಪಾರ ಅನುಭವ ಅವರ ಲವಲವಿಕೆ ಜೀವನವನ್ನು ಗಟ್ಟಿಯಾಗಿಸಿದೆ.

ನೂರನೇ ವರ್ಷಕ್ಕೆ ಕಾಲಿಟ್ಟಿರುವ ನಿಟ್ಟೂರು ಶ್ರೀನಿವಾಸರಾವ್ ಅವರ ಜೀವನ ಕ್ರಮವೇ ಇಂದಿನ ಪೀಳಿಗೆಗೆ ಮಾದರಿ. ನಮ್ಮೊಂದಿಗೆ ಅವರು ಕಲೆತು ಅವರ ಅನುಭವಗಳನ್ನು ಹಂಚಿಕೊಳ್ಳುವುದೇ ಅವರು ನೀಡುವ ಅಮೂಲ್ಯ ಕೊಡುಗೆ. ಇದಕ್ಕೆ ಅವರು ತಮ್ಮ ವಯಸ್ಸಿನ ಕಾರಣವನ್ನು ಎಂದೂ ಪ್ರಾಯಶಃ ಕೊಟ್ಟಿರಲಾರರು, ಏಕೆಂದರೆ ವಯಸ್ಸಿಗೆ ಸವಾಲಾಕುವಂತಹ ಚಟುವಟಿಕೆಗಳುಳ್ಳ ದಿನಚರಿ ಅವರದು. ಹಾಗಾಗಿ ಈ ಶತಮಾನದ ಅಪರೂಪದ ವ್ಯಕ್ತಿ ನಿಟ್ಟೂರು ಶ್ರೀನಿವಾಸರಾವ್, ಅದರಲ್ಲೂ ಅವರು ನಮ್ಮ ಕನ್ನಡ ನಾಡಿನ ಹೆಮ್ಮೆಯ ಪ್ರತೀಕ.



# ನಿಟ್ಟೂರು; ನೀಟು, ಸ್ವೀಟು, Chat.....ಊ....

✍ ಬಿ.ಕೆ. ಸುಮತಿ*

**ನೂ**ರರ ನಿಟ್ಟೂರರು, ಯಾವಾಗಲೂ ನೀಟು, ಎಲ್ಲದರಲ್ಲೂ ನೀಟು. ಅವರಿಗೆ ಸ್ವೀಟು ಇಷ್ಟ, ಯಾವುದು ಅಂದ್ರಾ? ಸೋಹನ್ ಪಾಪಡಿ, ಗುಳ್ಳಪಾವಟೆ, ಚಿಗಳಿ, ಶ್ರೀಖಂಡ, ಅಯ್ಯೋ....ಅವರಿಗೆ ಯಾವ ಸ್ವೀಟು ಇಷ್ಟ ಇಲ್ಲ ಅಂತ ಕೇಳಿ. ಅದೂ ಹೇಳೋದು ಕಷ್ಟ.

ಈ ಸ್ವೀಟ್ and ನೀಟ್ ನಿಟ್ಟೂರರ ಜೊತೆ Chat ಮಾಡೋಣ ಅಂತ ಹೋದೆ. ಆಗ ಗೊತ್ತಾಯಿತು. ಈ ನೀಟ್ ನಿಟ್ಟೂರ್ ಬಹಳ Smart ಕೂಡ. ಮೊನ್ನೆ ಮೊನ್ನೆ ಸ್ವಲ್ಪ ಎಡವಿ ಬಿದ್ದು, ದೇಹಕ್ಕೆ ತೊಂದರೆ ಇತ್ತು. ಈಗ ಆರಾಮ್, ಅಂತ.

ಆರೋಗ್ಯ ಸರಿ ಇಲ್ಲದ ಸಂಬಂಧಿ ಚಂದ್ರಶೇಖರನನ್ನ ನೋಡೋಕೆ ಹೋಗ್ತಾರೆ, ಚಂದ್ರಶೇಖರನೇ ಅಲ್ಲ, ಯಾರಿಗೋ ಏನೋ ಆಗಿದೆ ಅಂದರೆ, ತಕ್ಷಣ ಮಿಡಿಯುವ ಮನಸ್ಸು. ಮನೆಯ ನಾಯಿಗೆ ಏನೋ ತೊಂದರೆ ಇದೆ ಎಂದರೂ, ಆಸ್ಪತ್ರೆಗೆ ಕರೆದುಕೊಂಡು ಹೋದೆಯಾ? ಚಿಕಿತ್ಸೆ ಮಾಡಿಸಿದೆಯಾ? ಡಾಕ್ಟರು ಏನು ಹೇಳಿದರು? ಪ್ರಶ್ನೆಗಳ ಸುರಿಮಳೆ.

'ಅಲ್ಲಾ, .....ನೂರು ವರ್ಷ ನಿಮಗೆ, ಸ್ವಲ್ಪ ರೆಸ್ಟ್ ತೊಗೊಳಿ. ಯಾಕೆ ಎಲ್ಲಾ ಹಚ್ಕೊಳ್ತೀರಿ? ಎಂದರೆ, ಅರೆ,.. ನೂರು ಏನು ಮಹಾ? ಹತ್ತರ ಪಕ್ಕ ಒಂದು ಸೊನ್ನೆ ಅಷ್ಟೆ.

---

* ನಂ. ೪೪, ೯ನೇ ಅಡ್ಡರಸ್ತೆ, ೫ನೇ ಮುಖ್ಯರಸ್ತೆ
ಗಿರಿನಗರ ೩ನೇ ಹಂತ, ಬನಶಂಕರಿ ೩ನೇ ಹಂತ, ಬೆಂಗಳೂರು

ಸೊನ್ನೆ ಕಂಡು ಓಡಿದಿದ್ರಿಂದ ನೂರು ಅಂತೀರಿ, ಇಲ್ಲವಾದರೆ ಒಂದೇ....ಅಲ್ಲವೇ?' ಅಂತ ತಮಾಷೆ ಮಾಡ್ತಾರೆ.

ಫೋನಿನ ಕರೆಗಂಟೆ ಉತ್ತರಿಸಲು ಈ ಫಾಸ್ಟ್ ತಾತ ಸಿದ್ಧ. ಮಾತಾಡೋದೇ ತುಂಬ ಪ್ರೀತಿ. ಫೋನ್ ಅಂದ್ರೆ... ಬೇಜಾರು, ಸಮಯ ಹಾಳು ತೊಂದರೆ, ಅಂತ ಕರೆಯನ್ನು ಸ್ವೀಕರಿಸದೆ, ಕೂತ ಸ್ಥಳದಲ್ಲೇ ಕುಳಿತಿರುವ ಯುವಕರು ನಾಚಿಕೋಬೇಕು. ಫೋನ್‌ನಲ್ಲಿ ಸಂಭಾಷಣೆ ಮಾಡೋದನ್ನ ಇವರಿಂದ ಕಲೀಬೇಕು. ಎಷ್ಟು ಚಿಕ್ಕದಾಗಿ, ಚೊಕ್ಕವಾಗಿ, ಚೆನ್ನಾಗಿ ಮಾತಾಡಬಹುದು ಅನ್ನೋದನ್ನ ಅರ್ಥ ಮಾಡಿಕೋಬೇಕಾದರೆ, ಒಮ್ಮೆ Phone ಮಾಡಿ ನೋಡಿ. ಪ್ರತಿ ಕರೆಯನ್ನೂ ಅಕ್ಕರೆಯಿಂದ ಸ್ವೀಕರಿಸುತ್ತಾರೆ. ಎಂಥ ವಿನಯ ಅಂತೀರಿ.

'ಅಲ್ಲಾ ಸಾರ್.... ನೀವು ದೊಡ್ಡವರು. ನೀವು ಹೇಳಿದ ಹಾಗೆ ನಾವು ಕೇಳಬೇಕು. ನೀವು ನಮಗೆ ನಮಸ್ಕಾರ ಹೇಳಬಾರದು. ಅಲ್ಲವೇ' ಎಂದರೆ, ಹೇಳ್ತಾರೆ..... 'ನಿಮಗ್ಗೊತ್ತಿಲ್ಲ, ಮಾತೃದೇವೋಭವ... ಪಿತೃದೇವೋಭವ...ಇದೆಲ್ಲಾ ಇರೋ ಹಾಗೆ, "ನಮೋ ಅರ್ಭಕೇಭ್ಯ" ಅಂತನೂ ಹೇಳಿದೆ. ಹಾಗಂದ್ರೆ, ಚಿಕ್ಕವರಿಗೂ ನಮಸ್ಕಾರ ಅಂತ. ಗುರುವೂ ಶಿಷ್ಯನಿಂದ ಕಲೀತಾನೆ, ದೊಡ್ಡವರು, ಚಿಕ್ಕವರಿಂದ ಕಲೀತಾರೆ. ದೊಡ್ಡವರ ವಿಚಾರಗಳು ಸರಿಯೇ, ತಪ್ಪೇ ಎಂದು ತಿಳಿಯೋದು ಚಿಕ್ಕವರಿಂದಲೇ. ನಮಸ್ಕಾರ ಯಾರು ಯಾರಿಗೂ ಹೇಳಬಹುದು'.

ಒಟ್ಟಿನಲ್ಲಿ ಈ ನೂರ್ ನಿಟ್ಟೂರರಿಗೆ, ಪ್ರತ್ಯುತ್ತರ ಹೇಳಲು ಸಾಧ್ಯವಿಲ್ಲ. ಅವರೊಂದಿಗೆ ಮಾತನಾಡುತ್ತಿದ್ದರೆ, ಗಡಿಯಾರ ಅಲ್ಲ, Calendar ನೋಡಬೇಕು, ಹೊತ್ತು ಹೋಗುವುದೇ ತಿಳಿಯುವುದಿಲ್ಲ. ಏನೇ ಕೇಳಿದರೂ ಉತ್ತರ ರೆಡಿ.

ಶಿವರಾಮ ಕಾರಂತರ ಬಾಲ ಪ್ರಪಂಚದಿಂದ, ಇತ್ತೀಚಿನ ಜಿ.ವಿ. ಅಯ್ಯರ್ ಬಗೆಗಿನ ಪುಸ್ತಕದವರೆಗೂ ಹೇಳುತ್ತಾರೆ. ಗಾಂಧೀಜಿ ಜೊತೆ ಮಾತಾಡಿದ್ದು, ಓಡಾಡಿದ್ದು, ಗಾಂಧೀಜಿ ಯವರ ಪುಸ್ತಕವನ್ನು ಅನುವಾದಿಸಿದಾಗ ಪ್ರಕಟಣೆಗೆ ಕಷ್ಟಪಟ್ಟಿದ್ದು, ಇದೆಲ್ಲಾ ನಿನ್ನೆ ನಡೆಯಿತೇನೋ ಎನ್ನುವ ಹಾಗೆ ವರ್ಣಿಸುತ್ತಾರೆ.

ಪುಸ್ತಕ ಓದೋದು, ಪ್ರಕಟಿಸೋದು ಅವರಿಗೆ ಬಹಳ ಪ್ರೀತಿಯ ಕೆಲಸ. ಚಿಕ್ಕವರಾಗಿ ದ್ದಾಗ, ಶಾಲೆಯಲ್ಲಿ ಯಾವಾಗಲೂ ಮೊದಲ ದರ್ಜೆ ತೇರ್ಗಡೆ, ಅಂದ ಹಾಗೆ ನಿಟ್ಟೂರರು ಇಷ್ಟು ಹೊತ್ತಿಗೆ, ಜಗತ್ತಿನ ದೊಡ್ಡ ವಿಜ್ಞಾನಿಯಾಗಿರಬೇಕಾಗಿತ್ತು. ಅವರಿಗೆ ವಿಜ್ಞಾನ ಓದಬೇಕೆಂಬ ಅಭಿಲಾಶೆ ಬಹಳವಾಗಿ ಎಲ್ಲವೂ ಅಣಿಯಾಗಿತ್ತು. ಆದರೆ ಆರೋಗ್ಯ ಕೈ

ಕೊಟ್ಟಿತಲ್ಲ? ವಿಜ್ಞಾನವಾದರೆ ಪೂರ್ಣ ತರಗತಿಗಳನ್ನು ಕಾಣಬೇಕು, ಪ್ರಯೋಗಕ್ಕೆ ಹಾಜರಾತಿ ಬೇಕೇ ಬೇಕು. ಆರೋಗ್ಯ ಸರಿ ಇಲ್ಲ. ಪರೀಕ್ಷೆ ತೆಗೆದುಕೊಳ್ಳಬೇಡ ಎಂಬ ಸಲಹೆ ಹಿರಿಯರಿಂದ.

ಆದರೆ ಇಂಥ ಮೊದಲಶ್ರೇಣಿ ವಿದ್ಯಾರ್ಥಿ ಮನೆಯಲ್ಲಿ ಕುಳಿತು, ಸಮಯ ವ್ಯರ್ಥ ಮಾಡುತ್ತಾನೇನು? ಕಾನೂನು ಓದುತ್ತೇನೆ ಎಂದು ಕಾಲೇಜು ಸೇರಿದರು. ಆರೋಗ್ಯದ ತೊಂದರೆಯಿಂದ, ಕಾಲೇಜಿಗೆ ನಿಯಮಿತವಾಗಿ ಹೋಗದೆ ಇದ್ದರೂ ಪ್ರಥಮ ದರ್ಜೆಯಲ್ಲಿ ತೇರ್ಗಡೆಯಾದರು. ಯಾವುದನ್ನು ಮಾಡಿದರೂ ಶ್ರದ್ಧೆಯಿಂದ ಮಾಡಬೇಕು. ಎನ್ನುವ ಅವರ ನೀತಿ ಅವರನ್ನು ನ್ಯಾಯಮೂರ್ತಿಯನ್ನಾಗಿ ಮಾಡಿತು.

ಅವರಿಗೆ ಜೀವನದಲ್ಲಿ ಅತ್ಯಂತ ಬೇಸರದ, ದುಃಖದ ದಿನಗಳು ಎಂದರೆ, ವಿಜ್ಞಾನ ಓದಲಾಗದಿದ್ದ, ಆರೋಗ್ಯ ಕೆಡುತ್ತಿದ್ದ ಆ ದಿನಗಳು ಅಂತ ನೆನಪಿಸಿಕೊಳ್ಳುತ್ತಾರೆ.

ನಿಟ್ಟೂರರು ಬಾಲ್ಯದಲ್ಲೇ ತಾಯಿಯನ್ನು ಕಳೆದುಕೊಂಡರು. ತಂದೆಗೆ ವರ್ಗಾವಣೆ ಆಗುತ್ತಿದ್ದ ಕೆಲಸ. ಇವರಿಗೆ ಮಾರ್ಗದರ್ಶನ ನೀಡುತ್ತಿದ್ದದ್ದು ಸೋದರಮಾವ. ಲಾ ಕಾಲೇಜಿನಲ್ಲಿ ಪ್ರತಿಭಾವಂತ ವಿದ್ಯಾರ್ಥಿ ಎಂಬ ಮನ್ನಣೆಗೆ ಪಾತ್ರರಾದರು. ಒಳ್ಳೆ ಹೆಸರು ಬಂದಿತು. ಪದವಿ ನಂತರ, ಸ್ವಂತ ಆಫೀಸನ್ನ ತೆರೆದರು. ಆಮೇಲೆ ನಡೆದದ್ದು ನಿಮಗೆ ಗೊತ್ತು. ಸರಳ ಜೀವನ, ನ್ಯಾಯ ನಿಷ್ಠುರತೆ, ವೃತ್ತಿಪ್ರೀತಿ ಇವರನ್ನು ಎತ್ತರಕ್ಕೆ ಕರೆದುಕೊಂಡು ಹೋಯಿತು.

ನಿಟ್ಟೂರರು, ಅಷ್ಟು ಎತ್ತರದಲ್ಲಿದ್ದರೂ, ಬಗ್ಗಿ ಬಾಗಿ ಕೆಳಗೆ ನೋಡಬಲ್ಲರು. ಕಷ್ಟವನ್ನು ಅರಿತವರು. ಅವರು, ನೂರರ ನಿಟ್ಟೂರರು, ದೊಡ್ಡವರು, ಎಂದು ಬಹಳ ಗೌರವ ಭಕ್ತಿ, ವಿನಯಗಳನ್ನು ತೋರಿದರೆ, ಅದೆಲ್ಲವನ್ನೂ ಒಂದೇ ನಿಮಿಷದಲ್ಲಿ ಹೋಗಲಾಡಿಸಿ, “ನೀನು ನನ್ನ ಸ್ನೇಹಿತ” ಎಂಬ ಭಾವನೆ ಬರುವ ಹಾಗೆ ಮಾಡುತ್ತಾರೆ,

ಸ್ನೇಹ, ಸಲುಗೆಯಿಂದ ಸ್ವಲ್ಪ ಸಮಯವನ್ನು ಇವರೊಂದಿಗೆ ಕಳೆದದ್ದು ನನ್ನ ಭಾಗ್ಯ. ಸ್ವಲ್ಪ ತಮಾಷೆಯಾಗಿ, ಸ್ವಲ್ಪ ಗಂಭೀರವಾಗಿ, ಹಾಯಾಗಿ, ಲಘುವಾಗಿ, ಮಾತನಾಡಿದ ಆ ರಸನಿಮಿಷಗಳನ್ನು ಇಲ್ಲಿ ದಾಖಲಿಸುತ್ತಿದ್ದೇನೆ. ಅವರ ಬಗ್ಗೆ ನೂರಾರು ಮಾತು ಬರೆಯುವುದಕ್ಕಿಂತ ಅವರ ಅಂತರಾಳದ ಈ ಮಾತುಗಳನ್ನು ನೋಡಿದರೆ, ನೀವೇ ಅವರೊಂದಿಗೆ ಮಾತನಾಡುತ್ತಿದ್ದೀರಿ ಎನಿಸಬಹುದು.

- ಏನು ಕೇಳಿದರೂ ಉತ್ತರ ಕೊಡ್ತೀರಾ?

**ನೀವೇನೇ ಕೇಳಿದರೂ ನನಗೆ ಗೊತ್ತಿರೋದೇ ಅಲ್ವಾ ಹೇಳೋಕೆ ಆಗೋದು.**

- ನಿಮಗೆ ತುಂಬ ಕೋಪ ಬರುತ್ತಾ?
  **ಕೋಪ ಯಾರಿಗಿರಲ್ಲ? ಕೋಪದಿಂದ ಅನರ್ಥ ಆಗಬಾರದು ಅಷ್ಟೆ. ಹಾಗೆ ನಾನೆಂದೂ ಮಾಡಿಲ್ಲ. ಚಿಕ್ಕಂದಿನಿಂದ ತಾಳ್ಮೆ ರೂಢಿಸಿಕೊಂಡಿದ್ದೇನೆ.**

- ನಿಮಗೆ ತುಂಬಾ ನಿರಾಸೆಯ ಕ್ಷಣಗಳು?
  **ವಿಜ್ಞಾನ ಓದಲಿಲ್ಲ ಅನ್ನೋದು, ತಾಯಿ ಇಲ್ಲದ ಕೊರಗು.**

- ನ್ಯಾಯದ ಬಗ್ಗೆ ನಿಮ್ಮ ವ್ಯಾಖ್ಯಾನ ?
  **ಮನುಷ್ಯ Law ಸಹಾಯ ಕೇಳಬಾರದು. ಆದರೆ ನ್ಯಾಯವಾಗಿರಬೇಕು. 'What is right, What is wrong ಅಂತ ತಿಳ್ಕೋಳೋದೇ ನ್ಯಾಯ.**

- ಮೌಲ್ಯಗಳು, ಪ್ರಾಮಾಣಿಕತೆ, ಕಡಿಮೆ ಆಗ್ತಾ ಇದೆ ಅಂತೀವಲ್ಲ, ಯಾಕೆ ಮತ್ತು ಹೇಗೆ? ನಾವು ಯಾವುದನ್ನ ಮೌಲ್ಯ ಅಂತೀವಿ. ಅನ್ನೋದು ಮುಖ್ಯ, ನಮ್ಮ ನಡವಳಿಕೆಗಳೇ ಮೌಲ್ಯ. Corruption ತುಂಬಾ ಹೆಚ್ಚಾಗಿದೆ. ಪ್ರಾಮಾಣಿಕ ವ್ಯಕ್ತಿಗೇ ತೊಂದರೆಗಳು ಜಾಸ್ತಿ. (ಸ್ವಲ್ಪ ಯೋಚಿಸಿ)
  **ಇದಕ್ಕೆಲ್ಲ ಆಸೆನೇ ಕಾರಣ. ಈಗ ಎಲ್ಲರಿಗೂ ಒಳ್ಳೆ ಗುರಿಗಿಂತ, ಆಸೆ ಹೆಚ್ಚಾಗಿದೆ.**

- ಸ್ವಾರ್ಥ ಎಲ್ಲಿಯವರೆಗೂ ಚೆಂದ?
  **ಅವಶ್ಯಕತೆಗಿಂತ ಹೆಚ್ಚು ಏನಿದ್ದರೂ ಅದೆಲ್ಲ ಸ್ವಾರ್ಥ.**

- ನಿಸ್ವಾರ್ಥ ಎಂದರೆ?
  **ಇತರರಿಗೆ ಅನುಕೂಲ ಮಾಡುವುದೇ ನಿಸ್ವಾರ್ಥ.**

- ಚಿಕ್ಕವರು ಹೇಗಿರಬೇಕು? ಏನು ಹೇಳ್ತೀರಿ?
  **ನೀವು ತುಂಬಾ ಬುದ್ಧಿವಂತರು, ನಾವು ನಿಮ್ಮಿಂದ ಕಲಿಯುವುದು ಬಹಳ ಇದೆ.**

- ಆ ಕಾಲ......ಈ ಕಾಲ....?
  **ಏನು ಹೇಳೋದು ? ಆಗ ಬೆಂಗಳೂರಲ್ಲಿ ೪೦-೫೦ ಕಾರುಗಳಿದ್ದವು. ಸಂಜೆ ಲಕ್ಷ್ಮಿ ಬರ್ತಾಳೆ ಅಂತ ಬಾಗಿಲು ತೆಗೆದು ಕುಳಿತುಕೊಳ್ಳುತ್ತಿದ್ದೆವು. ಯಾವುದಕ್ಕೂ ರಕ್ಷಣೆ ಬೇಕಾಗಿರಲಿಲ್ಲ. ಕಳ್ಳತನದ ಭಯ ಇರಲಿಲ್ಲ. ಈಗ ತೊಂದರೆಗಳೂ ಇದೆ. ಅಭಿವೃದ್ಧಿಯೂ ಇದೆ.**

- ಬಿಡುವಿನ ಸಮಯ?
  **ಬಿಡುವಿದ್ದರೆ ತಾನೆ? ಪುಸ್ತಕಗಳು ಅಂದರೆ ಬಹಳ ಇಷ್ಟ. ಓದ್ತೀನಿ, ಸಂಗೀತ ಕೇಳ್ತೀನಿ, ಸಭೆ, ಸಮಾರಂಭಗಳಿಗೆ ಹೋಗ್ತೀನಿ.**

- ಯಾರ ಸಂಗೀತ, ಯಾವ ಸಂಗೀತ ಇಷ್ಟ?

  **ಆಗ ಸೈಗಲ್ ಹಾಡುಗಳನ್ನೂ ಕೇಳ್ತಾ ಇದ್ದೆ, ಈಗ ಹೆಚ್ಚಾಗಿ ಶಾಸ್ತ್ರೀಯ ಸಂಗೀತ ಕೇಳ್ತೀನಿ, ಎಂ.ಎಸ್.ಶೀಲ, ಆರ್.ಕೆ. ಶ್ರೀಕಂಠನ್, ಬಾಲಮುರಳೀಕೃಷ್ಣ, ಎಂ.ಎಸ್. ಸುಬ್ಬುಲಕ್ಷ್ಮಿ ಸಂಗೀತ ಕೇಳ್ತೀನಿ. Fusion ಸಂಗೀತ ಕೂಡ ಕೇಳ್ತೀನಿ. ಚೆನ್ನಾಗಿರುತ್ತೆ ಆ ಸಂಗೀತ, ಈ ಸಂಗೀತ ಅಂತ ಇಲ್ಲ, ಕೋಗಿಲೆಗೆ ಇದು ಹೀಗೆ ಅಂತ ಯಾರಾದರೂ ಶಾಸ್ತ್ರ ಹೇಳಿದಾರಾ? Mind open ಇರಬೇಕು. ಎಲ್ಲವನ್ನೂ ತೂಗೋಬೇಕು. ಅದು-ಹೆಚ್ಚು, ಇದು ಹೆಚ್ಚು ಜಗಳ ಬೇಡ.**

ಸದಾ ಚಿಂತನಶೀಲ ನಿಟ್ಟೂರರಿಗೆ ಅಗಾಧ ನೆನಪಿನ ಶಕ್ತಿ. ಎಲ್ಲರನ್ನೂ ತನ್ನಂತೆ ಕಾಣುವ ಸಹೃದಯಿ, ಸ್ನೇಹಮಯಿ. ಈ ಹಿರಿಯರಿಗೆ ಆರು ಜನ ಮೊಮ್ಮಕ್ಕಳು. ಹನ್ನೆರಡು ಜನ ಮರಿಮಕ್ಕಳು.

ಈತ ನಗು ನಗುತ್ತಾ ಹೇಳುವುದೇನು ಗೊತ್ತೆ?

**"ನನಗೆ Generation gap ಅಂದರೆ ಗೊತ್ತಿಲ್ಲ, ಎಂದೂ ಅದರ ಅನುಭವ ಆಗಿಲ್ಲ"**

ನಿಟ್ಟೂರರೊಂದಿಗಿನ ಮಾತು ಮುಗಿಯುವುದೇ ಇಲ್ಲ, ಸಾಗರದಾಳದಿಂದ ಬೊಗಸೆ ನೀರನ್ನು ಎತ್ತಿದ ಹಾಗೆ.

Sweet, Neat, Smart, ಶ್ರೀನಿವಾಸರಾಯರಿಗೆ Hearty ನಮನ. ಒಮ್ಮೆ ನೀವೂ Chat ಮಾಡಿ, ನಾನು ಹೇಳಿದ್ದೆಲ್ಲ ನಿಜವೆಂದು ನಿಮ್ಮ ಅನುಭವಕ್ಕೂ ಬರುತ್ತದೆ.



# ನಿಟ್ಟೂರು

. . . . . . . . . . . . . . . . . . . . . . . . ✍ *ಎಸ್. ವಿಜಯ ಶಂಕರ್**

ನಿಟ್ಟೂರು ಶ್ರೀನಿವಾಸರಾಯರನ್ನು ಕುರಿತಂತೆ ನನ್ನ ಬಾಲ್ಯದ ನೆನಪುಗಳು ಐವತ್ತರ ಉತ್ತರಾರ್ಧ-ಅರುವತ್ತರ ಆರಂಭಕ್ಕೆ ಹೋಗುತ್ತವೆ. ಎತ್ತರದ, ಪೆನ್ಸಿಲ್‌ತರಹ ತೆಳುವಾದ ನಿಲುವಿನಲ್ಲಿ, ಗರಿಗರಿಯಾದ ಇಸ್ತ್ರಿ ಮಾಡಿದ ಬಿಳಿ ಪೇಟ, ಮೈಸೂರು ಶೈಲಿಯಲ್ಲಿ ಉಟ್ಟ ಶುಭ್ರ ಖಾದಿ ಧೋತಿ ಮತ್ತು ಕಪ್ಪುಕೋಟಿನ ಉಡುಗೆ-ತೊಡುಗೆಯ ವ್ಯಕ್ತಿತ್ವ ಅವರದು. ಉತ್ತಮ ಪ್ರಾಕ್ಟೀಸ್ ಇರುವ ಪ್ರೌಢಲಾಯರಾದ ಅವರ ಚೇಂಬರು, ಕೋಟೆ ಆಂಜನೇಯ ದೇವಸ್ಥಾನದ ಪಕ್ಕದಲ್ಲೇ ಇದ್ದಿತು. ನಿಕಟ ಸ್ನೇಹಿತರಲ್ಲಿ ನಿಟ್ಟೂರು ಎಂದೆ ಹೆಸರಾದ ಶ್ರೀಯುತರು, ಅವರ ಆತ್ಮೀಯರಲ್ಲಿ ನಮ್ಮ ತಂದೆಯೂ ಒಬ್ಬರು, ಅನೇಕ ಜೂನಿಯರ್‌ಗಳನ್ನು ಹೊಂದಿದ್ದರು. ಆಗ ಹೆಚ್ಚಿನ ಖ್ಯಾತ ನಾಮರೆಂದರೆ ಜಸ್ಟಿಸ್ ಕೆ.ಆರ್. ಗೋಪಿವಲ್ಲಭ ಅಯ್ಯಂಗಾರ್ ಮತ್ತು ಶ್ರೀಯುತರುಗಳಾದ ಪಡುಬಿದ್ರಿ ರಾಘವೇಂದ್ರರಾವ್, ಎಂ.ಎಸ್. ಗೋಪಾಲ್, ಎ.ಆರ್. ಶ್ರೀನಿವಾಸರಾವ್ ಮತ್ತು ಸಿ. ಲಕ್ಷ್ಮಿನಾರಾಯಣರಾವ್, ಎಲ್ಲರೂ ಬೆಂಗಳೂರು ಬಾರ್ ಅಸೋಸಿಯೇಶನ್ನಿನ ಪ್ರಮುಖ ಸದಸ್ಯರು ನಾನು ವಿದ್ಯಾರ್ಥಿಯಾಗಿದ್ದಾಗ ನಮ್ಮ ತಂದೆಯರೊಮ್ಮೆ ನನ್ನನ್ನು ನಿಟ್ಟೂರುರ ಚೇಂಬರಿಗೆ ಕರೆದೊಯ್ದಿದ್ದರು. ಅಲ್ಲಿ ಅನೇಕ ಫೈಲುಗಳು, ಲಾ

---

* ಲೇಖಕರು ಮುಖ್ಯ ನ್ಯಾಯಾಧೀಶ ಎಂ. ಸದಾಶಿವಯ್ಯ ಅವರ ಪುತ್ರರೂ ಹಿರಿಯ ನ್ಯಾಯವಾದಿಗಳೂ ಮತ್ತು ಕರ್ನಾಟಕದ ಮಾಜಿ ಅಡ್ವೊಕೇಟ್ ಜನರಲ್ ಆಗಿದ್ದಾರೆ.

೨೩, ಸ್ಯಾಂಕಿ ರೋಡ್ ಕ್ರಾಸ್, ಬೆಂಗಳೂರು - ೫೬೦೦೫೨

ಜರ್ನಲ್‌ಗಳು, ಜೂನಿಯರ್‌ಗಳು ಮತ್ತು ಕಕ್ಷಿದಾರರು ಇದ್ದದ್ದು ನನ್ನ ನೆನಪು. ಅದು ಆಗ ಹಳೆಯದಾದ ಕಾನೂನಿಗೆ ಮೀಸಲಿರಿಸಿದ, ಗಂಟೆ ಗಂಟೆಗಳ ಮೇಲೆ ಕಟ್ಟಿದ ಪ್ರಜ್ಞಾಶಾಲಿಯ ಕ್ಲಿನಿಕ್ ನಂತಿತ್ತು.

ನಿಟ್ಟೂರರು ಅಡ್ವೊಕೇಟ್ ಜನರಲ್ ಆಗಿದ್ದಾಗ ನನ್ನ ತಂದೆ ಕಾನೂನು ಕಾರ್ಯದರ್ಶಿಗಳಾಗಿದ್ದರು. ಆ ಅವಧಿಯಲ್ಲಿ ಜಸ್ಟಿಸ್ ನಿಟ್ಟೂರರ ಘನ ಸಮ್ಮುಖದಲ್ಲಿ ಹಾಜರಿ ಇರುವ ಅನೇಕ ಅವಕಾಶಗಳು ನನಗೆ ದೊರಕಿದ್ದವು.

ಅವರ ಸರಳತೆ ಮತ್ತು ಆಡಂಬರವಿಲ್ಲದ ನಡತೆ ನನ್ನ ನೆನಪಿನಲ್ಲಿ ಶಾಶ್ವತವಾಗಿ ಸೇರಿಕೊಂಡಿವೆ. ನ್ಯಾಯಾಧೀಶರಾಗಿ ಮತ್ತು ಮೈಸೂರು ಉಚ್ಚ ನ್ಯಾಯಾಲಯದ ಮುಖ್ಯ ನ್ಯಾಯಮೂರ್ತಿಗಳಾಗಿದ್ದಾಗ ಅವರ ಸೇವಾ ಜೀವನವು ಕಾನೂನು ಪ್ರತಿಭೆಯ ಪರಾಕಾಷ್ಠೆಯನ್ನು ಮುಟ್ಟಿದ್ದಿತು.

ತಲೆಮಾರುಗಳಿಗಾಗಿ ಕಾನೂನು ಪತ್ರಿಕೆಗಳನ್ನು ಅಲಂಕರಿಸಿದ ಅವರ ಪ್ರಭುತ್ವದಪ್ರಭು (ಲಾರ್ಡ್‌ಸಿಪ್) ತೀರ್ಪುಗಳು ಆಳವಾದ ಅಧ್ಯಯನ, ಸ್ಪಷ್ಟತೆ, ವಿಶ್ಲೇಷಣೆ, ನಿರುದ್ವಿಗ್ನತೆ ಮತ್ತು ಸೊಗಸಾದ ಗದ್ಯ ಬರವಣಿಗೆಗಳಿಗಾಗಿ ವೈಶಿಷ್ಟ್ಯಪೂರ್ಣವಾಗಿವೆ.

೧೯೬೩ರ ಆಗಸ್ಟ್ ೭ರಂದು ಬಾರ್ ಬೀಳ್ಕೊಡುಗೆ ಭಾಷಣದಲ್ಲಿ ಅವರನ್ನು ಕುರಿತು, “ಈ ದೇಶದ ಮಹಾನ್ ನ್ಯಾಯಾಧೀಶರುಗಳ ಸಾಲಿನಲ್ಲಿ ನಿಮಗಾಗಿ ನೀವೊಂದು ಜಾಗವನ್ನು ಗಳಿಸಿದ್ದೀರಿ” ನಿಮ್ಮ ಸರಳ ಮತ್ತು ಮುಚ್ಚು ಮರೆ ಇಲ್ಲದ ನಡತೆಯ ಮತ್ತು ಎಲ್ಲರ ವಿಚಾರದಲ್ಲಿ ಹೊಂದಿರುವ ದಯಾಪರತೆಯು ಒಬ್ಬೊಬ್ಬರಿಗೂ ಮತ್ತು ಎಲ್ಲರಿಗೂ ನೀವು ಪ್ರೀತಿ ಪಾತ್ರರಾಗುವಂತೆ ಮಾಡಿದೆ” ಈ ಹೆಗ್ಗಳಿಕೆಗೂ ಇಂದಿನ ಸಾಮಾಜಿಕ ಮೌಲ್ಯಗಳಿಗೆ ಅಥವಾ ಅದರ ಕೊರತೆಗೆ ಎಂಥ ವೈದೃಶ್ಯ?

ಪ್ರಖ್ಯಾತ ಗವರ್ನರ್‌ರಾಗಿದ್ದ ಅವರಿಗೆ ಕಳೆದ ಆಗಸ್ಟ್‌ನಲ್ಲಿ ಜನ್ಮದಿನಕ್ಕೆ ನಾನು ಶುಭಾಶಯ ಕೋರಿದಾಗ ‘ನಿಮ್ಮ ತಾಯಿ ಹೇಗಿದ್ದಾರೆ?’ ಎಂದು ಅವರು ಪ್ರತಿಕ್ರಿಯಿಸಿದ್ದರು. ತಮ್ಮ ಜನ್ಮದಿನದಂದೂ ಸಹ ಅವರಿಗೆ ಇತರರ ಬಗ್ಗೆ ಕಾಳಜಿ! ಶತಮಾನವೊಂದರ ಪುಟಗಳಿಂದ ಬೇರ್ಪಟ್ಟಂತಿರುವ ಅವರ ಸುಸಂಸ್ಕೃತ ಮತ್ತು ಪರಿಶುದ್ಧವಾದ ಜ್ಞಾನವನ್ನು ಗೌರವಿಸುವ ವ್ಯಕ್ತಿತ್ವವು ಇಂದಿನ ತರುಣರಿಗೆ ಅನುಸರಿಸಲು ಮಾದರಿಯ ಪಾತ್ರವಾಗಿದೆ.

*ಇಂಗ್ಲಿಷ್ ಮೂಲ : **ಎಸ್. ವಿಜಯಶಂಕರ್***

*ಕನ್ನಡಕ್ಕೆ : **ಡಾ. ಸುರೇಶ್ ಪಾಟೀಲ***

# ಕನ್ನಡಿಗರ "ಭೀಷ್ಮ"

. . . . . . . . . . . . . . . . . . . . ✍ ಡಾ|| ನಾಗರಾಜ್ ನೀರಗುಂದ*

ನ್ಯಾಯಮೂರ್ತಿ ಡಾ|| ನಿಟ್ಟೂರು ಶ್ರೀನಿವಾಸರಾಯರು ಪ್ರಸ್ತುತ ನೂರು ವಸಂತಗಳನ್ನು ದಾಟಿದ್ದಾರೆ. ಪ್ರೊ|| ಎ.ಎನ್. ಮೂರ್ತಿರಾಯರು ಸಹ ಶತಾಯುಷಿಗಳು, ಅವರೊಂದಿಗೆ ಈಗ ಆ ಕೀರ್ತಿಯನ್ನು ಹಂಚಿಕೊಂಡಿರುವವರು ನಿಟ್ಟೂರು ಶ್ರೀನಿವಾಸರಾಯರು. ಇಂತಹ ಮಹನೀಯರ ಸಮಕಾಲೀನ ರಾಗಿರುವುದೇ ಕನ್ನಡಿಗರ ಹೆಮ್ಮೆಯ ಸಂಗತಿಯಾಗಿದೆ. 'ನಿಟ್ಟೂರ'ರೆಂದೆ ಖ್ಯಾತವಾಗಿರುವ ಶ್ರೀನಿವಾಸರಾಯರ ಬದುಕು-ಸಾಧನೆಗಳು ಒಂದು 'ತೆರೆದ ಪುಸ್ತಕ' ಇದ್ದಂತೆ, ಪಟ್ಟಿ ಮಾಡಲು ಸಾಧ್ಯವಾಗದಂತಹ ವಿಪುಲವಾದ ಸಾಧನೆಗಳು. ಇವು ಮಾದರಿ ಹಾಗೂ ಆದರ್ಶಪ್ರಾಯವಾಗಿದ್ದು ಅನುಕರಿಸುವುದಕ್ಕೆ ಅರ್ಹವಾಗಿವೆ. ಶಾಲಾ-ಕಾಲೇಜುಗಳಲ್ಲಿ ಅಭ್ಯಾಸ ಮಾಡು ತ್ತಿದ್ದ ದಿನಗಳಿಂದಲೆ ಕನ್ನಡನಾಡು ನುಡಿಗಳ ಕೈಂಕರ್ಯಕ್ಕೆ ತಮ್ಮ ಬದುಕನ್ನು ತೊಡಗಿಸಿಕೊಂಡಿದ್ದಾರೆ. ಸುಮಾರು ಎಂಬತ್ತು ವರ್ಷಗಳಿಗಿಂತಲೂ ಹೆಚ್ಚಿನ ಕಾಲಾವಧಿಯ ಸೇವೆ ಯನ್ನು ನಿರಂತರವಾಗಿ ಹೀಗೆ ಮಾಡಿಕೊಂಡು ಬಂದ ಕನ್ನಡಿಗ ಮತ್ತೊಬ್ಬರಿಲ್ಲ ಅಥವಾ ತೀರ ವಿರಳ ಎಂದು ಹೇಳಿದರೆ ಅದು ವಾಸ್ತವಕ್ಕೆ ದೂರವಾದ ಮಾತಾಗುವುದಿಲ್ಲ. 'ಆಡು ಮುಟ್ಟದ ಗಿಡವಿಲ್ಲ, ಕಾರಂತ ಬರೆಯದ ಬರಹವಿಲ್ಲ' ಎಂಬ ನಾಣ್ನುಡಿ ನಮ್ಮಲ್ಲಿ ಪ್ರಚಲಿತವಾಗಿದೆ. ಅದರಂತೆ 'ಆಡುಮುಟ್ಟದ ಗಿಡವಿಲ್ಲ, ನಿಟ್ಟೂರರು ಸ್ಥಾಪಿಸದ ಸಂಘ ಸಂಸ್ಥೆಗಳಿಲ್ಲ' ಎಂಬ

---

* ನಂ. ೧೬, ೧೧ನೇ ಕ್ರಾಸ್, ರಾಘವೇಂದ್ರ ಬಡಾವಣೆ
ಪದ್ಮನಾಭನಗರ, ಬೆಂಗಳೂರು - ೫೬೦೦೭೦

ನನ್ನ ಅಭಿಪ್ರಾಯ ಉತ್ಪ್ರೇಕ್ಷೆ ಎನಿಸಿದರೂ ಸಹ ವಸ್ತುಸ್ಥಿತಿಗೆ ಸಮೀಪದ ಮಾತು ಎಂದು ಮಾನ್ಯ ಮಾಡಬಹುದಾಗಿದೆ. 'ನಾನು ಸಾಹಿತಿಯಲ್ಲ, ಸಾಹಿತ್ಯ ರಚನೆ ಮಾಡಲಿಲ್ಲ, ಆದರೆ ಸಾಹಿತಿಗಳ ಒಡನಾಟದಲ್ಲಿ ನಾನು ಬೆಳೆದೆ, ಅವರು ರಚಿಸಿದ ಕೃತಿಗಳನ್ನು ನಾನು ನಮ್ಮ ಸತ್ಯ ಶೋಧನಾ ಪ್ರಕಾಶನದಲ್ಲಿ ಪ್ರಕಟಿಸಿದ್ದೇನೆ,' ಎಂದು ನಿಟ್ಟೂರರು ಹೇಳಿದ್ದಾರೆ. ಡಿ.ವಿ.ಜಿ., ಮಾಸ್ತಿ, ಕಾರಂತ, ಅನಕೃ, ವಿಸೀ, ಗೊರೂರು ಮುಂತಾದ ಮೇರು ಸಾಹಿತಿಗಳ ಸ್ನೇಹ ಗೌರವಗಳಿಗೆ ಅವರು ಭಾಜನರಾಗಿದ್ದರು. ಇಂದಿನ ಸಾಹಿತಗಳೊಂದಿಗೆ ಈ ಒಡನಾಟವನನ್ನು ಮುಂದುವರಿಸಿಕೊಂಡು ಬಂದಿದ್ದಾರೆ.

೧೯೫೦ರ ದಶಕಾಂತ್ಯದಲ್ಲಿ ಅರಸೀಕೆರೆಯಲ್ಲಿ ನಾನು ಹೈಸ್ಕೂಲಿನ ವಿದ್ಯಾಭ್ಯಾಸಕ್ಕೆ ಸೇರಿದಾಗ ಎ.ಆರ್. ಕೃಷ್ಣಸ್ವಾಮಿ ರಾವ್ ಎಂಬ ಪ್ರಗತಿಪರ - ಪ್ರಯೋಗಶೀಲ ಮುಖ್ಯೋಪಾಧ್ಯಾಯರು ವರ್ಗವಾಗಿ ಬಂದರು. ಪ್ರತಿದಿನ ಶಾಲಾಪ್ರಾರ್ಥನೆಯಾದ ಮೇಲೆ ವಿದ್ಯಾರ್ಥಿಯೋರ್ವನಿಂದ ಆ ದಿನದ ವೃತ್ತ ಪತ್ರಿಕೆಯಿಂದ ಸಂಗ್ರಹಿಸಿದ ಗಮನಾರ್ಹ ಸುದ್ದಿ ಸಮಾಚಾರಗಳನ್ನು ಓದಿಸಿ, ಪತ್ರಿಕೆಯನ್ನು ನೋಡಲು ಸುತ್ತೋಲೆಯಂತೆ ಕಳಿಸುವ ವ್ಯವಸ್ಥೆಯನ್ನು ಕಟ್ಟು ನಿಟ್ಟಾಗಿ ಜಾರಿಗೆ ತಂದರು. ನಿಟ್ಟೂರು ಶ್ರೀನಿವಾಸರಾಯರ ಹೆಸರನ್ನು ಮೊದಲು ನಾನು ಕೇಳಿದ್ದ ಆ ಸಂದರ್ಭದಲ್ಲಿ; ಮತ್ತು ಕನ್ನಡಕ್ಕೆ ಸೂಟು ತೋಡಿಸಿದವರೆಂಬ ಕೀರ್ತಿಗೆ ಭಾಜನರಾಗಿರುವ 'ನಿಘಂಟು ಬ್ರಹ್ಮ' ಪ್ರೊ. ಜಿ. ವೆಂಕಟಸುಬ್ಬಯ್ಯನವರನ್ನು (ಕನ್ನಡ ಸಾಹಿತ್ಯ ಪರಿಷತ್ತಿನ ಆಗಿನ ಅಧ್ಯಕ್ಷರು) ಭಾವಚಿತ್ರಗಳನ್ನು ನೋಡುತ್ತಿದ್ದುದು ಸಹ ಆ ಸಂದರ್ಭದಲ್ಲಿ, ನಮ್ಮ ನೀರಗುಂದದ ಮನೆತನದ ಹಿರಿಯರಲ್ಲಿ ಹಲವರು ನ್ಯಾಯವಾದಿಗಳು. ದಾವಣಗೆರೆಯಲ್ಲಿ ಎನ್. ಸುಬ್ಬರಾಯರು, ಹೊಸದುರ್ಗ-ಹಿರಿಯೂರು ತಾಲ್ಲೂಕ್‌ಗಳಿಗೆ ಇಪ್ಪತ್ತಾರು ವರ್ಷಗಳು ನಿರಂತರವಾಗಿ ಎಂ.ಆರ್.ಎ. ಆಗಿದ್ದ ಬಿ.ವಿ. ನಾರಾಯಣರಾವ್, 'ಲಿವಿಂಗ್ ಲೆಜೆಂಡ್' ಆಗಿದ್ದ ಚಿತ್ರದುರ್ಗದ ಕ್ರಿಮಿನಲ್ ನ್ಯಾಯವಾದಿ ಚಿನಿವಾರ್ ಎಚ್.ಎಸ್. ವೆಂಕಟಾಚಲಯ್ಯ, ಹಿತಮಿತ ಮಾತು ಹಾಗೂ ಶಿಸ್ತಿನ ಎನ್.ಎಸ್. ಅಶ್ವತ್ಥನಾರಾಯಣರಾವ್, ತಿಪಟೂರಿನ ವಿಠ್ಠಲ ನರಸಿಂಹಯ್ಯ ತರೀಕೆರೆಯ ಎನ್. ಅನಂತ ಕೃಷ್ಣಪ್ಪ-ಹೀಗೆ ಒಂದು ದೊಡ್ಡ ಪಟ್ಟಿಯನ್ನೇ ಉಲ್ಲೇಖಿಸಬಹುದು. ಇವರುಗಳು ಆಡುತ್ತಿದ್ದ ಮಾತುಗಳಲ್ಲಿ ಪ್ರಾಸಂಗಿಕವಾಗಿ ನಿಟ್ಟೂರರ ಹೆಸರು ನಮಗೆ ಕೇಳಿಬರುತ್ತಿತ್ತು.

ಕರ್ನಾಟಕದ ಖ್ಯಾತ ಗಮಕಿಗಳಲ್ಲಿ ಓರ್ವರು, ಅಮೆಚ್ಯೂರ್ ರಂಗ ಕಲಾವಿದ ಹಾಗೂ ಕರ್ನಾಟಕದ ಉಪಕಾರ್ಯದರ್ಶಿಗಳಾಗಿದ್ದ ಶಿಕಾರಿಪುರದ ನಾಗೇಶರಾಯರು ೧೯೬೨ರಲ್ಲಿ ಏರ್ಪಡಿಸಿದ್ದ ಸಮಾರಂಭದಲ್ಲಿ ಬಂಧು ಮಿತ್ರರು ಜೇನುಗೂಡಿನಂತೆ ಅಪಾರವಾಗಿ

ಸೇರಿದ್ದರು. 'ನಿಟ್ಟೂರುರವರು ಬರುತ್ತಿದ್ದಾರೆ, ಅಗೋ, ಬಂದೇ ಬಿಟ್ಟರು' ಎಂದು ಕೇಳಿಬಂದ ಮಾತುಗಳ ಹಿಂದೆ ನೀಳಕಾಯದ, ಸಮವಿತ್ತರದ ಕಚ್ಚೆಪಂಚೆ, ಬಿಳಿ ಶರಟು, ಬಿಳಿಯ ಶಲ್ಯವನ್ನು ಕೊರಳಿಗೆ ಸುತ್ತಿದ್ದ ವ್ಯಕ್ತಿ ಬಂದರು. ಹರಡಿರುವ ಬಿಳಿ ಕೊದಲುಗಳ ನಡುವೆ ಅಲ್ಲಲ್ಲಿ ಕರಿಕೊದಲು, ನಾಗೇಶರಾವ್ ಆದಿಯಾಗಿ ಎಲ್ಲರೂ ಅವರನ್ನೂ ಸುತ್ತುವರಿದರು. ಮನೆತನದ ಹಿರಿಯರಿಗೆ ಪಾದಸ್ಪರ್ಶಿಸಿ ನಮಸ್ಕಾರ ಮಾಡುವಂತೆ ಅಲ್ಲಿ ನೆರೆದಿದ್ದವರಲ್ಲಿ ಹಲವರು ನಮಸ್ಕರಿಸುತ್ತಿದ್ದರು. ನಿಟ್ಟೂರರವರನ್ನು ನಾನು ಮುಖತಃ ಅತ್ಯಂತ ಸಮೀಪದಲ್ಲಿ ನೋಡಿದ್ದು ಈ ಸಂದರ್ಭದಲ್ಲಿ. ನಾಗೇಶರಾಯರ ಮನೆಯಲ್ಲಿ ನಡೆದ ಈ ಪ್ರಸಂಗ ಒಂದು ಸಾಂಕೇತಿಕ ಉದಾಹರಣೆ ಅಷ್ಟೆ. ನಿಟ್ಟೂರರವರು ಹೋಗುವ ಸಭೆ ಸಮಾರಂಭಗಳಲ್ಲಿ ಇಂತಹ ದೃಶ್ಯಗಳು ಸರ್ವೇಸಾಮಾನ್ಯವೆಂಬಂತೆ ನಡೆಯುತ್ತಿರುತ್ತವೆ ಎಂಬುದು ನನಗೆ ಕ್ರಮೇಣ ಅನುಭವಕ್ಕೆ ಬಂತು. ವಾರದ ಕೆಳಗೆ ಭೇಟಿ ಮಾಡಿವರು ಮತ್ತೆ ಭೇಟಿ ಮಾಡಿದಾಗ ತಮ್ಮನ್ನು ನಿಟ್ಟೂರರವರು ಮರೆತಿರುವರೆಂದು ಭಾವಿಸಿ, ಮತ್ತೆ ತಮ್ಮ ಪರಿಚಯವನ್ನು ಆರಂಭದಿಂದ ಹೇಳಲು ಹೊರಟಾಗ, ಆತ್ಮೀಯವಾದ ನಗೆಬೀರುತ್ತಾ, 'ನೀವು ಹೋದವಾರ ಭೇಟಿ ಮಾಡಿದ್ರಲ್ಲ', ಎಂದು ಹೇಳಿ ತಾವು ಮರೆತಿಲ್ಲ ವೆಂಬುದನ್ನು ಖಚಿತಮಾಡುತ್ತಿದ್ದರು. ವಯೋಮಾನದಿಂದ ಅವರ ನೆನಪಿನ ಶಕ್ತಿ ಕುಂದಿ ಹೋಗಿರಬಹುದೆಂದು ಭಾವಿಸಿದ ಕೆಲವರು ತಮ್ಮ ಹಿರಿಯರ ಪರಿಚಯದ ಹಿನ್ನೆಲೆ ಯೊಂದಿಗೆ ತಮ್ಮ ಪರಿಚಯ ಹೇಳಲು ಹೊರಟಾಗ, ಅವರ ಮಾತನ್ನು ತಡೆದು, ನಿಮ್ಮ ತಂದೆ, ನನಗೆ ಚೆನ್ನಾಗಿ ಗೊತ್ತು ಎಂದು ಹೇಳಿ, ಆಗಿನ ಕಾಲದ ಘಟನೆಗಳನ್ನು ಹೇಳುತ್ತಾ ವಿಸ್ಮಯವನ್ನುಂಟು ಮಾಡುತ್ತಾರೆ. ನಿಟ್ಟೂರರವರ ನೆನಪಿನ ಶಕ್ತಿಗೆ ಸರಿಸಾಟಿಯಿಲ್ಲ. ಇಳಿ ವಯಸ್ಸು ಅಂಕೆ ಸಂಖ್ಯೆಗಳಿಗೆ ಆಗಿದೆಯೆ ಹೊರತು, ಅವರ ನೆನಪಿನ ಶಕ್ತಿಗೆ ಆಗಿಲ್ಲವೆಂದು ಹೇಳಬಹುದು.

ಇಂತಹ ಹಿರಿಯರಾದ ನಿಟ್ಟೂರರವರೊಂದಿಗೆ ನಿಕಟವಾಗಿ ಕೆಲಸ ಮಾಡುವ ಸನ್ನಿವೇಶವು ನನ್ನ ಬಾಳಿನಲ್ಲಿ ಒದಗಬಹುದೆಂಬ ನಿರೀಕ್ಷೆಯಾಗಲಿ, ಕಲ್ಪನೆಯಾಗಲಿ ನನಗಿರಲೇ ಇಲ್ಲ. ವಿಜಯ ಕಾಲೇಜಿನಲ್ಲಿ ನನ್ನ ಸಹೋದ್ಯೋಗಿಯಾಗಿದ್ದ ಡಾ|| ಪಿ.ವಿ. ನಾರಾಯಣ 'ಧರ್ಮಕಾರಣ' ಕಾದಂಬರಿಯನ್ನು ಬರೆದರು. ಅದು ಪ್ರಕಟವಾದ ಮೇಲೆ ವಿವಾದಗಳನ್ನು ಸೃಷ್ಟಿಸಿತು. ಕರ್ನಾಟಕ ಸರ್ಕಾರ ಅದನ್ನು ಮುಟ್ಟುಗೋಲು ಹಾಕಿತು. ಈ ಸಂದರ್ಭದಲ್ಲಿ ಹಿರಿಯ ಕಿರಿಯ ಸಾಹಿತಿ ಕಲಾವಿದರು, ರಂಗಭೂಮಿ ಮತ್ತು ಚಲನಚಿತ್ರ ನಿರ್ದೇಶಕರು, ಶಿಕ್ಷಕರು, ನ್ಯಾಯವಾದಿಗಳು, ಪುಸ್ತಕ ಪ್ರಕಾಶಕರು, ಪತ್ರಿಕಾ ಸಂಪಾದಕರು ಮೊದಲಾದವರು ಬೆಂಗಳೂರು ಕುಮಾರ ಪಾರ್ಕಿನ ಗಾಂಧಿ ಭವನದಲ್ಲಿ ದಿ. ೨೫.೬.೧೯೯೮ರಲ್ಲಿ ಸಭೆ

ಸೇರಿ"ಅಭಿವ್ಯಕ್ತಿ ಸ್ವಾತಂತ್ರ್ಯ ವೇದಿಕೆ"ಯನ್ನು ಸ್ಥಾಪಿಸಿದರು. "Forum For Freedom of Expression" ಎಂಬ ಆಂಗ್ಲಹೆಸರನ್ನೂ ಸಹ ಇಟ್ಟರು (ಕನ್ನಡೇತರರನ್ನು ಸಂಪರ್ಕಿಸಲು)ಗೌರವಾಧ್ಯಕ್ಷರಾಗಿ-ನ್ಯಾಯಾಮೂರ್ತಿ ಶ್ರೀ ನಿಟ್ಟೂರು ಶ್ರೀನಿವಾಸರಾಯರು, ಕಾರ್ಯಾಧ್ಯಕ್ಷರಾಗಿ ಪ್ರೊ|| ಜಿ. ವೆಂಕಟಸುಬ್ಬಯ್ಯ, ಡಾ|| ಜಿ.ಎಸ್. ಶಿವರುದ್ರಪ್ಪ, ಕಾದಂಬರಿಕಾರ ಶ್ರೀ ವ್ಯಾಸರಾಯಬಲ್ಲಾಳ ಅವರನ್ನು ಅವಿರೋಧವಾಗಿ ಸಭೆ ಆಯ್ಕೆ ಮಾಡಿತು. ಮೂವರು ಕಾರ್ಯದರ್ಶಿಗಳನ್ನು ಆರಿಸುವ ಸಂದರ್ಭದಲ್ಲಿನ ಸಭೆಯಲ್ಲಿದ್ದ ಮಹನೀಯರು ನನ್ನ ಹೆಸರನ್ನು ಹೇಳಿದಾಗ, ಬೇಡವೆಂದು ನಾನು ಹೇಳಿತ್ತಿದ್ದೆ. ಎಸ್.ಎಲ್.ಭೈರಪ್ಪ 'ಪರ್ವ' ಕಾದಂಬರಿಯನ್ನು ಡಾ|| ಎನ್.ಎಸ್. ಲಕ್ಷ್ಮೀನಾರಾಯಣ ಭಟ್ಟರ ಮಾರ್ಗದರ್ಶನದಲ್ಲಿ ಸಿದ್ಧಪಡಿಸುತ್ತಿದ್ದೆ. ಮರುಚಿಂತನೆ ಪುನರ್ ಬರವಣಿಗೆಯ ಕಾರ್ಯಕ್ರಮ ಹಾಕಿಕೊಂಡಿದ್ದೆ, ಜೊತೆಗೆ ನೆನೆಗುದಿಯಲ್ಲಿದ್ದ ಹಲವು ಅರೆಬರೆಯಾಗಿದ್ದ ಬರಹಗಳಿಗೆ ಆಕಾರ ಕೊಡಬೇಕಾಗಿತ್ತು. ಈ ಕಾರಣಗಳಿಂದ ನಾನು ಬೇಡವೆಂದು ಹೇಳುತ್ತಿದ್ದೆ. ವಿವಿಧ ರೀತಿಯ ಹೋರಾಟಗಳಲ್ಲಿ ನನ್ನ ಆಯಮಾನದ ಸಮಯ ಸವೆದು ಹೋಗಿ, ಚಿಂತನೆ ಬರಹಗಳಿಗೆ ಅಡ್ಡಿ ಹೇಗಾಯಿತೆಂಬುದನ್ನು ಅನುಭವಿಸಿದ್ದ ನಾನು ಸದ್ಯಕ್ಕೆ ಯಾವ ಸಂಘ ಸಂಸ್ಥೆಯ ನಿರ್ವಹಣೆಯ ಜವಾಬ್ದಾರಿ ಹೊರುವುದು ಬೇಡವೆಂದು ದೂರವಿದ್ದೆ. ಮಿತ್ರ ಪಿ.ವಿ. ನಾರಾಯಣರ ಆಹ್ವಾನವನ್ನು ಗೌರವಿಸಿ ಈ ಸಭೆಗೆ ನಾನು ಹೋಗಿದ್ದು ಸಹ ಒಂದು ತೆರನಲ್ಲಿ ಆಕಸ್ಮಿಕವೇ ಸರಿ. ಆದರೆ ನಿಟ್ಟೂರುರವರು ನನ್ನ ಪರಿಚಯವೇ ಇಲ್ಲದಿದ್ದರೂ ಸಹ ನನ್ನ ಹೆಸರನ್ನು ಅನುಮೋದಿಸುತ್ತಿದ್ದರು.

"I Know his family very well, it is socially committed family , I have seen his elders..." ಎಂದು ಪಕ್ಕದಲ್ಲಿದ್ದವರಿಗೆ ಹೇಳುತ್ತಿದ್ದುದು ನನಗೂ ಕೇಳಿಸುತ್ತಿತ್ತು. ಮತ್ತೂ ಬೇಡವೆಂದರೆ ಅಹಂಕಾರದ ಮಾತಾದೀತು. ಅಥವಾ ಪಲಾಯನದ ಮಾತಾದೀತು ಎಂದು ಭಾವಿಸಿದೆ. ಹಿರಿಯರ ಮಾತಿಗೆ ಗೌರವ ಕೊಡಬೇಕಾದುದು ಸಜ್ಜನಿಕೆಯೆಂದು ಒಪ್ಪಿಕೊಂಡೆ. ಶಿಕ್ಷಕರ ಮಹಾನಾಯಕ ಹಾಗೂ ನಮಗೆಲ್ಲ ಸ್ಫೂರ್ತಿ ಹಾಗೂ ಮಾರ್ಗದರ್ಶಕರಾಗಿದ್ದ ಡಾ|| ಜಿ. ರಾಮಕೃಷ್ಣ ಮತ್ತು ಕಿರುತೆರೆಯ ನಿರ್ಮಾಪಕ ನಿರ್ದೇಶಕ ವೀರಪ್ಪ ಮರಳವಾಡಿ - ಹೀಗೆ ಮೂವರು ಕಾರ್ಯದರ್ಶಿಗಳಾಗಿ ಅವಿರೋಧವಾಗಿ ಆಯ್ಕೆಯಾದೆವು. ಜೊತೆಗೆ ಖಜಾಂಚಿಯ ಸ್ಥಾನ ನಿರ್ವಹಣೆಯೂ ನನ್ನ ಪಾಲಿಗೆ ಬಂತು. ಮಾಸ್ಟರ್ ಹಿರಣ್ಣಯ್ಯ, ಪ್ರೊ|| ಜಿ.ಕೆ. ಗೋವಿಂದರಾವ್, ನವಕರ್ನಾಟಕ ಪ್ರಕಾಶನದ ಮ್ಯಾನೇಜಿಂಗ್ ಡೈರೆಕ್ಟರ್ ಆರ್. ಎಸ್. ರಾಜಾರಾಂ, ಅದೇ ಬಳಗದ ಹಿರಿಯ ಪತ್ರಕರ್ತ ಪಿ.ಆರ್. ಕೃಷ್ಣರಾವ್, ಶ್ರೀಮತಿ ಎನ್. ಗಾಯತ್ರಿ, ಎಂ.ಕೆ. ರಾಜಗೋಪಾಲ್,

ಬಿ.ಸಿ. ರಾಮಚಂದ್ರಶರ್ಮ, ಡಾ|| ವಿಜಯ, ಡಾ|| ಎನ್.ಎಸ್. ಲಕ್ಷ್ಮೀನಾರಾಯಣಭಟ್ಟ, ಪ್ರೊ|| ಕೆ. ಎಂ. ಸೀತಾರಾಮಯ್ಯ, ಬರಗೂರು ರಾಮಚಂದ್ರಪ್ಪ, ಗಿರೀಶ್ ಕಾಸರವಳ್ಳಿ, ಡಾ|| ಪಿ.ವಿ. ನಾರಾಯಣ, ಆರ್.ಎಂ. ಹಡಪದ್, ನ್ಯಾಯವಾದಿ ಎಸ್. ಆರ್. ಗೌತಮ್, ಪ್ರೊ|| ಟಿ.ಆರ್. ಶ್ಯಾಮಭಟ್ ನ್ಯಾಯವಾದಿ ಶ್ರೀ ಮತಿ ಹೇಮಲತಾ ಮಹಿಷಿ, ಡಾ|| ಬಸವರಾಜ್ ಕಲ್ಗುಡಿ, ಪ್ರೊ|| ಅ.ರಾ. ಮಿತ್ರ, ಟಿ.ವೆಂಕಟೇಶಮೂರ್ತಿ, ಡಾ|| ಪಿ. ನಾಗರಾಜು, ಡಾ|| ಟಿ.ಎನ್. ಚಂದ್ರಕಾಂತ್, ಪ್ರೊ|| ಹೇರಂಬ, ಪ್ರೊ|| ಹಸನ್ ಮನ್ಸೂರ್, ಪ್ರೊ || ಎಂ.ಎಚ್. ಕೃಷ್ಣಯ್ಯ, ಎಂ.ಎಸ್. ಸತ್ಯು, ಪ್ರೊ || ಎಲ್. ಎಸ್. ಶೇಷಗಿರಿರಾವ್, ಡಾ|| ಸಿದ್ದಲಿಂಗಯ್ಯ, ಟಿ.ಎಸ್. ನಾಗಾಭರಣ, ಪ್ರೊ || ಸಿ.ಜಿ. ಕೃಷ್ಣಸ್ವಾಮಿ, ಡಾ|| ಕೆ.ಎಂ. ಶ್ರೀನಿವಾಸಗೌಡ, ಡಾ|| ಮಮ್ತಾಜ್ ಆಲಿಖಾನ್, ಡಾ|| ಶ್ರೀನಿವಾಸ ಹಾವನೂರ, ಡಾ|| ಎಚ್.ಎಸ್. ಗೋಪಾಲರಾವ್, ರಂಜಾನ್‌ದರ್ಗಾ, ಪ್ರೊ|| ದೊಡ್ಡರಂಗೇಗೌಡರು ಟಿ.ಆರ್. ಅನಂತರಾಮು, ಕೆ.ಎಲ್. ಗೋಪಾಲಕೃಷ್ಣರಾವ್ (ರಷ್ಯಾ), ಬಿ.ಎಸ್. ಸುಬ್ಬರಾಯ (ಗೋಖಲೆ ಇನ್‌ಸ್ಟಿಟ್ಯೂಟ್ ಆಫ್ ಪಬ್ಲಿಕ್ ಅಫೇರ್ಸ್) ಮೊದಲಾದ ನಲವತ್ತೆರಡು ಮಹನೀಯರು "ಅಭಿವ್ಯಕ್ತಿ ಸ್ವಾತಂತ್ರ್ಯ ವೇದಿಕೆ"ಯ ಸ್ಥಾಪಕ ಸದಸ್ಯರಾದರು.

ಅಂತರರಾಷ್ಟ್ರೀಯ ಖ್ಯಾತಿಯನ್ನು ಪಡೆದ ನಾಟಕಕಾರ - ನಟ- ನಿರ್ದೇಶಕರಾದ ಓರ್ವರನ್ನು ಈ ವೇದಿಕೆಯ ಸ್ಥಾಪಕ ಸದಸ್ಯರಾಗಲು ನಾನು ಕೋರಿದಾಗ ಅವರು ಖಡಾಖಂಡಿತವಾಗಿ ನಿರಾಕರಿಸಿದರು. 'ಬುದ್ಧಿಜೀವಿ'ಯ ಅಸಲಿಮುಖ ಪರಿಚಯವಾಯಿತು. ಮೆಲುಕು ಹಾಕುವ ಅನುಭವವಿದು.

ಎಸ್.ಎಲ್. ಭೈರಪ್ಪನವರೂ ಸೇರಿದಂತೆ ಹಲವು ಬರಹಗಾರರು, ನಾಗರಿಕ ಮಹಾಶಯರು ಈ ವೇದಿಕೆಯ ಧ್ಯೇಯಧೋರಣೆಗಳನ್ನು ಮೆಚ್ಚಿ, ಸ್ವಇಚ್ಛೆಯಿಂದ ಹುಡುಕಿಕೊಂಡು ಬಂದು ಸದಸ್ಯರಾದರು. ಇದೂ ಸಹ ಸ್ಮರಣೀಯವಾದುದು.

ಇಂತಹದೊಂದು ವೇದಿಕೆಯ ಮೊದಲಬಾರಿಗೆ ಭಾರತದಲ್ಲಿ ಅಸ್ತಿತ್ವಕ್ಕೆ ಬಂದಿದೆ. ಇದು ದೊಡ್ಡದಾಗಿ ನಾಡಿನಾದ್ಯಂತ ಬೆಳೆಯಬೇಕು. ಪ್ರತಿಭಟನೆಯ ಮುಖವಾಣಿ ಯಾಗಬೇಕು ಎಂದು ಹೊರ ರಾಜ್ಯಗಳಲ್ಲಿರುವ ಬರಹಗಾರರು ತಮ್ಮ ಆಶಯವನ್ನು ವ್ಯಕ್ತಪಡಿಸಿದರು. ಇಳಿವಯಸ್ಸಿನ ನಿಟ್ಟೂರು ಶ್ರೀನಿವಾಸರಾಯರು ಈ ವೇದಿಕೆಯ ನೇತಾರರಲ್ಲಿ ಓರ್ವರು ಎಂಬುದು ಸಹ ಮುಖ್ಯವಾದ ವಿಚಾರವಾಗಿತ್ತು. ಈ ವೇದಿಕೆಯ ಬಗ್ಗೆ ಬೇರೆ ಎಲ್ಲಾ ಉಲ್ಲೇಖಗಳು ಆಗಿಲ್ಲ, ಆದ್ದರಿಂದ ಈ ಲೇಖನದಲ್ಲಿ ದಾಖಲೆ ಯಾಗಿರಲಿ ಎಂಬ ಆಶಯದಿಂದ ಬೇಕಾದ, ಬೇಡವಾದ ವಿವರಗಳನ್ನು ಕೊಟ್ಟಿದ್ದೇನೆ.

ಮುಖ್ಯಲೇಖನಕ್ಕೆ ಇದು ಪ್ರಸ್ತುತವೆ? ಎಂಬ ಶಂಕೆ ಕೆಲವರಿಗೆ ಮೂಡಬಹುದು. ನಿಟ್ಟೂರುರವರನ್ನು ಕುರಿತು ಬರೆಯುವಾಗ 'ಅಭಿವ್ಯಕ್ತಿ ಸ್ವಾತಂತ್ರ್ಯವೇದಿಕೆ'ಯ ಸ್ಥಾಪನೆಯ ವಿಚಾರ ಬರಬೇಕು. ನವಕರ್ನಾಟಕ ಪ್ರಕಾಶನದ ಬಳಗದವರ ಕ್ರಿಯಾಶೀಲತೆ ಮತ್ತು ನಿಟ್ಟೂರು ಶ್ರೀನಿವಾಸರಾಯರ ಮುತುವರ್ಜಿ ಇಲ್ಲದಿದ್ದಲ್ಲಿ ಈ ವೇದಿಕೆಯು ಅಸ್ತಿತ್ವಕ್ಕೆ ಬರುತ್ತಿರಲಿಲ್ಲ!

ಮೂವರು ಕಾರ್ಯಾಧ್ಯಕ್ಷರುಗಳಲ್ಲದೆ, ಗೌರವ ಅಧ್ಯಕ್ಷ ನಿಟ್ಟೂರು ಶ್ರೀನಿವಾಸ ರಾಯರ ಮಾರ್ಗದರ್ಶನದಲ್ಲಿ ಕಾರ್ಯನಿರ್ವಹಿಸುವ, ಸಭೆಗಳನ್ನು ನಡೆಸುವ ಸಂದರ್ಭ ಗಳು ಉಂಟಾದವು. ಸಭೆಯ ದಿನಾಂಕ, ಸಮಯ, ಕಾರ್ಯಸೂಚಿ, ನಿರ್ವಹಣೆ, ಚರ್ಚೆ, ನಿಲುವಳಿಗಳು, ಅವುಗಳ ಅನುಷ್ಠಾನ - ಹೀಗೆ ಎಲ್ಲ ಅಂಶಗಳ ವಿಚಾರವಾಗಿ ನಿಟ್ಟೂರು ರವರು ಮುತುವರ್ಜಿ ತೋರುತ್ತಿದ್ದರು. ಸೂಕ್ತವಾದ ಸನ್ನಿವೇಶದಲ್ಲಿ ಪ್ರತಿಭಟನೆಯ ಮಾತುಗಳನ್ನು ಆಡುತ್ತಿದ್ದರು. ಕಾರ್ಯಕರ್ತರನ್ನು ಸ್ನೇಹಭಾವದಿಂದ ಪರಿಭಾವಿಸುತ್ತಿದ್ದರು. ಅವರು ದಾರಿ ತಪ್ಪಿದಾಗ ನಿರ್ದಾಕ್ಷಿಣ್ಯವಾಗಿ ನವಿರಾದ ಮಾತುಗಳಿಂದ ತಿದ್ದುತ್ತಿದ್ದರು. ಸಂಘ ಸಂಸ್ಥೆಗಳನ್ನು ಕಟ್ಟುವುದು ಸುಲಭವಲ್ಲ ತಾತ್ವಿಕ ನೆಲೆಗಟ್ಟಿನ ಮೇಲೆ ಹೇಗೆ ಅದನ್ನು ಸ್ಥಾಪಿಸಿ ಬೆಳೆಸಬೇಕು ಎಂಬುದು ಅವರ ಕ್ರಿಯಾಶೀಲತೆ ಮತ್ತು ಆಸಕ್ತಿ-ಕಾಳಜಿಗಳಿಂದ ನಮಗೆ ಅರಿವಾಗುತ್ತಿತ್ತು. ಹಲವು ದಶಕಗಳ ಹಿಂದೆ ಅವರ ನೇತೃತ್ವದಲ್ಲಿ ಆರಂಭಗೊಂಡ ಸಂಘ ಸಂಸ್ಥೆಗಳು ಇಂದು ಹೆಮ್ಮರದಂತೆ ಬೆಳೆದಿವೆ. ಅವುಗಳ ಪಟ್ಟಿಯು ಸಹ ಬೆಳೆಯುತ್ತಲೇ ಇದೆ! ಅಭಿವ್ಯಕ್ತಿ ಸ್ವಾತಂತ್ರ್ಯ ವೇದಿಕೆಯ ಕೆಲಸಗಳಾಗಿ ಅವರ ಮನೆಗೆ ನಾನು ಆಗಾಗ ಹೋಗುತ್ತಿದ್ದೆ. ಮೂವತ್ತು ವರ್ಷಗಳ ಹಿಂದೆ ನಾನು ಬರೆದಿದ್ದ 'ಅರ್ಥ' ಕಾದಂಬರಿಯನ್ನು ಅವರಿಗೆ ಗೌರವಪೂರ್ವಕವಾಗಿ ಕೊಟ್ಟಿದ್ದೆ. ಅವರು ಅದನ್ನು ಓದಿದ್ದರು. ತಮ್ಮ ಮಗಳಿಗೂ ಕೊಟ್ಟು ಓದಿಸಿದ್ದರು. ನಾನು ಒಮ್ಮೆ ಹೋದಾಗ ಅವರ ಮೆಚ್ಚುಗೆ ಯನ್ನು ವ್ಯಕ್ತ ಪಡಿಸಿದ್ದರು. ಆ ಸಂದರ್ಭದಲ್ಲಿ ಅವರಾಡಿದ ಕೆಲವು ಮಾತುಗಳು ನಾನು ಹೆಮ್ಮೆ ಪಡುವಂತೆ ಮಾಡಿದ್ದವು.

ಅರ್ಥ ಕಾದಂಬರಿಯು ಭಾಗಶಃ ಹೊಸದುರ್ಗದಲ್ಲಿ ನಡೆಯುತ್ತದೆ. ಅದರ ಪ್ರಸ್ತಾಪ ಮಾಡುತ್ತಿದ್ದ ನಿಟ್ಟೂರುರವರು, ಹೊಸದುರ್ಗ ನನಗೆ ಗೊತ್ತು ಎಂದರು.

ಚಿತ್ರದುರ್ಗ ಜಿಲ್ಲೆಯ ಹೊಸದುರ್ಗದಲ್ಲಿ ತಂದೆಯವರು ಅಧ್ಯಾಪಕರಾಗಿ ಸೇವೆ ಮಾಡುತ್ತಿದ್ದಾಗ ನಿಟ್ಟೂರುರವರು ಪ್ರೈಮರಿ ಶಾಲೆಯಲ್ಲಿ ವಿದ್ಯಾಭ್ಯಾಸವನ್ನು ಮಾಡುತ್ತಿದ್ದ ರಂತೆ. ಸುಮಾರು ಆರು ಮೈಲಿ ದೂರದಲ್ಲಿ ನೀರಗುಂದ ಎಂಬ ಹೆಸರಿನ ಹಳ್ಳಿ. ಇತಿಹಾಸದ ದಿನಗಳಲ್ಲಿ ಇದಕ್ಕೆ ನೀಲಾವತಿ ನಗರ ಎಂದು ಹೆಸರು. ಇದನ್ನು ಆಳುತ್ತಿದ್ದ ರಾಜನ

ಮಗ ಪಲ್ಲವರ ರಾಜಕುಮಾರಿಯನ್ನು ವಿವಾಹ ಮಾಡಿಕೊಂಡಿದ್ದನಂತೆ. ಇದಕ್ಕೆ ಚಾರಿತ್ರಿಕ ದಾಖಲೆಗಳಿವೆ. ನೀರು ಮತ್ತು ಬೆಟ್ಟ (ಗುಂದ) ಇರುವುದರಿಂದ ಇದು ಕ್ರಮೇಣ ನೀರಗುಂದ ಆಯಿತು. ಇಲ್ಲಿನ ಶ್ಯಾನುಭೋಗರಾಗಿದ್ದ ನಮ್ಮ ಹಿರಿಯರು ಬೆಂಗಳೂರು ಪೂನಾ ರೈಲು ಮಾರ್ಗ ಚಾಲ್ತಿಗೆ ಬಂದ ಮೇಲೆ ಎರಡು ಮೈಲಿ ದೂರದ ಸಣ್ಣಕ್ಕಿ ಬಾಗೂರು (ಭಾಗ್ಯಪುರಿ) ಇಲ್ಲಿ ಹೋಗಿ ನೆಲೆಸಿದರಂತೆ. ಸಣ್ಣ ಅಣೆಕಟ್ಟಿನಂತೆ ಇರುವ ಮೂರು ಭಾರಿ ಕೆರೆಗಳ ನಡುವೆ ಈ ಎರಡು ಹಳ್ಳಿಗಳು ಇವೆ. ಭತ್ತದ ಬೆಳೆ ಸಮೃದ್ಧಿ. ಚಿತ್ರದುರ್ಗದ ದೊಡ್ಡ ಹಾಗೂ ಪ್ರಭಾವಶಾಲಿ ಜಮೀನ್ದಾರ ಮನೆತನಗಳಲ್ಲಿ ನಮ್ಮ ನೀರಗುಂದದ ಮನೆತನವೂ ಸಹ ಒಂದು ಎಂದು ಹೆಸರು ಮಾಡಿದೆ. ಶ್ಯಾನುಭೋಗ್ ನೀರಗುಂದದ ರಾಮಣ್ಣನವರು ಅಂದರೆ ನಮ್ಮ ಮುತ್ತಜ್ಜ ವರ್ಚಸ್ಸಿನ ಮನುಷ್ಯ. ಬಾಗೂರಿನ ಇವರ ಮನೆಯಲ್ಲಿ ಸಮಾರಂಭಗಳು ನಡೆಯುತ್ತಿತ್ತು. ನಮ್ಮ ತಂದೆಯವರಿಗೆ ಆಹ್ವಾನ ಇರುತ್ತಿತ್ತು. ಅವರೊಂದಿಗೆ ಒಂದನೇ ತರಗತಿ ಓದುತ್ತಿದ್ದ ನಾನು ಸಹ ಬಾಗೂರಿನ ನಿಮ್ಮ ಮನೆಗೆ (ನೀರಗುಂದ ರಾಮಣ್ಣನವರ) ಹೋಗುತ್ತಿದ್ದೆ ಎಂದು ನಿಟ್ಟೂರುರವರು ಹೇಳಿದಾಗ ನಾನು ಆಶ್ಚರ್ಯಚಕಿತನಾದೆ. ಇದು ಸುಮಾರು ತೊಂಬತ್ತೈದು ವರ್ಷಗಳ ಹಿಂದೆ ನಡೆದ ಘಟನೆ.

ಹೀಗೆ ಗತಕಾಲದ ನೆನಪಿನ ಸುರುಳಿಗಳನ್ನು ನಿಟ್ಟೂರುರವರು ಬಿಡಿಸುತ್ತಾ ಹೋದರು ಮೇಲೆ ಹೇಳಿದ ನಮ್ಮ ಮನೆತನದ ನ್ಯಾಯವಾದಿಗಳನ್ನು ಹಾಗೂ ಇನ್ನೂ ಹಲವರನ್ನು ನಿಟ್ಟೂರುರವರು ನಿಕಟವಾಗಿ ಬಲ್ಲವರು. ಅವರೊಂದಿಗೆ ಕಳೆದ ದಿನಗಳನ್ನು ನೆನಪು ಮಾಡಿಕೊಂಡರು. ತಿಪಟೂರಿನಲ್ಲಿ ಖ್ಯಾತ ವಕೀಲರೆಂದು ಹೆಸರು ಮಾಡಿದ್ದ ವಿಠ್ಠಲ ನರಸಿಂಹಯ್ಯ ಸೋದರ ವಿ.ಎಚ್.ನಾರಣಪ್ಪ ಗೊತ್ತು, ಮತ್ತೊಬ್ಬ ಸೋದರ ಡಾ|| ಗುಂಡಪ್ಪ ಮತ್ತು ನಾನು ಶಿವಮೊಗ್ಗದಲ್ಲಿ ರೂಮು ಮಾಡಿಕೊಂಡು ಇಂಟರ್ ಓದುತ್ತಿದ್ದೆವು. ಅಡ್ವೋಕೇಟ್ ಶಿಕಾರಿಪುರದ ಸೀತಾರಾಮಯ್ಯ, ಅವರ ಅಳಿಯ ಅಡ್ವೋಕೇಟ್ ಬಿ.ಎನ್. ನಾರಾಯಣಮೂರ್ತಿ ಅವರೆಲ್ಲಾ ನನಗೆ ಗೊತ್ತು. ಹಾಗೆ ನಿಮ್ಮ ಚಿತ್ರದುರ್ಗದ ಕ್ರಿಮಿನಲ್ ವಕೀಲ ವೆಂಕಟಾಚಲ (ಎಸ್.ಎಸ್.ವಿ) ಅವರ ಕುಟುಂಬ ವರ್ಗದವರೆಲ್ಲ ಗೊತ್ತು. ಗಂಡು ಅಂದರೆ ವೆಂಕಟಾಚಲ ಎನ್ನುತ್ತಾ ಅವರ ಹುಲಿಶಿಕಾರಿ ಮೊದಲಾದ ಸಾಧನೆಗಳನ್ನು ಸ್ಮರಿಸಿಕೊಂಡರು. ಅವರ ತಮ್ಮನ ಮಗಳು ನನ್ನ ಶ್ರೀಮತಿ ಎಂದೆ. ಯಾರು ರಾಮಣ್ಣ (ಎಚ್.ಎಸ್.ರಾಮರಾವ್)ನ ಮಗಳೆ? ಎಂದು ಪ್ರಶ್ನಿಸಿದಾಗ, ಹೌದೆಂದೆ. ಅವರೆಲ್ಲ ಚೆನ್ನಾಗಿ ಗೊತ್ತು ಎಂದು ನಿಟ್ಟೂರುರವರು ಹೇಳುತ್ತಾ ಹೋದರು. 'ನೀರಗುಂದ ಮತ್ತು ಚಿನಿವಾರ್ ಮನೆತನದ ಸಾಧನೆಗಳು ಮಾಡಿರುವ ಹೆಸರು - ಹಲವರ

ಬಾಯಿಂದ ನಾವುಗಳು ಕೇಳಿದ್ದೇವೆ. ಆದರೆ ನಿಟ್ಟೂರು ಶ್ರೀನಿವಾಸರಾಯರ ಬಾಯಿಂದ ಕೇಳಿದಾಗ ನಿಜಕ್ಕೂ ಸಂತೋಷ ಉಂಟಾಗಿ ಹೆಮ್ಮೆಯಿಂದ ಬೀಗುವಂತಾಯಿತು.

ನಿಟ್ಟೂರುರವರು ಸಾರ್ಥಕವಾದ ತುಂಬು ಬದುಕನ್ನು ನಡೆಸುತ್ತಿದ್ದಾರೆ. ಇಪ್ಪತ್ತನೆಯ ಶತಮಾನದ ಆಗುಹೋಗುಗಳಿಗೆ ಸಾಕ್ಷಿಪ್ರಜ್ಞೆಯಾಗಿದ್ದರೆ. ಸಮಸ್ತ ಕನ್ನಡಿಗರ ಪುಣ್ಯದ ಫಲವಾಗಿ ಇಂದು ನಮ್ಮೊಂದಿಗೆ ಇದ್ದಾರೆ. ಅವರು ಹಿರಿಯ ಕನ್ನಡಿಗರು, ಅವರ ಸಮಕಾಲೀನರಾಗುವ ಅವಕಾಶ ನಮ್ಮ ಪಾಲಿಗೆ ಬಂದಿದೆಯಲ್ಲ. ಅವರನ್ನು ನೋಡಿದ್ದೇವೆ, ಮಾತನಾಡಿದ್ದೇವೆ ಎಂಬ ಸಂಗತಿಗಳು ನನ್ನ ಬದುಕಿನ ಶ್ರೀಮಂತಿಕೆಯ ಅಂಶಗಳಾಗಿವೆ. 'ಸಾರ್, ನಿಮ್ಮ ಆತ್ಮಚರಿತ್ರೆಯನ್ನು ಬರೆಯಿರಿ, ಅದು ಈ ವೇಳೆಗೆ ಬರಬೇಕಾಗಿತ್ತು' ಎಂದು ಹಲವು ಬಾರಿ ಅವರಲ್ಲಿ ಅರಿಕೆ ಮಾಡಿಕೊಂಡಿದ್ದೇನೆ. ಕಳೆದುಹೋದ ಕಾಲದತ್ತ ತೋರುವಂತೆ ಕೈಯನ್ನು ಎತ್ತಿ ಆಡಿಸಿ, ಮಗುವಿನ ಮುಗ್ಧತೆಯ ನಗುವನ್ನು ಬೀರುತ್ತಾರೆ. ಈಗ ಆಗದ ಕೆಲಸ ಎನ್ನುವಂತೆ, ಅದರ ಅವಶ್ಯಕತೆ ಇದೆಯೆ? ಎನ್ನುವಂತೆ. 'ನೀವು ಹೇಳಿ ಸಾರ್' ನಾನು ಬರೆದುಕೊಂಡು ಸಿದ್ಧಪಡಿಸುತ್ತೇನೆ' ಎಂದು ಹೇಳಿದ್ದೇನೆ. ಆದರೆ ಈ ಕಾರ್ಯಕ್ಕೆ ಕಾಲ ಕೂಡಿಬಂದಿಲ್ಲ.

ಕನ್ನಡ ನಾಡು ನುಡಿಗೆ ನಿಟ್ಟೂರು ಶ್ರೀನಿವಾಸರಾಯರು ಮಾಡಿರುವ ಸೇವೆ, ನೀಡಿರುವ ಕೊಡುಗೆ, ತೋರಿರುವ ಮಾರ್ಗದರ್ಶನ ಅನುಪಮವಾದುದು. ಶ್ರೀಸಾಮಾನ್ಯ ಕನ್ನಡಿಗ ಇವರನ್ನು ಗೌರವಿಸಿ, ಹೆಮ್ಮೆಪಡುವ ಮಾತುಗಳನ್ನು ಆಡಿದ್ದಾನೆ. ಆದರೆ ರಾಷ್ಟ್ರಮಟ್ಟದಲ್ಲಿ ಪದವಿ ಗೌರವಗಳನ್ನು ಹೊಂದಲು ಅರ್ಹರಾದ ಅವರನ್ನು ಪ್ರಭುತ್ವವನ್ನು ನಡೆಸುವ ಮಂದಿ ಮರೆತಂತೆ ನಟಿಸುತ್ತಿರುವುದು ಮಾತ್ರ ಕನ್ನಡಿಗರಿಗೆ ಬೇಸರವನ್ನು ತಂದಿದೆ. ತುಂಬು ಬಾಳು ಮತ್ತು ಅನನ್ಯವಾದ ಸಾಮಾಜಿಕ ಸೇವೆ ಮಾಡಿದ ಇಂತಹ ವ್ಯಕ್ತಿ ಬಂಗಾಳ, ಕೇರಳ, ಮಹಾರಾಷ್ಟ್ರದಂತಹ ರಾಜ್ಯದಲ್ಲಿದ್ದ ಪಕ್ಷದಲ್ಲಿ ಆ ಜನಗಳು ಗುರುತಿಸಿ ಗೌರವಿಸುತ್ತಿದ್ದ ರೀತಿಗಳು ಕನ್ನಡಿಗರನ್ನು ಕರುಬುವಂತೆ ಮಾಡುತ್ತಿತ್ತು! ಬೆಂಗಳೂರು ಮಹಾನಗರ ಪಾಲಿಕೆ ರಸ್ತೆಗೆ ಇವರ ಹೆಸರನ್ನಿಟ್ಟು ತನ್ನ ಗೌರವವನ್ನು ವ್ಯಕ್ತಪಡಿಸಿದೆ. ಬೆಂಗಳೂರು ವಿಶ್ವ ವಿದ್ಯಾನಿಲಯವು ಗೌರವ ಡಾಕ್ಟರೇಟ್ ಪದವಿಯನ್ನು ನೀಡಿ ತನ್ನ ಘನತೆಯನ್ನು ಹೆಚ್ಚಿಸಿ ಕೊಂಡಿದೆ. ಇಂತಹ ಒಳ್ಳೆಯ ಕೆಲಸಗಳನ್ನು ಮಾಡಲು ಕಾರಣವಾದ ಎಲ್ಲರೂ ಅಭಿವಂದನಾರ್ಹರು.

ನಿಟ್ಟೂರು ಶ್ರೀನಿವಾಸರಾಯರು ಕನ್ನಡಿಗರಿಗೆ 'ಭೀಷ್ಮ'ನಂತಿದ್ದಾರೆ. ಅನ್ಯ ಮನಸ್ಕರಂತೆ ಭಾಸವಾಗುತ್ತಾರೆ. ಆದರೆ ಸದಾ ಜಾಗೃತ ಮನಸ್ಕರಾಗಿರುತ್ತಾರೆ. ಗುರುತರವಾದ

ಆಗುಹೋಗುಗಳು ಪ್ರಪಂಚದ ಯಾವ ಮೂಲೆಯಲ್ಲಿ ನಡೆಯಲಿ, ಅದಕ್ಕೆ ಸ್ಪಂದಿಸುತ್ತಾರೆ. ಪರಿಹಾರವನ್ನು ಕುರಿತು ಆಡುತ್ತಾರೆ. ಕನ್ನಡಿಗರ ಶ್ರೇಯೋಭಿವೃದ್ಧಿಗಳು ಅವರ ಬಾಳಿನ ಮಂತ್ರಗಳಾಗಿವೆ. ಇಂತಹ ಹಿರಿಯ ಚೇತನವನ್ನು ಕುರಿತು ಒಂದು ಸಂಭಾವನಾ ಗ್ರಂಥವನ್ನು ಹೊರತರುವ ಸಾಹಸವನ್ನು ಮಾಡಿರುವ ಸುಂದರ ಪ್ರಕಾಶನದ ಮಾಲೀಕರು ಹಾಗೂ ಮಿತ್ರರಾದ ಶ್ರೀ ಗೌರಿಸುಂದರ್ ಮತ್ತು ಅವರ ಶ್ರೀಮತಿ ಇಂದಿರಾ ಸುಂದರ್ ಹಾಗೂ ಕುಟುಂಬದ ಸದಸ್ಯರು ಅಭಿನಂದನಾರ್ಹರಾಗಿದ್ದಾರೆ. ಮರೆತಿರುವ ಮಹಾಚೇತನಗಳನ್ನು ಕು[illegible] ಮೌಲಿಕ ದಾಖಲೆಗಳ ಕೃತಿಗಳನ್ನು ಸುಂದರ ಪ್ರಕಾಶನ ಪ್ರಕಟಿಸಲಿ ಎಂದು ಹಾರೈಸುತ್ತೇನೆ.



# ಅಪರೂಪದ ಸಾಹಿತ್ಯ ಪ್ರೇಮಿ

✍ ಪ್ರಧಾನ್ ಗುರುದತ್ತ*

ನ್ಯಾಯಾಂಗದ ಕ್ಷೇತ್ರದಲ್ಲಿ ಗೌರವಪೂರ್ವಕವಾಗಿ ನೆನೆಯಲಾಗುವ ಹೆಸರುಗಳಲ್ಲಿ ಒಬ್ಬರಾಗಿರುವ ಶ್ರೀ ನಿಟ್ಟೂರು ಶ್ರೀನಿವಾಸರಾಯರು ಗಾಂಧೀಮಾರ್ಗದ ಅನುಯಾಯಿಗಳಾಗಿ, ಕನ್ನಡ ಸಾಹಿತ್ಯದ ಪೋಷಕರಾಗಿ, ಕನ್ನಡ ಸಂಘ-ಸಂಸ್ಥೆಗಳನ್ನು ಕಟ್ಟಿ, ಬೆಳೆಸಿದ ರೂವಾರಿಗಳಾಗಿ ಕೂಡ ಕನ್ನಡಿಗರೆಲ್ಲರೂ ಕೃತಜ್ಞರಾಗಿರಬೇಕಾದ ಮಹಾಚೇತನವಾಗಿ ಬೆಳೆದು ನಿಂತಿದ್ದಾರೆ; ನೂರರ ಗಡಿಯನ್ನು ದಾಟುತ್ತ ನಮ್ಮ ಆನಂದ - ಸಂತೋಷಗಳನ್ನು ಹೆಚ್ಚಿಸುತ್ತ ನಡೆದಿದ್ದಾರೆ. ಅವರನ್ನು ಅಭಿವಂದಿಸುವ ಕಾರ್ಯದ ಮೂಲಕ ಸ್ವತಃ ಕನ್ನಡಿಗರು ಅಭಿನಂದನೀಯರಾಗುತ್ತಿದ್ದಾರೆ.

ನಿಟ್ಟೂರರನ್ನು ನಾನು ದೂರದಿಂದ ನೋಡಿದ್ದೇನೆ; ಹತ್ತಿರದಿಂದ ಕಂಡಿದ್ದೇನೆ; ಕೆಲವು ಸಂದರ್ಭಗಳಲ್ಲಿ ಅವರೊಡನೆ ವಿಚಾರ ವಿನಿಮಯ ಮಾಡಿಕೊಳ್ಳುವ ಅವಕಾಶಗಳೂ ನನಗೆ ದೊರೆತಿವೆ. ಈ ಎಲ್ಲ ಸಂದರ್ಭಗಳಲ್ಲಿಯೂ ಅವರ ಬಗೆಗಿನ ಗೌರವ ಹೆಚ್ಚುತ್ತಲೇ ಬಂದಿದೆ. ಇಂಥ ಅನುಭವ ಎಲ್ಲ ವ್ಯಕ್ತಿಗಳ ವಿಷಯದಲ್ಲೂ ಆಗುವ ಸಂಭವಗಳು ಕಡಿಮೆಯೆಂದೇ ಹೇಳಬೇಕು. ಏಕೆಂದರೆ, ದೂರದಿಂದ ನೋಡಿದಾಗ ಉಂಟಾಗಿದ್ದ ಗೌರವದ ಭಾವನೆ ಹತ್ತಿರದಿಂದ ಕಂಡಾಗ ಉಳಿಯದೆ ಹೋಗಬಹುದು - ವ್ಯಕ್ತಿಗಳ ಸಣ್ಣತನದ ನಿದರ್ಶನಗಳು

* ೭೩೪, ಇ ಮತ್ತು ಎಫ್ ಬ್ಲಾಕ್, ೪ನೇ ಕ್ರಾಸ್
ಮನುಪಥ, ಕುವೆಂಪುನಗರ, ಮೈಸೂರು - ೫೭೦೦೨೩

ಎದುರಾದಾಗ; ಅಭಿಪ್ರಾಯ-ವಿಚಾರ ವಿನಿಮಯಗಳು ಮುಕ್ತರೀತಿಯಲ್ಲಿ ನಡೆದಾಗ, ಅವರ ಒಳಮನಸ್ಸಿನಲ್ಲಿರುವ ಪೂರ್ವಾಗ್ರಹಗಳು, ದ್ವೇಷ, ಮಾತ್ಸರ್ಯಗಳು, ಕುಹಕ-ಸಣ್ಣತನಗಳು ಸ್ವಾರ್ಥ-ಸಂಚುಗಳು ಕಪಟ-ಬೂಟಾಟಿಕೆಗಳು ಅನಾವರಣಗೊಳ್ಳುವ ಸಂಭವ ಇರುವುದರಿಂದ ನಮ್ಮ ಬಗೆಯಲ್ಲಿ ಅನಿಸಿಕೆಗಳು ಬದಲಾಗುವ, ಬೇರಾಗುವ ಸಂಭವವೂ ಇರುತ್ತದೆ. ಆದರೆ, ನಿಟ್ಟೂರರನ್ನು ಯಾವ ಬಗೆಯಲ್ಲಿ ನೋಡಿದರೂ, ಯಾವ ದೃಷ್ಟಿಕೋನದಿಂದ ನೋಡಿದರೂ ಯಾವುದೇ ಒರೆಗಲ್ಲಿನಲ್ಲಿ ಉಜ್ಜಿ ನೋಡಿದರೂ, ನಮ್ಮ ಗೌರವದ ಭಾವನೆ ಏರುಮುಖವಾಗಿಯೇ ಮುನ್ನಡೆಯುತ್ತಿದೆ. ಇದಕ್ಕೆ ಅವರ ನಡೆ-ನುಡಿಗಳಲ್ಲಿ ಯಾವುದೇ ವ್ಯತ್ಯಾಸವಿಲ್ಲದೆ ಇರುವುದು ನಿಷ್ಕಲ್ಮಷವಾದ ಮನಸ್ಸು, ಗುಣಗ್ರಹಣದ ಹಾಗೂ ಮೆಚ್ಚಿಗೆಯನ್ನು ಸೂಚಿಸುವ ಮನೋಧರ್ಮ ಮತ್ತು ಸಹೃದಯತೆಗಳೇ ಕಾರಣವಾಗಿವೆಯೆಂದು ನಾನು ನಂಬಿದ್ದೇನೆ. ಅವರ ಮಾತಾದರೂ ಅಷ್ಟೆ; ಅದರಲ್ಲಿ ನಾನೆಂದೂ ಕಠಿಣತೆಯನ್ನಾಗಲೀ, ಒರಟುತನವನ್ನಾಗಲಿ ಕಂಡಿಲ್ಲ. ಈ ನಡೆವಳಿಕೆ, ಸಹೃದಯತೆ ಮತ್ತು ಪ್ರೀತಿ-ವಿಶ್ವಾಸಗಳಿಂದಾಗಿ ಅವರು ಎಲ್ಲರೊಡನೆ ಸುಲಭವಾಗಿ ಸರಳವಾಗಿ ಬೆರೆಯಬಲ್ಲವರಾಗಿದ್ದಾರೆ; ಅಜಾತ ಶತ್ರುತ್ವವನ್ನು ಸಾಧಿಸಿದ್ದಾರೆ.

ನನ್ನ ವೈಯಕ್ತಿಕ ಅನುಭವಗಳ ಆಧಾರದ ಮೇಲೆ ಅವರ ವ್ಯಕ್ತಿತ್ವದ ಕೆಲವು ಮುಖಗಳನ್ನಷ್ಟೇ ಇಲ್ಲಿ ಕಂಡರಿಸಬಯಸುತ್ತೇನೆ. ಮಾಸ್ತಿಯವರ ಸಂಸ್ಕರಣ ಕಾರ್ಯಕ್ರಮಗಳ ಅಂಗವಾಗಿ, ಮಾಸ್ತಿಯವರ ಮೊಮ್ಮಗಳಾದ ಶ್ರೀಮತಿ ವಸಂತಶ್ರೀ ಅವರು 'ಇನ್‌ಸ್ಟಿಟ್ಯೂಟ್ ಆಫ್ ವರ್ಲ್ಡ್ ಕಲ್ಚರ್' ಸಭಾಂಗಣದಲ್ಲಿ ಮಾಸ್ತಿಯವರ 'ಯಶೋಧರಾ' ನಾಟಕವನ್ನು ಕುರಿತ ನನ್ನ ಉಪನ್ಯಾಸವೊಂದನ್ನು ಏರ್ಪಡಿಸಿದ್ದರು. ಅಂದು ಮಾಸ್ತಿಯವರ 'ಯಶೋಧರಾ' ಮತ್ತು ಮೈಥಿಲೀಶರಣ ಗುಪ್ತರ, 'ಯಶೋಧರಾ' (ಕಾವ್ಯ) ಇವುಗಳನ್ನು ಕುರಿತ ತೌಲನಿಕ ಅಧ್ಯಯನವನ್ನು ಮುಂದಿರಿಸುವ ಪ್ರಯತ್ನ ಮಾಡಿದೆ. ಅಂದು ನನಗೊಂದು ಆಶ್ಚರ್ಯ ಕಾದಿತ್ತು. ನೂರರ ಗಡಿಯನ್ನು ತಲುಪುತ್ತಿದ್ದ ನಿಟ್ಟೂರರು ಸಭಿಕರಲ್ಲಿ ಒಬ್ಬರಾಗಿದ್ದುದೇ ನನ್ನ ಆಶ್ಚರ್ಯಕ್ಕೆ ಕಾರಣವಾಗಿತ್ತು. ಉಪನ್ಯಾಸ ಮುಗಿಯುವವರೆಗೂ ಕಾದುಕೊಂಡಿದ್ದು ನನ್ನನ್ನು ಅಭಿನಂದಿಸಿದ ಬಳಿಕವೇ ಅವರು ಅಲ್ಲಿಂದ ತೆರಳಿದರು. ಮಾಸ್ತಿಯವರ ಬಗೆಗಿನ ಗೌರವದಂತೆಯೇ, ಕಿರಿಯನಾದ ನನ್ನಂಥವನ ಬಗೆಗಿನ ಅವರ ವಿಶ್ವಾಸ ನನ್ನನ್ನು ವಿಸ್ಮಿತನನ್ನಾಗಿ ಮಾಡಿತ್ತು. ಇನ್ನೊಂದು ಸಂದರ್ಭ: ಶ್ರೀ ಸುಮತೀಂದ್ರ ನಾಡಿಗ ಅವರು ಸಂಪಾದಿಸಿ, ಗೌರಿ ಸುಂದರ್ ಅವರು ಪ್ರಕಟಿಸಿದ್ದ 'ಎಸ್.ಎಲ್. ಭೈರಪ್ಪ' ಅವರ ಕೃತಿಗಳ ವಿಮರ್ಶೆ, ಕೃತಿಯ ಬಿಡುಗಡೆಯ ಸಂದರ್ಭ. ಇದೇ ಸಭಾಂಗಣದಲ್ಲಿ ಆಶ್ಚರ್ಯವೇನೂ ಇರಲಿಲ್ಲ. ಆದರೆ ಆಶ್ಚರ್ಯವನ್ನು

ಮೂಡಿಸಿದ್ದು ಶ್ರೀ ನಿಟ್ಟೂರು ಹಾಜರಿ. ಮೂಳೆ ಮುರಿತದಿಂದ ಅಸ್ವಸ್ಥರಾಗಿದ್ದು, ಆಗಿನ್ನೂ ಚೇತರಿಸಿಕೊಳ್ಳುತ್ತಿದ್ದ ಅವರು ತಮ್ಮ ವಾಕರ್ ಉಪಕರಣದ ಜೊತೆಯಲ್ಲಿಯೇ ಅಲ್ಲಿಗೆ ಆಗಮಿಸಿ, ನನ್ನ ಪಕ್ಕದಲ್ಲಿಯೇ ಬಂದು ಕುಳಿತರು. ಅವರ ಅಸೌಕರ್ಯದ ಅರಿವಿದ್ದ ಭೈರಪ್ಪನವರು ಆ ಮೊದಲೇ ಅವರನ್ನು ಭೇಟಿ ಮಾಡಿ ಬಂದಿದ್ದರು. ಆದರೂ ಮನಸ್ಸು ತಡೆಯದೆ ಅವರು ಕಷ್ಟಪಟ್ಟುಕೊಂಡು ಅಲ್ಲಿಗೆ ಬಂದಿದ್ದರು. ನಾನು ಅವರನ್ನು ಕೇಳಿದೆ: "ಸರ್, ತಾವು ಈ ಸ್ಥಿತಿಯಲ್ಲೂ ಇಲ್ಲಿಗೆ ಬಂದದ್ದು ನನಗೆ ಆಶ್ಚರ್ಯವನ್ನುಂಟು ಮಾಡುತ್ತಿದೆ. ತಾವೇಕೆ ಇಷ್ಟು ಶ್ರಮ ತೆಗೆದುಕೊಂಡಿರಿ?" ಅವರೆಂದರು: "ಭೈರಪ್ಪನವರ ಸಮಾರಂಭ ನಡೆಯುತ್ತಿರುವಾಗ ನಾನು ಬರದೆ ಇದ್ದರೆ ಹೇಗೆ? ತೀರ ಆಗುತ್ತಿರಲಿಲ್ಲ ಅಂದರೆ ಬೇರೆ ಮಾತು. ಬರಬಹುದು ಅನಿಸಿದ್ದರಿಂದ, ಮನಸ್ಸು ತಡೆಯದೆ ಬಂದುಬಿಟ್ಟೆ. ನನಗೀಗ ತುಂಬ ಸಂತೋಷವಾಗುತ್ತಿದೆ." ಭೈರಪ್ಪನವರು ಬಂಧುಗಳು ಎಂಬುದಕ್ಕಿಂತ ಹೆಚ್ಚಾಗಿ, ಅವರ ಸಾಹಿತ್ಯದ ಬಗೆಗಿನ, ಅವರ ಸಾಧನೆಯ ಬಗೆಗಿನ ಅಭಿಮಾನ ಅವರನ್ನು ಎಳೆಯು ತಂದಿತ್ತು. ಇಷ್ಟಾಗಿಯೂ ತಮ್ಮ ಬರುವಿಕೆಯನ್ನಾಗಲೀ, ಹಿಂದಿರುಗುವಿಕೆಯನ್ನಾಗಲೀ ಅವರೊಂದು 'ಸೀನ್' ಆಗಿ ಮಾಡಲಿಲ್ಲ ಎಂಬುದು ಗಮನಾರ್ಹವಾದ ಸಂಗತಿ. ಸಾಕಷ್ಟು ಮುಂಚಿತವಾಗಿಯೇ ಬಂದು ಎಷ್ಟೇ ಕಷ್ಟವಾಗಿರಬಹುದಾದರೂ ಸಮಾರಂಭ ಮುಗಿಯುವವರೆಗೂ ಕುಳಿತಿದ್ದು, ಅನಂತರದಲ್ಲಿ 'ಸದ್ದು ಮಾಡದೆ' ಹಿಂದಿರುಗಿದರು. ಸಜ್ಜನಿಕೆ-ಸಹೃದಯತೆಗಳ ಇಂಥ ಬಹಳಷ್ಟು ನಿದರ್ಶನಗಳನ್ನು ನಾನು ಕಂಡಿಲ್ಲ.

ಡಾ. ಟಿ.ವಿ.ವೆಂಕಟಾಚಲಶಾಸ್ತ್ರಿಗಳ ಅಭಿನಂದನ ಸಮಾರಂಭಕ್ಕೆ ಆಹ್ವಾನಿತರಾಗಿದ್ದ ಮುಖ್ಯ ಅತಿಥಿಗಳಲ್ಲಿ ನಿಟ್ಟೂರರೂ ಒಬ್ಬರಾಗಿದ್ದರು. ಅಭಿನಂದನ ಗ್ರಂಥದ ಸಂಪಾದಕರಲ್ಲಿ ಒಬ್ಬನಾಗಿದ್ದ ನಾನು ಅವರನ್ನು ಆಹ್ವಾನಿಸಲು ಹಾಗೂ ಸಮಾರಂಭಕ್ಕೆ ಕರೆತರಲು ಶಾಸ್ತ್ರಿಗಳ ಅಳಿಯಂದಿರಾದ ಶ್ರೀ ಶಂಕರ್ ಅವರ ಜೊತೆಯಲ್ಲಿ ಹೋಗಿದ್ದೆ. ಆಗ ಯಾವುದೇ ಕಣಿಯನ್ನಾಗಲಿ, ನಸೆನಸೆಯನ್ನಾಗಲೀ, ನೆಪವನ್ನಾಗಲೀ, ಬೂಟಾಟಿಕೆಯನ್ನಾಗಲೀ ಮಾಡದೆ, "ಅಂಥ ವಿದ್ವಾಂಸರನ್ನು ಗೌರವಿಸುವ ಸಂದರ್ಭದಲ್ಲಿ ನಾನು ಸಂತೋಷವಾಗಿ ಪಾಲ್ಗೊಳ್ಳುತ್ತೇನೆ" ಎಂದು ಹೇಳಿದರು. ಸಮಾರಂಭದಲ್ಲ ಭಾಗವಹಿಸಿ, ಆ ಸಮಾರಂಭಕ್ಕೆ ಘನತೆ-ಗೌರವಗಳನ್ನು ತಂದುಕೊಟ್ಟರು. ಇದು ವಿದ್ವಲ್ಲೋಕದ ಬಗ್ಗೆ ಅವರು ಇರಿಸಿಕೊಂಡಿರುವ ಆದರಾಭಿಮಾನಗಳ, ಪ್ರೀತಿ-ವಿಶ್ವಾಸಗಳ ಪ್ರತೀಕವಾಗಿಯೇ ಇದೆಯೆಂದು ನಾನು ನಂಬಿದ್ದೇನೆ. ಇಂಥ ಸಾಹಿತ್ಯಕ ಮತ್ತು ಸಾಂಸ್ಕೃತಿಕ ಸಮಾರಂಭಗಳಲ್ಲಿ ನಿಟ್ಟೂರರಷ್ಟು ಹೆಚ್ಚಿನ ಪ್ರಮಾಣದಲ್ಲಿ ಭಾಗವಹಿಸುವ ಇನ್ನೊಬ್ಬ ವ್ಯಕ್ತಿಯನ್ನು ನಾನು

ಕಂಡಿಲ್ಲ ಎಂಬುದಾಗಿ ಕನ್ನಡ ಸಾಹಿತ್ಯ ಪರಿಷತ್ತಿನ ಮಾಜಿ ಅಧ್ಯಕ್ಷರೂ, ನನ್ನ ಗೌರವಾನ್ವಿತ ಆತ್ಮೀಯ ಮಿತ್ರರೂ, ಆದ ಶ್ರೀ ಎನ್. ಬಸವಾರಾಧ್ಯ ಅವರು ಹೇಳುತ್ತಿರುತ್ತಾರೆ. ಇದಕ್ಕಾಗಿ ಅವರು ಕಾರ್ಯಕ್ರಮಗಳ ಸಂಘಟಕರಿಂದ ಯಾವ ಸೌಲಭ್ಯವನ್ನೂ ಅಪೇಕ್ಷಿಸದೆ (ಇಂಥ ಗೌರವಾನ್ವಿತ ಸ್ಥಾನದಲ್ಲಿರುವ ವ್ಯಕ್ತಿಗಳು ಸಾಮಾನ್ಯವಾಗಿ ನಿರೀಕ್ಷಿಸುವಂತೆ, ತಮ್ಮ ಸ್ವಂತ ವೆಚ್ಚದಲ್ಲಿ ಬಂದು ಹೋಗುತ್ತಾರೆಂಬುದು ಅವರ ವ್ಯಕ್ತಿತ್ವದ ಹಿರಿಮೆಯೇ ಆಗಿದೆ.

ನಿಟ್ಟೂರರು ವ್ಯರ್ಥವಾಗಿ ಕಾಲ ಕಳೆಯುವಂಥವರಲ್ಲ. ಅವರ ಅಧ್ಯಯನಶೀಲತೆ ಗಾದೆ ಮಾತಾಗಿಬಿಟ್ಟಿರುವಂಥದು. ಅವರ ಸ್ನೇಹ-ಸಂಪರ್ಕಗಳು ಅಪೂರ್ವವೂ, ವಿಶಿಷ್ಟವೂ, ಆಗಿರುವಂಥವು. ಹೀಗಾಗಿ, ಅವರೊಡನೆ ಕಲೆತು ಮಾತನಾಡುವಂಥ ಅವಕಾಶ ಸಿಗುವುದೂ ಅಪರೂಪದ ಭಾಗ್ಯವೇ ಸರಿ. ಅವರ ಅನುಭವ ಮತ್ತು ನೆನಪುಗಳು ಹಚ್ಚ ಹಸಿರಾಗಿವೆ. ಆಳವಾಗಿವೆ. ಆತ್ಮೀಯವಾಗಿವೆ. ಅವರ ಅನುಭವ ಕಥನಗಳ ಸಂದರ್ಭದಲ್ಲಿ, ನೆನಪಿನ ಸುರುಳಿಗಳು ಬಿಚ್ಚಿಕೊಳ್ಳುತ್ತ ಹೋಗುವ ಸಂದರ್ಭದಲ್ಲಿ ಶ್ರೋತೃಗಳಿಗೆ ವಿಸ್ಮಯ - ಆನಂದಗಳು ಉಂಟಾಗದೆ ಇರವು. ನಿರಾಡಂಬರವಾದ ಮಾತುಗಳಲ್ಲಿ ಅವರ ನಾವು ಅಷ್ಟಾಗಿ ಕಂಡರಿಯದ ಯಾವುದೋ ವಿಸ್ಮಯದ ಲೋಕಕ್ಕೆ ನಮ್ಮನ್ನು ಕರೆದೊಯ್ಯುವ ಕಲಾತ್ಮಕತೆ, ಜಾದುಗಾರಿಕೆ ಅಪ್ರಯತ್ನವಾಗಿಯೇ ನಮ್ಮನ್ನು ತಟ್ಟುತ್ತದೆ. ಮನಸ್ಸು ಅರಳುತ್ತದೆ. ಆನಂದದ ಅನುಭವವನ್ನು ಪಡೆದುಕೊಳ್ಳುತ್ತದೆ. ಯಾರಾದರೂ ಸಿಕ್ಕರೆ ಸಾಕೆಂದು ಇಲ್ಲದ ಸಲ್ಲದ ಕಂತೆ ಪುರಾಣಗಳನ್ನು ಕಟ್ಟಿ ಕೊರೆಯುವ ವೃದ್ಧಿ - ಚಾಪಲ್ಯ ಅದಾಗಿರದೆ ತಾನಾಗಿ ತಂದುಕೊಂಡ ಬೆರಗಿನ ಲೋಕಕ್ಕೆ ಕೊಂಡೊಯ್ಯುವ ಆತ್ಮೀಯ ಸಂಕಥನ ಅದಾಗಿರುತ್ತದೆ. ಹೀಗಾಗಿ ಅದೊಂದು ವಿನೂತನ ಅನುಭವವೇ ಆಗುತ್ತದೆ. ಇಂಥ ಕೆಲವಾದರೂ ಸಂಕಥನಗಳನ್ನು ಆಲಿಸುವ ಅಪೂರ್ವ ಅವಕಾಶಗಳು ನನಗೆ ದೊರತಿವೆ ಎಂಬುದು ನನಗೆ ಹೆಮ್ಮೆಯ ಸಂಗತಿಯಾಗಿದೆ. ಇವುಗಳು ಕೆಲವು ನಮ್ಮ ನವೋದಯ ಕಾಲದ ಸಾಹಿತ್ಯಿಕ ಬೆಳವಣಿಗೆಗಳ ಮೇಲೂ ಬೆಳಕು ಚೆಲ್ಲುವಂತಿದೆ. ಅವರ ಇಂಥ ನೆನಪುಗಳನ್ನು ದಾಖಲಿಸುವ ಕೆಲಸವನ್ನು ಯಾರಾದರೂ ಮಾಡುವುದು ಒಳಿತು.

ಕೌಟುಂಬಿಕವಾಗಿ ಅವರು ನಡೆದುಕೊಳ್ಳುತ್ತ ಬಂದಿರುವ ಆದರ್ಶಪ್ರಾಯವಾದ ಬಗೆಗಳನ್ನು ಅವರನ್ನು ತೀರ ಹತ್ತಿರದಿಂದ ಬಲ್ಲವರಾಗಿರುವ ಶ್ರೀ ಭೈರಪ್ಪನವರು ಆಗಾಗ್ಗೆ. ನನಗೆ ವಿವರಿಸಿ ಹೇಳಿರುವುದುಂಟು. ಅವರು ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ, ಸಾಹಿತ್ಯಿಕ ವಾಗಿ ಮಾದರಿ ವ್ಯಕ್ತಿಯಾಗಿರುವಂತೆಯೆ ಕೌಟುಂಬಿಕವಾಗಿಯೂ ಪ್ರೀತಿ ವಿಶ್ವಾಸ - ವಾತ್ಸಲ್ಯ ಗಳ ಪ್ರತೀಕವಾಗಿರುವ ಮಹಾಚೇತನವೇ ಆಗಿದ್ದಾರೆ; ಎಲ್ಲರಿಗೂ ಮಧುರಾನುಭವಗಳನ್ನು

ಧಾರೆಯೆರೆದಿದ್ದಾರೆ; ಮಧುರಾನುಭವಗಳನ್ನು ತಾವೂ ಸವಿಯುತ್ತ ಬಂದಿದ್ದಾರೆ. ಬಾಳಿನ ಸಫಲತೆಯ, ಸಾರ್ಥಕತೆಯ ಜೀವಂತ ಸಂಕೇತವಾಗಿ ಉಳಿದಿದ್ದಾರೆ. ಇನ್ನೂ ದೀರ್ಘಕಾಲ ಇಂಥ ಸಂತೋಷ ಆನಂದಗಳನ್ನು ಊಡುತ್ತ - ಸವಿಯುತ್ತ ನಮ್ಮೊಡನೆ ಅವರು ಇರುವಂಥ ಭಾಗ್ಯ ನಮ್ಮದಾಗಿರಲಿ ಎಂದು ಹಾರೈಸೋಣ.



# ಆದರ್ಶ ಮೌಲ್ಯಗಳ ಮಹತ್ತರ ಸಂಕೇತ ನಿಟ್ಟೂರು

. . . . . . . . . . . . . . . . . . . . . . . . . ✍ ಎ.ಎಸ್. ಮೂರ್ತಿ*

ನಿಟ್ಟೂರು -೧೦೦ : ನೂರು ವರ್ಷಗಳ ಕಾಲ ತುಂಬು ಜೀವನ ನಡೆಸಿ - ಈಗಲೂ ಅದೇ ಜೀವನೋತ್ಸಾಹ - ಲವಲವಿಕೆ ಉಳಿಸಿಕೊಂಡು-ಒಪ್ಪಿದ ಎಲ್ಲಾ ಕಾರ್ಯಕ್ರಮಕ್ಕೂ ಸಕಾಲದಲ್ಲಿ ಹಾಜರಾಗಿ ಸಂಘ, ಸಂಸ್ಥೆಗಳ ಉತ್ಸಾಹೀ ಕಾರ್ಯಕರ್ತರನ್ನ, ಪ್ರತಿಭಾವಂತರನ್ನ - ಗುರುತಿಸಿ, ಗೌರವಿಸುತ್ತ ಬಂದಿರುವ ಮಾನ್ಯ ನಿಟ್ಟೂರು ಶ್ರೀನಿವಾಸರಾಯರು, ಉತ್ತಮ ಕಲಾಭಿರುಚಿಗೆ, ಆದರ್ಶಮೌಲ್ಯಗಳಿಗೆ ಮಹತ್ತರ ಸಂಕೇತ.

ಬೆಂಗಳೂರೇ ನಿಟ್ಟೂರರ ಹುಟ್ಟೂರು. ದೊಡ್ಡೋರು-ಚಿಕ್ಕೋರು-ಬಡವರು-ಶ್ರೀಮಂತರು ಎಂಬ ಭೇದವಿಲ್ಲ ಅವರಿಗೆ. ಇಂಥವರನ್ನು ಕಂಡಾಗಲೇ ತುಂಬಿದ ಕೊಡ ತುಳುಕುವುದಿಲ್ಲ ಎಂಬ ಗಾದೆ ನೆನಪಾಗುವುದು.

೨೪ ಆಗಸ್ಟ್ ೧೯೦೩ರಂದು ಹುಟ್ಟಿದ ನಿಟ್ಟೂರು- ಸೈನ್ಸ್ ಪದವಿ ಪಡೆದದ್ದು ಮೈಸೂರು ಯೂನಿವರ್ಸಿಟಿಯಿಂದ - ಲಾ ಪದವಿ ಪಡೆದದ್ದು ಮದರಾಸ್ ಯೂನಿವರ್ಸಿಟಿಯಿಂದ. ವಕೀಲ ವೃತ್ತಿಯನ್ನು ನೆಚ್ಚಿ ಬದುಕಿನ ಅಖಾಡಕ್ಕೆ ಇಳಿದದ್ದು ೧೯೨೭ರಲ್ಲಿ. ಬಳೇಪೇಟೆಯಲ್ಲಿದ್ದ ಹೆಚ್.ವಿ. ನಾರಾಯಣ್ ರಾವ್ ಅವರ ಕಛೇರಿ ತಮ್ಮ ಕಾರ್ಯಕಲಾಪಗಳ ಕೇಂದ್ರ ಮಾಡಿಕೊಂಡು ಜನಮನದ ನಾಡಿ ಮಿಡಿತವರಿತು. ಸತ್ಯಾನ್ವೇಷಣೆಗೆ ಮುಂದಾಗಿ-ನ್ಯಾಯದ ತಕ್ಕಡಿ ಹಿಡಿದರು.

---

* ೬೩, ಕಲಾಮಂದಿರ, ೫ನೇ ಕ್ರಾಸ್, ಅ.ನ. ಸುಬ್ಬರಾವ್ ರಸ್ತೆ
ಹನುಮಂತನಗರ, ಬೆಂಗಳೂರು - ೫೬೦೦೧೯

**ಪ್ರತಿಷ್ಠಿತ ಹುದ್ದೆಗಳು:** ತಮ್ಮ ವೃತ್ತಿಯಲ್ಲಿ ಅವರು ತೋರಿದ ಶಿಸ್ತು, ಸಹನೆ, ಅಚ್ಚುಕಟ್ಟು ಹಾಗೂ ನ್ಯಾಯ ಪಕ್ಷಪಾತ ನಿಲುವಿನಿಂದಾಗಿ ವಕೀಲಿ ವೃಂದದ ಮೆಚ್ಚುಗೆ ಗಳಿಸಿದ್ದರಿಂದಾಗಿಯೇ ಪ್ರತಿಷ್ಠಿತ ಹುದ್ದೆಗಳು ಅವರನ್ನರಸಿ ಬಂತು.

೧೯೫೨ರಲ್ಲಿ ನಿಟ್ಟೂರು ಅಡ್ವೋಕೇಟ್ ಜನರಲ್ ಆದರು. ೫೫ರಲ್ಲಿ ಹೈಕೋರ್ಟ್ ಜಡ್ಜ್‌ಪೀಠ ಅಲಂಕರಿಸಿದರು. ೬೧ರಲ್ಲಿ ಚೀಫ್ ಜಸ್ಟಿಸ್. ನಂತರ ಗೌರ್ನರ್ ಆಫ್ ಮೈಸೂರು. ಗೌರ್ನಮೆಂಟ್ ಆಫ್ ಇಂಡಿಯಾದ ಮೊದಲ ಸೆಂಟ್ರಲ್ ವಿಜಿಲೆನ್ಸ್ ಕಮೀಶನರ್ ಆಗಿ ನೇಮಕವಾದರು ೧೯೬೪ರಲ್ಲಿ.

**ಸರಳತೆಯ ಪ್ರತಿಮೂರ್ತಿ :** ತಾವು ಹಿಮಾಲಯದೆತ್ತರ ಬೆಳೆದರೂ ನೀಳಕಾಯದ ಈ ಗಾಂಧೀವಾದಿ ಎಂದೂ ಅಬ್ಬರ-ಆಡಂಬರಗಳಿಗೆ ಮಾರು ಹೋಗದೆ-ಗಾಂಧೀಜಿ ಯವರಂತೆಯೇ ಸರಳತೆಯ ಪ್ರತೀಕವಾಗಿದ್ದಾರೆ.

ಅವರು ಭಾಗವಹಿಸಿದ ನೂರಾರು ಕಾರ್ಯಕ್ರಮಗಳಿಗೆ ನಾನೂ ಒಬ್ಬ ಪ್ರೇಕ್ಷಕನಾಗಿ ಹೋಗಿರುವವ. ನಿಟ್ಟೂರರು ಭಾಗವಹಿಸುವ ಕಾರ್ಯಕ್ರಮವೆಂದಾಗ ಅದಕ್ಕೊಂದು ಘನತೆ, ಗೌರವ-ಪ್ರತಿಷ್ಠೆ ಬರುತ್ತಿದ್ದುದು ಸುಳ್ಳಲ್ಲ. ಸಾಹಿತ್ಯ, ಕಲೆ, ಸಂಸ್ಕೃತಿ, ನಾಟಕದ ಕಾರ್ಯ ಕ್ರಮಗಳಲ್ಲಿ ಅವರ ಒಡನಾಟ ಹಾಗೂ ಅವರ ಮಾತಿನ ಸತ್ವಪೂರ್ಣ ಹೇಳಿಕೆಗಳು-ಯುವ ಜನಾಂಗಕ್ಕೊಂದು ಮಾದರಿಯಾಗಿರುತ್ತಿತ್ತು ಎಂದರೂ ತಪ್ಪಿಲ್ಲ.

ಈ ಎತ್ತರಕ್ಕೆ ಬೆಳೆದ ಬಹಳಷ್ಟು ಮಂದಿಗೆ ತಮ್ಮ ಆರಂಭದ ದಿನಗಳು ನೆನಪೇ ಇಲ್ಲದವರಂತೆ ನಟಿಸುತ್ತಾರೆ. ಹಳೆಯ ಜನರನ್ನು ತುಂಬ ಹೊಸಬರಂತೆ ಕಾಣುತ್ತಾರೆ. ಹಲವರಂತೂ ಹತ್ತಿದ ಏಣಿ ಸಂಪೂರ್ಣವಾಗಿ ಮರೆತು - ತಾವು ಆಕಾಶದಿಂದಲೇ ಉದುರಿದ ಉದ್ಭವಮೂರ್ತಿಗಳೆಂದು ಭ್ರಮಿಸುತ್ತಾರೆ. ಅಧಿಕಾರಿಗಳಂತೆ ವರ್ತಿಸುತ್ತಾರೆ ಕುರ್ಚಿಯಲ್ಲಿ ಕೂತಷ್ಟು ದಿನ. ಇಂಥ ಎಲ್ಲ ಮಾತುಗಳಿಗೆ ಅಪವಾದ ಮಾನ್ಯ ನಿಟ್ಟೂರು ಶ್ರೀನಿವಾಸರಾವ್.

ಅವರ ನಡೆ-ನುಡಿಯನ್ನ ಕಲೆಯ ಬಗೆಗಿನ ಪ್ರೀತಿಯನ್ನ, ಸಾಹಿತ್ಯದ ಬಗೆಗಿದ್ದ ಒಲುವನ್ನ, ಮಾನವೀಯತೆಗೆ ಅವರು ನೀಡುತ್ತಿದ್ದ ಮಹತ್ವವನ್ನು ನಾನು ಕಣ್ಣಾರೆ ಕಾಣುವುದು ಸಾಧ್ಯವಾದದ್ದು ನಮ್ಮ ತಂದೆ ಅ.ನ. ಸುಬ್ಬರಾಯರ ಕಲಾಮಂದಿರಕ್ಕೆ ಅವರು ನಿಕಟವರ್ತಿಗಳಾಗಿದ್ದುದರಿಂದ. ಮನೆಯಲ್ಲಿ ಜಾರಿಬಿದ್ದು ಒಂದು ಸಣ್ಣ ಅಪಘಾತ ವಾದ್ದರಿಂದಾಗಿ-ಮುಂಚಿನಷ್ಟು ಸುಲಭವಾಗಿ ನಡೆದು ಬರುವುದು ಕಷ್ಟವಾಗಿದ್ದರೂ - ಬಹಳಷ್ಟೂ ಸಾಂಸ್ಕೃತಿಕ ಕಾರ್ಯಕ್ರಮಗಳಿಗೆ ಅವರು 'ವಾಕರ್' ಬಳಸಿ ಬರುತ್ತಿದ್ದಾರೆ. ಮಹಡಿ ಹತ್ತುವುದು ಕಷ್ಟವಾದಾಗ - ಕಾರ್ಯಕರ್ತರನ್ನು ಕೆಳಗೆ ಕರೆಸಿ ಶುಭ ಕೋರಿ ಹಾರೈಸುವುದು ಅವರ ಸಜ್ಜನಿಕೆಯ ಸ್ವಭಾವ.

**ನಿಟ್ಟೂರು ನಿರ್ವಹಿಸಿದ ಮೊದಲ ಕೇಸ್ :** ನಮ್ಮ ಕಲಾಮಂದಿರದ ಕಾರ್ಯಕಲಾಪಗಳ ವಿವರ ತಿಳಿಸಲೆಂದು ಮೊನ್ನೆ ಅವರ ಮನೆಗೆ ತೆರಳಿದಾಗ ಕೇಳಿದೆ.

"ನಿಮ್ಮ ವಕೀಲಿ ವೃತ್ತಿಯ ಅನುಭವಗಳನ್ನು, ಅಕ್ಷರದಲ್ಲಿ ದಾಖಲಿಸಿದರೆ ಅದೊಂದು ಅದ್ಭುತ ಗ್ರಂಥವಾದೀತು. ಆ ಹಳೆಯ ದಿನಗಳಲ್ಲಿ ನಿಮಗೆ ಹಸಿರಾಗಿರುವ ನೆನಪು ಯಾವುದು?" ತಮ್ಮ ಕೋಣೆಯ ಮಂಚದ ಪಕ್ಕದ ಕುರ್ಚಿಯಲ್ಲಿ ಆರಾಮವಾಗಿ ಕುಳಿತಿದ್ದ ನಿಟ್ಟೂರರರು ತಿಳಿಯಾದ ಒಂದು ಮುಗ್ಧ ನಗೆ ಚೆಲ್ಲಿ "ನಾನೀಗ ಕಲಾಮಂದಿರದ ಅ.ನ.ಸುಬ್ಬರಾಯರನ್ನು ನೆನೆಸಿಕೊಳ್ಳಲು ಮುಖ್ಯ ಕಾರಣವಿದೆ. ಆತ ಹೃದಯವಂತಿಕೆಯಿದ್ದ ಸಹೃದಯಿ. ಕಲೆ, ಸಾಹಿತ್ಯ, ಸಂಸ್ಕೃತಿಯ ನಾಟಕಗಳ ಬಗ್ಗೆ ಅವರಿಗೆ ಅಪಾರ ಕಾಳಜಿ ಇತ್ತು. ಅದರಿಂದಲೇ ಅವರೊಡನೆ ನನ್ನ ಒಡನಾಟ ಹೆಚ್ಚು ಇತ್ತು. ಕಲಾಮಂದಿರ ಚಿಕ್ಕಪೇಟೆ ಕಾಶೀ ವಿಶ್ವೇಶ್ವರನ ಗುಡಿ ಬಳಿ ಆರಂಭವಾಗಿ ಹನುಮಂತನಗರದ ಸ್ವಂತ ಕಟ್ಟಡಕ್ಕೆ ಬರುವವರೆಗೆ ಅದರ ಏಳು ಬೀಳುಗಳನ್ನು ನಾನು ಚೆನ್ನಾಗಿ ಬಲ್ಲೆ. ನನಗಿನ್ನೂ ಹಸಿರಾದ ನೆನಪು ಎಂದರೆ ನಾನು ವಕೀಲಿ ವೃತ್ತಿ ಆರಂಭಿಸಿದಾಗ - ನನಗೆ ಮೊದಲ ಕೇಸ್ ನೀಡಿದವರು. ಅನಸು, ನಮ್ಮ ಕಛೇರಿಯೂ ಬಳೇಪೇಟೆಯಲ್ಲೇ ಇತ್ತು ೧೯೨೮ರಲ್ಲಿ. ಈ ಮಾತನ್ನು ಇದುವರೆಗೆ ಎಲ್ಲೂ ಹೇಳಿರಲಿಲ್ಲ. ಈಗ ಹೇಳಿದ್ದೇನೆ. ತುಂಬ ರೋಚಕವೆನಿಸಿದ ಮೊದಲ ದಿನದ ಆ ಅನುಭವ ಎಲ್ಲಾದರೂ ಮರೆಯುವುದು ಸಾಧ್ಯವೇ?" ಎಂದು ನೆನಪು ಮೆಲುಕು ಹಾಕಿದರು.

- ಇಂಥ ಸಜ್ಜನಿಕೆ ಹಾಗೂ ಕೃತಜ್ಞತೆ ಅರ್ಪಿಸುವ ಮನೋಭಾವವೇ ಅವರ ವಿಶಿಷ್ಟ ವ್ಯಕ್ತಿತ್ವದ ಕುರುಹು ಎಂದುಕೊಂಡೆ.

**ಡಾ|| ನಿಟ್ಟೂರು ಮತ್ತು ಗಾಂಧೀಜಿ ಪ್ರಭಾವ :** ಆರಂಭಕ್ಕೆ ಹಿಂದೀ ಪ್ರಚಾರಕರೂ ಆಗಿದ್ದ ನಿಟ್ಟೂರು ಶ್ರೀನಿವಾಸರಾವ್ - ಹಿಂದಿಯಲ್ಲಿ ಗೌರವ ಡಾಕ್ಟರೇಟ್ ಗಳಿಸಿದ ಡಾ|| ನಿಟ್ಟೂರ್ ಎಂಬುದು ಬಹು ಮಂದಿಗೆ ತಿಳಿದೇ ಇಲ್ಲ. ಅವರಿಗೂ ಅದು ಬೇಕಿಲ್ಲ ಆ ಕಾರಣಕ್ಕೆ ಡಾಕ್ಟರ್ ಎಂದು ಹಾಕಿಕೊಳ್ಳಲು ಒಲವು ತೋರಲೇ ಇಲ್ಲ ಅವರು. ವಕೀಲಿ ವೃತ್ತಿಗೆ ತೋರಿದ ನಿಷ್ಠೆಯನ್ನೇ ಅವರು ಹಿಂದೀ ಪ್ರಚಾರಕರಾಗಿದ್ದಾಗಲೂ ತೋರಿದರು. ಅಪ್ಪಟ ಗಾಂಧೀವಾದಿಗಳಾದ ನಿಟ್ಟೂರು ಮೆಜಸ್ಟಿಕ್ ಥಿಯೇಟರಿನಲ್ಲಿ ಹಿಂದಿ ಪ್ರಚಾರ ಕಾರ್ಯಕರ್ತರು 'ಕಾನ್‌ವೊಕೇಷನ್' ಏರ್ಪಡಿಸಿದಾಗ ಮಹಾತ್ಮಾಗಾಂಧೀಜಿ ಅಲ್ಲಿಗೆ ಬರುತ್ತಾರೆ ಎಂಬುದೇ ಒಂದು ಭಾರಿ ಸುದ್ದಿಯಾಗಿತ್ತು ೧೯೩೫ರಲ್ಲಿ. ತಮ್ಮ ನೆಚ್ಚಿನ ಆರಾಧ್ಯ ದೈವ ಕಣ್ಣಾರೆ ಕಾಣುವ ಸೌಭಾಗ್ಯ ನಿಟ್ಟೂರರ ಉತ್ಸಾಹ ಇಮ್ಮಡಿಸಲು ಕಾರಣವಾಗಿತ್ತು.

ಆ ಕುರಿತು ನೆನಪು ಹಂಚಿಕೊಂಡಾಗಲಂತೂ ನಿಟ್ಟೂರು ಭಾವಪರವಶರಾಗಿದ್ದರು.

"೧೯೩೫ರಲ್ಲಿ ಗಾಂಧೀಜಿ ಕಾನ್‌ವೊಕೇಷನ್‌ಗೆ ಬಂದಾಗ ಸಂಭ್ರಮದಿಂದ ಓಡಾಡಿದವ ನಾನು. ಆಗ ಮೆಜಸ್ಟಿಕ್ ಎದುರೇ ಕಲಾಮಂದಿರವಿತ್ತು. ಕಲೆ, ಕುಶಲಕಲೆಗೆ ಪ್ರಥಮ ಪ್ರಾಧಾನ್ಯವಿತ್ತು. ಬಡಮಂದಿಯ ಬದುಕಿಗೆ ದಾರಿಮಾಡಿದ್ದ ಅನಸು ಅವರ ಈ ಕಲಾಶಾಲೆಗೆ ನಾನು ನಿಕಟವರ್ತಿಯಾಗಿದ್ದೆ. ಅದರಿಂದಾಗಿ ಗಾಂಧೀಜಿ ಕಲಾಮಂದಿರಕ್ಕೂ ಹೆಮ್ಮೆಯ ವಿಷಯ ಎನಿಸಿತ್ತು. ಆನಂತರ ಮತ್ತೊಮ್ಮೆ ಗಾಂಧೀಜಿ ಟೌನ್‌ಹಾಲ್‌ಗೂ ಬಂದಿದ್ದರು. ಆಗಲೂ ನಾನಲ್ಲಿ ಸ್ವಯಂ ಸೇವಕನಾಗಿದ್ದೆ" ಎಂದು ಹೆಮ್ಮೆಯಿಂದಲೇ ಹೇಳಿದರು.

.....ಅವರ ದರ್ಶನದಿಂದ ಮೆಚ್ಚುಗೆಯಿಂದ ಸಂಭ್ರಮಿಸಿ ಸ್ವಾತಂತ್ರ್ಯ ಕಹಳೆ ಊದ ಹೊರಟವರು ಬಹುಮಂದಿ. ಅಂತಹ ಮೈಸೂರಿನ ತಗಡೂರು ರಾಮಚಂದ್ರರಾಯರೂ ಒಬ್ಬರು. ಅವರು ಖಾದಿಕೇಂದ್ರಕ್ಕೆ ಭೇಟಿ ಕೊಟ್ಟು ಗಾಂಧೀಜಿ ಅವರ ದೇಶಪ್ರೇಮ ಮೆಚ್ಚಿದ್ದರ ಸ್ಫೂರ್ತಿಯಿಂದಾಗಿಯೇ ಅವರು ಹರಿಜನ ವಿದ್ಯಾರ್ಥಿಗಳಿಗಾಗಿ ಹಾಸ್ಟಲ್ ನಡೆಸುವ ಮನ ಮಾಡಿದ್ದು.

**ಸ್ವಾತಂತ್ರ್ಯ ಹೋರಾಟಕ್ಕೆ ಸಜ್ಜು :** ಗೊರೂರು ರಾಮಸ್ವಾಮಿ ಅಯ್ಯಂಗಾರ್, ನಿಟ್ಟೂರು, ತಗಡೂರು ರಾಮಚಂದ್ರರಾವ್, ವಿ.ಎಸ್. ನಾರಾಯಣರಾವ್, ಹೆಚ್. ಎಸ್. ದೊರೆಸ್ವಾಮಿ ಮುಂತಾದವರು ಅಂದು ಸ್ವದೇಶಿ ಚಳವಳಿ-ಸ್ವಾತಂತ್ರ್ಯ ಹೋರಾಟ, ಮುಂತಾದವುಗಳ ಬಗ್ಗೆ ತುಂಬ ಪ್ರೀತಿ ತೋರಿದವರು. ಭಾಷಣ, ಚಳವಳಿ, ಹೋರಾಟಕ್ಕೆ ಕುಮ್ಮಕ್ಕು ನೀಡುವ ಯತ್ನಗಳು, ಸಂಘಟನೆ ಒಂದೆಡೆ ನಡೆಯುತ್ತಿದ್ದರೆ, ಕತೆ, ಕವನ, ಲಾವಣಿಗಳ ಮೂಲಕ ದೇಶಭಕ್ತಿ ಗೀತೆಗಳ ಮೂಲಕ ದೇಶಪ್ರೇಮ ಬಿತ್ತುವ, ಸ್ವಯಂ ಸೇವಕರನ್ನು ಸಜ್ಜುಗೊಳಿಸುವ - ಕಾರ್ಯಕ್ರಮಗಳು ಸದ್ದಿಲ್ಲದೆ ನಡೆಯುತ್ತಿದ್ದುವು.

ಅದು ಹೋರಾಟದ ಸಾಗರಕೆ ಸಾವಿರಾರು ನದಿಗಳು ಎಂಬ ಸಾಲನ್ನು ನೆನಪಿಸುವ ಘಟ್ಟ. ದೇಶದಲ್ಲೇನಾಗುತ್ತಿದೆ. ಬ್ರಿಟಿಷರ ದಬ್ಬಾಳಿಕೆಯನ್ನು ತಡೆದು ಪ್ರತಿಭಟಿಸುವುದು ಹೇಗೆ ಎಂದು ಚಿಂತಿಸುವ ದಿಕ್ಕಿನಲ್ಲಿ ನಿಟ್ಟೂರರು ಪ್ರಮುಖ ಪಾತ್ರವಹಿಸಿದವರು.

ಗಾಂಧೀಜಿ ಜೈಲಿನಲ್ಲಿ - ಗಾಂಧಿವಾದಿಗಳು ಬಯಲಿನಲ್ಲಿ ಇಬ್ಬರ ನಡುವೆ ಸೆರೆಮನೆಯ ಕಬ್ಬಿಣದ ಸರಳುಗಳು. ಗಾಂಧೀಜಿ ಕರೆಗೆ ಓಗೊಡುವ ಸಹಸ್ರಾರು ಕೊರಳುಗಳು ಕಾತರದಿಂದ ಕಾದಿದ್ದವು ಆಚೆ.

ಈ ಸಂದರ್ಭ ನೆನಪಿಸಿಕೊಂಡ ನಿಟ್ಟೂರರು ಹೇಳಿದರು.

"ಗಾಂಧೀಜಿ ಅಸಹಕಾರ ಚಳವಳಿಗೆ ಕರೆಕೊಟ್ಟ ಕಾರಣಕ್ಕೆ ಬ್ರಿಟಿಷರ ಕೆಂಗಣ್ಣಿಗೆ ಗುರಿಯಾಗಿ ಜೈಲು ಸೇರಬೇಕಾದದ್ದು ಅನಿವಾರ್ಯವಾಯಿತು. ಆಗ ಅವರು ತಮ್ಮ ಅನಿಸಿಕೆಗಳನ್ನು ಖಂಡತುಂಡವಾಗಿ ಮಂಡಿಸಿ, ಬ್ರಿಟಿಷರ ದಬ್ಬಾಳಿಕೆ ಖಂಡಿಸಿ-ವಿಚಾರಣೆ ನಡೆದಾಗ ಖಾರವಾಗಿ ಪ್ರತಿಭಟಿಸಿ ಬ್ರಿಟಿಷರಿಗೆ ಸವಾಲು ಹಾಕಿದ್ದರು. ಆ ಎಲ್ಲ ಅಂಶ ದೇಶಪ್ರೇಮಿಗಳಿಗೆ ತಿಳಿಯುವುದು ಅಗತ್ಯವಾಗಿತ್ತು. ಅದೊಂದು ರೀತಿ ಸ್ವಾತಂತ್ರ್ಯ ಕಹಳೆಗೆ ನಾಂದಿಯೂ ಹೌದು. ಅ.ನ.ಸುಬ್ಬರಾಯರು 'ಮಹಾತ್ಮಾಗಾಂಧಿ ವಿಚಾರಣೆ' ಎಂಬ ಕೃತಿ ರಚಿಸಿ ಅಚ್ಚಿಸಿ ಹೊರತಂದದ್ದು ಒಂದು ಚರಿತ್ರಾರ್ಹ ಘಟನೆ. ಆ ಹೊತ್ತಿಗೆಯನ್ನು ತುಂಬ ಪ್ರೀತಿಯಿಂದ ಮಹಾಜನತೆಗೆ ಹಂಚುವ ಕಾಯಕವೂ ನನ್ನದಾಗಿತ್ತು. ಜನಮನದ ಅಭಿಪ್ರಾಯ ಗಾಂಧೀ ವಿಚಾರಧಾರೆಯತ್ತ ಹರಿಯಲು ಇಂಥ ಪ್ರಕಟನೆಗಳು ತುಂಬ ಮುಖ್ಯ ಎನಿಸಿತ್ತು ನಮ್ಮಂಥವರಿಗೆ ಎಂದಾಗ ಒಂದು ರೀತಿ ನೆಮ್ಮದಿಯ ನಿಟ್ಟುಸಿರಿತ್ತು.

**ಸತ್ಯ ಶೋಧನೆಗೆ ಕನ್ನಡದ ಕೃತಿಗಳು :** ನಿಟ್ಟೂರರಿಗೆ ಸಾಹಿತ್ಯಕ, ಸಾಮಾಜಿಕ, ರಾಜಕೀಯ ನೀತಿಗಳ ಬಗ್ಗೆ ತಮ್ಮದೇ ಆದ ಖಚಿತ ನಿಲುವುಗಳಿವೆ. ಅದರಿಂದಾಗಿಯೇ ೧೯೨೮ರಲ್ಲಿ ಸತ್ಯ ಶೋಧನ ಪುಸ್ತಕ ಭಂಡಾರ ಆರಂಭಿಸಿದರು-ಕೋಟೆಯ ಬಳಿ.

ಖ್ಯಾತಲೇಖಕರ ಬರಹಗಳು ಜನರ ಅರಿವಿನ ಮಟ್ಟ ಹೆಚ್ಚಿಸಲು ಸಹಕಾರಿ ಪುಸ್ತಕ ಪ್ರೀತಿಯಿಂದಾಗಿ ಓದುಗರು ಎಚ್ಚೆತ್ತಾರು, ಜನಜಾಗೃತಿಯೂ ಆದೀತು ಎಂಬ ಕಾರಣಕ್ಕೆ ಕಡಲತೀರದ ಭಾರ್ಗವ ಕೆ. ಶಿವರಾಮ ಕಾರಂತ, ಎಂ.ಆರ್. ಶ್ರೀನಿವಾಸಮೂರ್ತಿ, ವಿ. ಸೀತಾರಾಮಯ್ಯ, ಗೊರೂರು ರಾಮಸ್ವಾಮಿ ಅಯ್ಯಂಗಾರ್, ಎಲ್. ಗುಂಡಪ್ಪ, ಆನಂದ, ಎಂ. ರಾಮರಾವ್, ನಾಟಕಕಾರ, ಕೈವಾರ ರಾಜಾರಾವ್ ಮುಂತಾದವರ ಕೃತಿಗಳನ್ನೇ ಅಚ್ಚಿಸಿ ಕನ್ನಡಿಗರಿಗಿತ್ತರು.

ಕನ್ನಡದ ಮಹಾನ್ ನಾಟಕಕಾರ 'ಸಂಸ'ರ ಕೃತಿಗಳನ್ನೆ ನಿಟ್ಟೂರರು ಅಚ್ಚಿಸಿದರು ಎಂಬುದನ್ನು ನಾವು ಮರೆಯುವಂತಿಲ್ಲ.

ಸಾಹಿತ್ಯದ ಬಗ್ಗೆ ನಿಟ್ಟೂರರಿಗೆ ಅಪಾರ ಒಲುವು ಮೂಡಲು ಕನ್ನಡ ಸಾಹಿತ್ಯ ಪರಿಷತ್ತಿನೊಂದಿಗೆ ಅವರಿಗೆ ೭೦ ವರ್ಷದ ಒಡನಾಟವಿತ್ತು ಎಂಬುದೂ ಮುಖ್ಯ.

**ಪರಿಷತ್ ಸಂಪರ್ಕ :** ಸಾಹಿತ್ಯದ ಬಗೆಗಿನ ಒಲುವು-ನಿಲುವುಗಳರಿತ ಪರಿಷತ್ತು ನಿಟ್ಟೂರರನ್ನೇ ಬರೋಡದ ಹೊರನಾಡು ಕನ್ನಡಿಗರ ಸಮ್ಮೇಳನದ ಅಧ್ಯಕ್ಷರನ್ನಾಗಿ ಆರಿಸಿತು ಒಮ್ಮೆ-೧೯೭೭ರಲ್ಲಿ ತುಮಕೂರು ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು ನಿಟ್ಟೂರು.

**ಕೋಟೆಗೆ ಬಂತು ಪುಸ್ತಕ ಭಂಡಾರ :** "ನಾವು ಪ್ರಕಟಿಸಿದ ಕೃತಿಗಳು ಮಾತ್ರವಲ್ಲ. ಕನ್ನಡದಲ್ಲಿ ಅಚ್ಚಾದ ಎಲ್ಲ ಕೃತಿಗಳೂ ಕನ್ನಡಿಗರಿಗೆ ದೊರಕಬೇಕು ಎಂಬ ಆಶಯ ನನ್ನದಾದುರಿಂದಲೇ ಸತ್ಯ ಶೋಧನಾ ಪುಸ್ತಕ ಭಂಡಾರ ಆರಂಭವಾದದ್ದು"

"ಸಿಟಿ ಮಾರ್ಕೆಟಿನ ಕೋಟೆಯ ಬಳಿಯೇ ಅದನ್ನೇ ಆರಂಭಿಸಲು ಕಾರಣ?

"ಅದು ಇನ್ನೊಂದು ಕಥೆ. ೧೯೨೮ರಲ್ಲಿ ನನ್ನ ಆಫೀಸ್ ಇದ್ದದ್ದು ಚಿಕ್ಕಪೇಟೆಯ ಮಲ್ಲಪ್ಪ ಆಫೀಸ್ ಮೇಲುಗಡೆ. ಆಗ ಕೋಟೆಯಲ್ಲಿದ್ದ ಖಾದಿವಸ್ತ್ರಾಲಯದ ಸಂಪೂರ್ಣ ಜವಾಬ್ದಾರಿ ಹೊತ್ತಿದ್ದವರು ನನ್ನ ಮಿತ್ರರಾದ ಸದಾಶಿವನ್"

"ಅಂದ್ರೆ ಗಾನಕೋಗಿಲೆ ಎಂ.ಎಸ್. ಸುಬ್ಬುಲಕ್ಷ್ಮಿ ಅವರ ಗಂಡ ತಾನೆ?"

"ಹೌದೂ....ಖಾದಿವಸ್ತ್ರಾಲಯದ ಪಕ್ಕದಲ್ಲೊಂದು ಮಳಿಗೆ ಖಾಲಿ ಆಗಿತ್ತು. ಆಗ ಸದಾಶಿವನ್ ನಿಟ್ಟೂರರ ಪುಸ್ತಕ ಭಂಡಾರ ಇಲ್ಲಿ ಬಂದರೆ ಚೆನ್ನಾಗಿರುತ್ತೆ. ಇಲ್ಲಿ ಆದರೆ ಕೃತಿಗಳು ಹೆಚ್ಚು ಮಂದಿ ಕನ್ನಡಿಗರ ಕಣ್ಣಿಗೆ ಬೀಳುತ್ತೆ ಅಂತ ಆಶಿಸಿ-ನನಗೆ ಹೇಳಿಕೂಡ ಹೇಳದೆ-ಮಳಿಗೆ ಪಡೆದು ಆನಂತರ ಅದನ್ನ ನನ್ನ ಸುಪರ್ದಿಗೆ ಕೊಟ್ಟರು. ಅವರ ಒಳ್ಳೆತನಕ್ಕೆ ಮಾರುಹೋದೆ. ಒಳ್ಳೆ ಸ್ಥಳವಾದ್ದರಿಂದ ಯಾಕೆ ಬೇಡ ಅನ್ನಲಿ. ಬಂದೆ. ಅಲ್ಲಿಗೆ ನನ್ನ ಮಗ ಚಂದ್ರಶೇಖರ ಪುಸ್ತಕ ಭಂಡಾರದ ಬಗ್ಗೆ ಹೆಚ್ಚು ಆಸ್ಥೆವಹಿಸಿದ್ದು - ನನ್ನ ಕೆಲಸ ಕಾರ್ಯ ನಿರಾತಂಕವಾಗಿ ಮುನ್ನಡೆಸಲು ಅನುಕೂಲ ಆಯಿತು. ವರುಷಗಳು ಉರುಳಿದ ನಂತರ ಅವರ ಕೆಲಸ ಕಾರ್ಯಗಳ ಒತ್ತಡ ಅತಿಯಾಯಿತು. ಆಗ ಓರಿಯಂಟ್ ಲಾಂಗಮನ್ಸ್ ಕಂಪನಿಯವರು. ಕನ್ನಡ ಕೃತಿಗಳ ಪ್ರಕಟನೆಗೂ ಒಲುವು ತೋರಿಬಂದರು. ಆಗ ಅದನ್ನು ಅವರಿಗೆ ಬಿಟ್ಟುಕೊಟ್ಟೆವು. ಈಗ ಅವರೇ ಅದನ್ನ ಸೌತ್‌ಪೆರೇಡಲ್ಲಿ ಮುಂದುವರಿಸಿದ್ದಾರೆ. ಅನೇಕ ಹಿರಿ-ಕಿರಿಯ ಲೇಖಕರು ಹತ್ತಿರವಾಗೋಕೆ ಸತ್ಯಶೋಧನ ಪುಸ್ತಕ ಭಂಡಾರವೂ ಕಾರಣವಾಗಿತ್ತು. ಅಂದ್ರೇನು ತಪ್ಪಿಲ್ಲ" ಎಂದರು.

**ನಿಟ್ಟೂರು - ರಾಜಾಜಿ :** ಸಾಹಿತ್ಯ ಮಿತ್ರರು, ಚಿತ್ರಕಲಾವಿದರು- ನಾಟಕ-ಸಂಗೀತ ಪ್ರೇಮಿಗಳು ವಕೀಲಿ ವೃಂದದ ಮಿತ್ರರು ನಿಟ್ಟೂರರಿಗೆ ಆತ್ಮೀಯರಾಗಿದ್ದಂತೆ - ರಾಜಕೀಯದ ಘಟಾನಘಟಿಗಳೂ ಇವರ ನಿಕಟವರ್ತಿಗಳಾಗಿದ್ದವರೆ. ಅಂಥ ಎಷ್ಟೋ ಮಂದಿಯಲ್ಲಿ ರಾಜಾಜಿ ಪ್ರಮುಖರು. ಅವರ ಪ್ರಸ್ತಾಪ ಬಂದಾಗ ಹೇಳಿದರು.

"ಮಾಸ್ತಿಯವರಿಗೆ ತುಂಬ ಆತ್ಮೀಯ ಗೆಳೆಯರಾಗಿದ್ದ ನವರತ್ನ ರಾಮರಾಯರು, ಎಂ.ವಿ. ಕೃಷ್ಣರಾವ್ ವಯಸ್ಸಿನವರಾಗಿದ್ರು. ರಾಜಾಜಿ ನವರತ್ನ ರಾಮರಾಯರಿಗೆ ಪರಮಾಪ್ತರಾಗಿದ್ದರು. ಅವರು ಬೆಂಗಳೂರಿಗೆ ಬಂದಾಗೆಲ್ಲ ನವರತ್ನ ರಾಮರಾಯರ

ಮನೇಲ್ಲೇ ಇಳ್ಕೊಳ್ಳೋರು. ಆಗ ಅಲ್ಲಿಗೆ ಹೋಗಿ ಬಂದು ರಾಮರಾಯರ ಪರಿಚಯ ನನಗೆ ಕ್ರಮೇಣವಾಗಿ ಆಯಿತು. ಇಂಥ ಎಲ್ಲ ಮಂದಿಯ ಸ್ನೇಹ ಸೌಭಾಗ್ಯ ದೊರೆತದ್ದು ನನ್ನ ಪುಣ್ಯ. ಹೀಗೆ ಡಿ.ವಿ. ಗುಂಡಪ್ಪನವರೂ ನಂಗೆ ಒಳ್ಳೆ ಮಿತ್ರರಾಗಿದ್ದರು. ಅವರ ಆಲೋಚನಾಲಹರಿ, ಕವಿಕಾವ್ಯದ ಹೃದಯ, ಪ್ರಗತಿ ಪರಚಿಂತನೆ, ಗೋಖಲೆ ಅವರ ವಿಚಾರಧಾರೆ ಇಷ್ಟವಾದ್ದರಿಂದಲೇ ನಾನು ಡಿ.ವಿ.ಜಿ. ಅವರ ಗೋಖಲೆ ಸಾರ್ವಜನಿಕ ಸಂಸ್ಥೆಯ ಮುಖ್ಯರಲ್ಲಿ ಒಬ್ಬನಾದೆ. ಅಂಥ ಕಾರ್ಯಕ್ರಮಗಳು ನಿಜವಾಗಿ ನನಗೆ ತೃಪ್ತಿ ನೀಡುವಂತಹವು''

**ಸಾಹಿತಿಗಳ ಸನಿಹ:** ಸಾಹಿತ್ಯ ಕಲೋಪಾಸಕರ ನಡುವೆ ಕೂತರೆ ನಿಟ್ಟೂರು ತುಂಬ ತಮಾಷೆಯಾಗಿ ಮಾತನಾಡುವವರು. ಅವರ ಹಾಸ್ಯ ಪ್ರಜ್ಞೆಯು ಮನನೀಯ. ಕಲಾ ಮಂದಿರದ ಬಹಳಷ್ಟು ಕಾರ್ಯಕ್ರಮಗಳಲ್ಲಿ ನಾನು ಅವರನ್ನೇ ತುಂಬಾ ಹತ್ತಿರದಿಂದ ಕಂಡವ. ಟಿ.ಟಿ. ಶರ್ಮ, ಡಿ.ವಿ.ಜಿ., ಮಾಸ್ತಿ, ಮುಂತಾದವರು ಕಲಾಮಂದಿರಲ್ಲಿ ಕೂತು ಹರಟುತ್ತಿದ್ದಾಗ ಅವರ ಮಾತುಗಳನ್ನೇ ದೂರದಿಂದ ಕೂತು ಆಸ್ವಾದಿಸಿದವ ನಾನು.

ಯಾವುದೇ ಕಾರ್ಯಕ್ರಮದಲ್ಲಿ ಕಂಡರೂ ನಿಟ್ಟೂರು ಅದೇ ಪ್ರೀತಿಯಿಂದ ಮಾತ ನಾಡಿಸುತ್ತಾರೆ.

**ಕಲಾಮಂದಿರದ ಲೈಫ್ ಮೆಂಬರ್ ಆದ ಕಥೆ :** ನಮ್ಮ ಸುಬ್ಬರಾಯನ ಮಗ ಅಲ್ವೇ, ಹೇಗೆ ನಡೀತಿದೆಯಪ್ಪ ಕಲಾಮಂದಿರ. ಈಗ ಮುಂಚಿನ ಹಾಗೆ ಬರಕ್ಕೆ ಆಗುತ್ತಿಲ್ಲ. ಅದಕ್ಕೆ ಕೇಳ್ತಿದ್ದೀನೆ ''ನಾನು ಕಲಾಮಂದಿರದ ಲೈಫ್ ಮೆಂಬರ್ ಅಲ್ವಾ'' ಎಂದರು.

''ಹೌದು ಸಾರ್''

''ನಾನು ಲೈಫ್ ಮೆಂಬರ್ ಆದ್ದು ಹ್ಯಾಗೇ ಹೇಳ್ತೀನಿ, ಕೇಳಿ. ಸುಬ್ಬರಾಯರು ಆರ್ಥಿಕವಾಗಿ ಅಂಥ ಉತ್ತಮ ಸ್ಥಿತೀಲಿ ಇರಲಿಲ್ಲ. ಆದ್ರೂ ಏನಾದಾರೂ ಯೋಜನೆಗಳನ್ನು ಹಾಕಿಕೊಂಡು ಸೈಕಲ್ ಮೇಲೆ ಓಡಾಡುತ್ತಿದ್ದವರು. ಒಂದ್ಸಾರಿ ಏನೋ ತಾಪತ್ರಯವಾಗಿ ಒಂದು ನೂರು ಬೇಕು ಅಂದ್ರು. ಅವರ ಸೇವಾಮನೋಭಾವ, ಕಲೆಯ ಬಗೆಗಿದ್ದ ಪ್ರೀತಿ ಕಂಡು ನೂರು ರೂ ಕೊಟ್ಟು ಇದನ್ನು ವಾಪಸ್ಸು ಕೊಡಬೇಡಿ. ನಿಮ್ಮ ಕೆಲಸಕ್ಕೆ ಬಳಸಿಕೊಳ್ಳಿ ಅಂದೆ. ಸುಬ್ಬರಾಯರಿಗೆ ಅದೇನೋ ಅನ್ನಿಸಿತೊ ತಕ್ಷಣ ಅವರು 'ಹಾಗಾದ್ರೆ ನೀವು ಕಲಾಮಂದಿರಕ್ಕೆ ಲೈಫ್ ಮೆಂಬರಾಗಿ ಅಂದ್ರು. ನಾನು ಲೈಫ್ ಮೆಂಬರ್ ಆದ್ದು ಹಾಗೆ. ನನ್ನ ಎರಡನೆ ಮಗ ಸುಬ್ಬಣ್ಣ ಇದ್ದಾನಲ್ಲ ಅವನ ಹೆಂಡ್ತಿ ರೋಹಿಣಿ ಅಂದರೆ ನನ್ನ ಸೊಸೆಗೆ ಚಿತ್ರಕಲೇಲಿ ವಿಶೇಷ ಒಲವು. ಅವಳು ಅನೇಕ ಚಿತ್ರಗಳನ್ನು ಬರೆದಿದ್ದಾಳೆ. ಅವಳನ್ನು

ಕಲಾಮಂದಿರಕ್ಕೆ ಲೈಫ್ ಮೆಂಬರ್ ಮಾಡಬೇಕು ಅನ್ನೋ ಆಸೆಯೂ ಇತ್ತಾಗ. ಅನಸು ಅವರು ತೀರಿಕೊಂಡ ಮೇಲೆ ನಾನು ಆ ಬಗ್ಗೆ ಚಿಂತಿಸಲೇ ಇಲ್ಲ. ಅನಸು ಕಲಾಮಂದಿರದ ಬಗ್ಗೆ ನಂಗೆ ಪ್ರೀತಿ ಬರೋಕೆ ನಾನಾ ಕಾರಣಗಳಿವೆ. ನಮ್ಮ ಸೋದರಮಾವ ಹಿರಿಯಣ್ಣಯ್ಯ ಮೈಸೂರಿನ ನಾರ್ಮಲ್ ಸ್ಕೂಲ್ ಮುಖ್ಯಸ್ಥರಾಗಿದ್ದರು. ಆಗ ಅಲ್ಲಿ ಎಲ್ಲ ಪ್ರೈಮರಿ ಶಾಲೆ ಮಾಸ್ತರಾಗಿ ಒಂದು ವರ್ಕ್‌ಷಾಪ್ ಇತ್ತು. ಅಲ್ಲಿಗೆ ಸುಬ್ಬರಾಯರೂ ಹೋಗಿದ್ದರು. ಅವರು ಸುಬ್ಬರಾಯರ ಸೃಜನಾತ್ಮಕತೆ, ಕಲೆ ಬಗೆಗಿನ ಕಾಳಜಿ ಕಂಡು ಸರಕಾರಿ ಕೆಲಸಕ್ಕೆ ರಾಜೀನಾಮೆ ಕೊಟ್ಟು ಕಲಾಶಾಲೆ ಆರಂಭಿಸಿ ಅಂತ ಸಲಹೆ ಹೇಳಿಕೊಟ್ಟರು. ಸುಬ್ಬರಾಯರು ಸರಕಾರಿ ಕೆಲಸ ಬಿಡಲಿಕ್ಕೆ - ಕಲಾಮಂದಿರ ಆರಂಭಿಸಲಿಕ್ಕೆ ಅದು ಮುಖ್ಯ ಕಾರಣ ಆಯಿತು. ಆಗಿಂದ ನಾನವರನ್ನು ಬಲ್ಲವನಾಗಿದ್ದೆ. ಸಾಹಿತ್ಯ ಕಲೆ, ನಾಟಕ, ನೃತ್ಯ-ಸಂಗೀತ ಎಲ್ಲದರ ಬಗ್ಗೆ ಇಬ್ಬರಿಗೂ ಸಮಾನಾಸಕ್ತಿ ಇದ್ದದ್ದರಿಂದ ಅವರ ಎಲ್ಲ ಕಾರ್ಯಕ್ರಮಗಳಲ್ಲಿ ನಾನು ಇರ್ತಿದ್ದೆ"

**ಬ್ಯೂಗಲ್‌ರಾಕ್ ಬಂಡೆ ಬಳಿ:**

ಯಾರೇ ಆಗಲಿ ಸಂಜೆಯಾದ ಕೂಡಲೆ ಗೆಳೆಯರ ಬಳಗವೆಲ್ಲ ಒಂದೆಡೆ ಕೂಡಿ ಹರಟುವುದು ಸಹಜ. ಅಲ್ಲಿ ಲೋಕಾಭಿರಾಮವಾಗಿ ಎಲ್ಲ ಬಗೆಗೂ ಚರ್ಚೆ- ತಮಾಷೆ ಇರುವುದೂ ನಿಜ. ಈಗಾದರೋ ಕ್ಲಬ್ಬು, ಹರಟೆ, ಇಸ್ಪೀಟು ಗುಂಡು ಕಾಮನ್.

ಆಗ ಸಂಜೆಯಾದರೆ ಬ್ಯೂಗಲ್ ರಾಕ್ ಬಂಡೆಯ ಬಳಿ ನಿಟ್ಟೂರು, ಡಿ.ವಿ.ಜಿ., ಅ.ನ.ಸು., ಎಂ.ಪಿ. ಸೋಮಶೇಖರರಾವ್ - ಪಿ.ಆರ್. ರಾಮಯ್ಯ ಮುಂತಾದವರೆಲ್ಲ ಕುಳಿತು ಜಗತ್ತಿನ ವಿದ್ಯಮಾನಗಳನ್ನೆಲ್ಲ ಚರ್ಚಿಸುತ್ತಿದ್ದ ಅಂಶ ನಮ್ಮಪ್ಪ ನನ್ನೊಂದಿಗೆ ಹೇಳಿದ್ದುದುಂಟು.

**ನಿಟ್ಟೂರರ ಕಾರು:** ಆಗ ನಿಟ್ಟೂರರ ಬಳಿ ಒಂದು ಕಾರಿತ್ತು.

ಆ ಕಾರಿನ ಪ್ರಸ್ತಾಪವೂ ಬಂತು ಮೊನ್ನೆ ನಿಟ್ಟೂರರನ್ನು ಭೇಟಿಯಾದಾಗ "ಒಂದು ಸಾರಿ ಯಾವುದೊ ಕಾರ್ಯಕ್ರಮಕ್ಕೆ ಟೌನ್ ಹಾಲಿಗೆ ಕಾರಲ್ಲಿ ಹೋಗಿದ್ದೆ ನಾನು. ಹಾಗೆ ಹೋಗುವಾಗ ಬರುವಾಗ ಯಾರಾದ್ರೂ ಸಾಹಿತ್ಯ ಮಿತ್ರರನ್ನು, ಕಲಾವಿದರನ್ನು ಕೂರಿಸಿಕೊಂಡು ಹೋಗೋದು ಪದ್ಧತಿಯಾಗಿತ್ತು. ಹಾಗೆ ಆ ದಿನ ಟೌನ್ ಹಾಲಿಂದ ವಾಪಸ್ ಬರೋವಾಗ ನಾಲ್ಕು ಮಂದೀನ ಕೂರಸ್ಕೊಂಡೆ ಆಗ ಆ ಸ್ನೇಹಿತರು 'ಅಲ್ಲಾ - ನಿಟ್ಟೂರ್ ಅವರೇ - ನಮ್ಮನ್ನು ಕೂರಿಸ್ಕೊಂಡ್ರಿ ಸರಿ. ಆದರೆ ನಿಮ್ಮ ಸ್ನೇಹಿತರಾದ ಸುಬ್ಬರಾಯನ್ನ ಯಾಕೆ ಕೂರಿಸ್ಕೊಳ್ಳಿಲ್ಲ" ಅಂದ್ರು.

"ಯಾಕೆ ಕೂರಸ್ಕೊಳ್ಳಲಿಲ್ಲ ನೋಡೋರಂತೆ! ಅಂತ ಕಾರು ನಿಲ್ಲಿಸಿದ್ದೆ ಸುಬ್ಬರಾಯರು ಸೈಕಲ್ ಹಿಡಿಕೊಂಡು ಬಂದರು.

"ಈಗಲಾದರು ಅರ್ಥವಾಯಿತೆ ನಾನು ಯಾಕೆ ಸುಬ್ಬರಾಯರನ್ನ ಕಾರಲ್ಲಿ ಕೂರಿಸಿ ಕೊಳ್ಳಲಿಲ್ಲಾಂತ ನೀವು ಹೇಳೋ ಪ್ರಕಾರ ಈಗ ನಾನು ಅವರನ್ನು ಕಾರಲ್ಲಿ ಕೂರಸ್ಕೋ ಬೇಕಾದ್ರೆ ಸೈಕಲ್ನ ಕಾರಿಗೆ ಕಟ್ಟಿ ಕೂರಸ್ಕೋಬೇಕಾಗುತ್ತೆ"

-ಅಂತ ತಾವೂ ನಕ್ಕು ಮಿಕ್ಕವರನ್ನೂ ನಗಿಸಿದರಂತೆ.

**ನಿಟ್ಟೂರು ಕನಸು "ಅನಸು ಭವನ"** ಅ.ನ.ಸು. ಕಾಲವಾದ ನಂತರ - ಕಲಾಮಂದಿರ ಅನಸು ೧೦೦ ಕಾರ್ಯಕ್ರಮ ಹಮ್ಮಿಕೊಂಡಾಗ ನಿಟ್ಟೂರು ಬಹಳಷ್ಟು ಕಾರ್ಯಕ್ರಮಗಳಲ್ಲಿ ಹಾಜರಿದ್ದರು. ಕಲಾಮಂದಿರದ ಕಾರ್ಯಚಟುವಟಿಕೆ ಈಗ ವ್ಯಾಪಕವಾಗಿ ಅಭಿನಯ ತರಂಗ-ಚಿತ್ರಾ, ಅನಸು ಸ್ಮಾರಕವಾಗಿ ನಡೆಯುತ್ತ ಬಂದಿದೆ. ಅದಕ್ಕೆ ನಿಟ್ಟೂರು ಹೇಳಿದರು ಹೊರಭಾಗ "ನಾನೀಗ ಮುಂಚಿನಂತೆ ಬರಲಾಗುತ್ತಿಲ್ಲ. ಆದರೆ ಕರ್ನಾಟಕದ ಮೊದಲ ಕಲಾಶಾಲೆಯಾದ ಕಲಾಮಂದಿರ ಇನ್ನೂ ಎತ್ತರ ಬೆಳೆಯಬೇಕು. ಹನುಮಂತನಗರದ ಕಲಾಮಂದಿರದ ಮೇಲೆ ಇನ್ನೊಂದು ದೊಡ್ಡ ಸಭಾಂಗಣ ಕಟ್ಟಿ ಅದಕ್ಕೆ ಅನಸುಭವನ ಎಂದು ಹೆಸರಿಸಿ. ಅಂಥ ಒಳ್ಳೆ ಕೆಲಸಕ್ಕೆ ಸರಕಾರವೂ ಮುಂದಾಬೇಕು" ಎಂದರು.

ಗೋಖಲೆ ಇನ್ಸ್ಟಿಟ್ಯೂಟಿನಲ್ಲಿ ನಿಟ್ಟೂರು ಇಂದಿಗೂ ಅನೇಕ ಅರ್ಥಪೂರ್ಣ ಕಾರ್ಯಕ್ರಮಗಳನ್ನು ಅಚ್ಚುಕಟ್ಟಾಗಿ ನಡೆಸುತ್ತಾ ಬಂದಿದ್ದಾರೆ.

**ಚೈತನ್ಯದ ಚಿಲುಮೆ:** ಈಗಲೂ ನೀಳಕಾಯದ ನಿಟ್ಟೂರ್ ಕಚ್ಚೆ ಪಂಚೆ -ಜುಬ್ಬ ಧರಿಸಿ ಮೇಲೊಂದು ಶಾಲು ಹೊದ್ದು - ನಿಧಾನವಾಗಿ ಯಾವುದೇ ಸಭಾಂಗಣಕ್ಕೆ ಹೆಜ್ಜೆ ಇಟ್ಟು ಬಂದರೂ ಕೂತ ಎಲ್ಲ ಮಂದಿ ನಿಂತು ಗೌರವಿಸುತ್ತಾರೆ- ನೂರರ ನವಯೋಧನ್ನ ಕಂಡು ನಾಚುತ್ತಾರೆ.

ನಿಟ್ಟೂರು ಶ್ರೀನಿವಾಸರಾಯರು ಯಾವುದೇ ಸಭೆಗೆ ಹಾಜರಾದರೂ ಆ ಕಾರ್ಯಕ್ರಮದ ಘನತೆ ಹೆಚ್ಚುವುದರಲ್ಲಿ ಸಂಶಯವಿಲ್ಲ ನಯ-ವಿನಯದ ಸೌಜನ್ಯದ ಪ್ರತಿ ಮೂರ್ತಿ ನಿಟ್ಟೂರು.



# ನಾ ಕಂಡ ನಿಟ್ಟೂರು

........................ ✍ *ಬಿ.ಎಸ್. ಕೇಶವರಾವ್**

**ಸೆಂ**ಚುರಿಯ ಅಂಚನ್ನು ಮೀರಿದರೂ ಇಂದಿಗೂ ಸಾಕಷ್ಟು ಗಟ್ಟಿ ಮುಟ್ಟಾಗಿ ನಿರಂತರ ನೆಟ್ಟಗೆ ನಡೆದಾಡುವ ಶತಾಯುಷಿ ಶ್ರೀನಿವಾಸರಾಯರ ಹುಟ್ಟೂರು ನಿಟ್ಟೂರು. ಪುಟ್ಟಗ್ರಾಮ ದಂತಿರುವ ನಿಟ್ಟೂರನ್ನು ಎಲ್ಲರೂ ಸ್ಮರಿಸುವಂತಾಗಿರುವುದು ಈ ಶ್ರೀನಿವಾಸರಾಯರ ದಿವ್ಯ ಪ್ರಭಾವದಿಂದ.

ನಾನು ನಿಟ್ಟೂರರನ್ನು ಅನೇಕ ವರ್ಷಗಳಿಂದ ಬಲ್ಲವನು, ಬಹು ಹತ್ತಿರದಿಂದ ಕಂಡವನು. ಹತ್ತು ಹಲವು ಬಾರಿ ಅವರೊಡನೆ ಅಷ್ಟಿಷ್ಟು ಮಾತನಾಡಿರುವವನು. ನನಗೆ ತಿಳಿದಿರುವಂತೆ ನಿಟ್ಟೂರು ಶ್ರೀನಿವಾಸರಾಯರು ಸುಮಾರು ಇಪ್ಪತ್ತು ಮೂವತ್ತು ನಲವತ್ತು ವರ್ಷಗಳ ಹಿಂದೆ ಹೇಗಿದ್ದರೋ ಈಗಲೂ ಹಾಗೆಯೇ ಇದ್ದಾರೆ. ಅವರ ಆಕೃತಿ, ಚಹರೆ, ನಡೆ ನುಡಿ ಏತರಲ್ಲೂ ಹೇಳಬಹುದಾದ ಏರುಪೇರುಗಳೇನೂ ಅಷ್ಟಾಗಿ ಆಗಿಲ್ಲ. ಅವರ ಸಮಕಾಲೀನರು, ಸಮವಯಸ್ಕರೆಲ್ಲಾ ಸಾಕಷ್ಟು ಬದಲಾಗಿದ್ದಾರೆ. ಬದಲಾಗುವುದೇನೂ, ಅವರಂತೆ ಒಂದು ಶತಮಾನದ ಹಿಂದೆ ಹುಟ್ಟಿದ ಎಷ್ಟೋ ಮಂದಿ ಇದ್ದಾರೆ. ಅಂದರೆ ಇಲ್ಲಲ್ಲ, ಅಲ್ಲಿ ಸ್ವರ್ಗದಲ್ಲಿ. ಆದರೆ ನೂರರ ನಂತರವೂ ಆರಾಮವಾಗಿ ಮನೆಯಲ್ಲಿ ಕೂರದೆ ಸಾರ್ವಜನಿಕ ಸೇವೆಗೇ ತಮ್ಮ ಬದುಕನ್ನು ಮುಡುಪಾಗಿರಿಸಿ ಅಂತೆಯೇ ನಡೆದುಕೊಳ್ಳುತ್ತಿರುವ ನಿಟ್ಟೂರರ ನಿಲುಮೆ ಮಹದಚ್ಚರಿ ಮೂಡಿಸುವಂತಹದು.

---

* ೫೪೯, ಜ್ಯೋತಿ ನಿಲಯ, ೧೧ನೇ ಅಡ್ಡರಸ್ತೆ, ೧೪ನೇ ಮುಖ್ಯರಸ್ತೆ
ಪದ್ಮನಾಭನಗರ, ಬೆಂಗಳೂರು - ೫೬೦ ೦೭೦

ನಮ್ಮಲ್ಲಿ ನೂರನ್ನು ಮೀರಿರುವವರು ಅಥವಾ ಅದರ ಆಜುಬಾಜುವಿನಲ್ಲಿರುವವರು ಈ ನಿಟ್ಟೂರು ಶ್ರೀನಿವಾಸರಾಯರೇ ಅಲ್ಲದೆ ಇನ್ನೂ ಒಬ್ಬಿಬ್ಬರಿದ್ದಾರೆ. ಮೂರ್ತಿ ರಾಯರಿಗೀಗ ನೂರ್ಮೂರು. ಸುಧಾಕರ ಚತುರ್ವೇದಿಯವರಿಗೆ ನೂರ್ನಾಲ್ಕು. ಹೀಗೆಯೇ ಈ ವಯಸ್ಸಿನ ಇನ್ನೂ ಒಬ್ಬಿಬ್ಬರು ನಮ್ಮ ನಾಡಿನಲ್ಲಿರಬಹುದು. ಆದರೆ ನಿಟ್ಟೂರರ ನ್ನುಳಿದು ಹೇಳುವುದಾದರೆ ಉಳಿದವರು "ಲೆಕ್ಕಕ್ಕುಂಟು ಆಟಕ್ಕಿಲ್ಲ" ಎಂಬಂತೆ ಇದ್ದಾರೆ. ಅಷ್ಟೆ. ಇಂಥವರು ಸಾರ್ವಜನಿಕ ಸಂಪರ್ಕ ಸಹವಾಸವನ್ನು ಕಳೆದುಕೊಂಡೇ ಸಂವತ್ಸರಗಳಾಗಿ ಹೋಯಿತು. ಮೂರ್ತಿರಾಯರನ್ನಂತೂ ವೇದಿಕೆಯೊಂದರಲ್ಲಿ ಕಾಣಬೇಕಾದರೆ ವರ್ಷಂ ಪ್ರತಿ ಅವರ ಹುಟ್ಟುಹಬ್ಬದ ದಿವಸಕ್ಕಾಗಿಯೇ ಕಾಯಬೇಕು.

ಈ ಶತಾಯುಷಿಗಳ ಪೈಕಿ ಕೆಲವರ ಆರೋಗ್ಯ ಭಾಗ್ಯವೆಂಬುದು ತಕ್ಕಮಟ್ಟಿಗೆ ನೆಟ್ಟಗಿರುವುದಾದರೂ ಬಹುಮುಖ್ಯವೆನಿಸುವ ಸ್ಮರಣ ಶಕ್ತಿಯನ್ನೇ ಕೆಲವರು ಕಳೆದು ಕೊಂಡಿದ್ದಾರೆ. ದೌರ್ಭಾಗ್ಯದ ಸಂಗತಿ. ನಮ್ಮೆಲ್ಲರ ಅಚ್ಚುಮೆಚ್ಚಿನ ಎ.ಎನ್. ಮೂರ್ತಿ ರಾಯರಂತೂ ತಮ್ಮ ಸ್ಮರಣ ಶಕ್ತಿಯನ್ನು ಕಳೆದುಕೊಂಡು ವರ್ಷಗಳೇ ಆಯಿತು. ನಿನ್ನೆಯಷ್ಟೇ ಕಂಡು ಕೇಳಿದ್ದನ್ನು ರಾಯರು ಇಂದು ಮರೆತಿರುತ್ತಾರೆ. ಈ ಮಾತಿಗೆ ಇಲ್ಲೊಂದು ಸಣ್ಣ ನಿದರ್ಶನ, ನನ್ನದೇ ಸ್ವಂತ ಅನುಭವದಿಂದ-

ಆಯುಷ್ಯದಲ್ಲಿ ಸೆಂಚುರಿಯನ್ನು ಬಾರಿಸಿ ನೂರು ವಸಂತಗಳನ್ನು ಕಂಡಿದ್ದ ಮೂರ್ತಿರಾಯರಿಗೆ ಒಂದು ಭವ್ಯ ಸನ್ಮಾನ ಸಮಾರಂಭ, ಬೆಂಗಳೂರು ಜಯನಗರದ ನ್ಯಾಶನಲ್ ಕಾಲೇಜು ಸಭಾಂಗಣದಲ್ಲಿ. ಏರ್ಪಡಿಸಿದ್ದವರು ಎ.ಎಸ್. ಮೂರ್ತಿ. ಅಂದು ಮೂರ್ತಿರಾಯರ ಗೌರವಾರ್ಥ ರಾಯರೇ ಎಂಬತ್ತು ವರ್ಷಗಳ ಹಿಂದೆಯೇ ರಚಿಸಿದ್ದ ಅವರ 'ಆಷಾಢಭೂತಿ' ನಾಟಕವನ್ನು ಕಲಾಮಂದಿರದ ಅಭಿನಯ ತರಂಗದ ವಿದ್ಯಾರ್ಥಿಗಳು ಆಡಿದರು. ನಾಟಕವನ್ನು ನಿಯುಕ್ತಿನಿಂದ ನಿರ್ದೇಶಿಸಿದ್ದವನು ನಾನು. ಮೂರ್ತಿರಾಯರು ಬಂದರು. ನಾಟಕವನ್ನು ನಿಟ್ಟೂರು ಶ್ರೀನಿವಾಸರಾಯರ ಪಕ್ಕ ಕುಳಿತು ನೋಡಿದರು. ಅವರಿಗಾದ ಆನಂದ ಹೇಳತೀರದು. ನಾಟಕ ಮುಗಿಯುತ್ತಲೆ ವೇದಿಕೆಯನ್ನೇರಿದ ಮೂರ್ತಿರಾಯರು 'ನನ್ನ ಈ ನಾಟಕವನ್ನು ಇಷ್ಟು ಸಂಭ್ರಮದಿಂದ ಕುತೂಹಲ ಕೆರಳಿಸುವಂತೆ ಆಡಬಹುದು. ಎಂಬ ಕಲ್ಪನೆಯೂ ನನಗಿರಲಿಲ್ಲ' ಎಂದೆಲ್ಲಾ ಹೊಗಳಿದರು. ನನ್ನ ಬೆನ್ನುತಟ್ಟಿ, 'You have done a very good Job. Excellent-show, keep it up'ಎಂದರು. 'Thank you very much Sir' ಎಂದ ನಾನು ಅವರ ಪಾದಮುಟ್ಟಿ ನಮಸ್ಕರಿಸಿದೆ. 'ಅಯ್ಯಯ್ಯೋ ಇದೆಲ್ಲಾ ಯಾಕಪ್ಪಾ' ಎನ್ನುತ್ತ ನನ್ನ ಭುಜ ಹಿಡಿದೆತ್ತಿ ಆಶೀರ್ವದಿಸಿದರು. ನಂತರ ಅವರೇ ಮುಂದಾಗಿ 'ನಾಳೆ ಬೆಳಿಗ್ಗೆ ನಮ್ಮನೇಗೆ ಬನ್ನಿ ಕೇಶವ

ರಾಯರೆ. Have a cup of Coffee with me' ಎಂದರು. ನಮಸ್ಕರಿಸಿದ ನಾನು 'Great pleasure sir' ಎಂದೆ.

ಮಾರನೆ ದಿನ ಬೆಳಿಗ್ಗೆ ಮೂರ್ತಿರಾಯರ ಮನೆಗೆ ಹೋದೆ, ಅಂದರೆ ಸುಬ್ರಾಮು ಅವರ ಮನೆಗೆ ಹೋದೆ. ರಾಯರು ಇರುವುದು ಅವರ ಮಗ ಸುಬ್ರಾಮು ಅವರ ಮನೆಯಲ್ಲೆ. ಬಾಗಿಲು ಮುಚ್ಚಿತ್ತು. ಬೆಲ್ ಮಾಡಿದೆ. ಬಾಗಿಲನ್ನು ತೆಗೆದವರು ಮೂರ್ತಿರಾಯರೇ. ಬೆಳ್ಳಂ ಬೆಳಿಗ್ಗೆಯೇ ಭವ್ಯ ಚೇತನದ ದಿವ್ಯ ದರುಶನವಾಯಿತು ಎಂದು ಕೊಂಡು ನಾನು ಅತಿ ನಮ್ರತೆಯಿಂದ 'ನಮಸ್ಕಾರ ಸಾರ್' ಎಂದೆ. ನನ್ನನ್ನು ಒಂದು ಕ್ಷಣ ದಿಟ್ಟಿಸಿದ ರಾಯರು 'ಯಾರು ನೀವು, ಏನಾಗ್ಬೇಕಿತ್ತು. ಯಾರ್ಬೇಕಿತ್ತು?' ಎಂದರು. ಬೆಪ್ಪು ಬಡಿದ ನಾನು 'ನಾನ್ಸಾರ್, ಬಿ.ಎಸ್. ಕೇಶವರಾವ್, ನೀವೇ ಬಾ ಎಂದಿದ್ರೀ' ಎಂದು ಬೆಬ್ಬೆಬ್ಬೇ ಮಾಡಿದೆ. ಏನೊಂದೂ ಪ್ರತಿಕ್ರಿಯೆ ತೋರದ ಮೂರ್ತಿರಾಯರು ಮಗನನ್ನು ಕರೆಯುತ್ತ 'ಯಾರೋ ಬಂದಿದ್ದಾರೆ ನೋಡು ಸುಬ್ರಾಮು ಏನೇನೋ ಹೇಳ್ತಿದ್ದಾರೆ. ನಂಗೊಂದೂ ಅರ್ಥವಾಗ್ತಿಲ್ಲಾ Probably Some Sales man' ಎಂದವರೆ ಒಳಕ್ಕೆ ಹೊರಟು ಹೋದರು. ಒಳಗಿನಿಂದ ಸುಬ್ರಾಮು ಬಂದರು. ನನ್ನನ್ನು ಕಾಣುತ್ತಲೇ 'ಬನ್ನಿ ಕೇಶವರಾಯ್ರೇ, ಬನ್ನಿ ಬನ್ನಿ' ಎಂದು ಒಳಕ್ಕೆ ಆತ್ಮೀಯತೆಯಿಂದ ಕರೆದು ಕೂರಿಸಿದರು. ನಂತರ ಮನೆಯವರು ತಂದಿತ್ತ ಕಾಫಿಯನ್ನು ನಾವಿಬ್ಬರೂ ಹೀರುತ್ತ ಮಾತನಾಡುತ್ತಿದ್ದೆವು. ಅಷ್ಟರಲ್ಲಿ ಮೂರ್ತಿರಾಯರು ಅವರ ಕೋಣೆಯಿಂದ ಹೊರಬಂದು ನಮ್ಮೆದುರು ಸೋಫಾದಲ್ಲಿ ಕೂತರು. ನಂತರ ಸುಬ್ರಾಮು ನಾನು ಯಾರೆಂಬುದನ್ನು ರಾಯರ ಸ್ಮೃತಿಗೆ ತರಬೇಕಾದರೆ ಕೆಲಕ್ಷಣ ತಿಣುಕಬೇಕಾಯಿತು. ಆಮೇಲೆ ನೆನಪಿಸಿಕೊಂಡ ಮೂರ್ತಿರಾಯರು 'ಓಹೋ, ತಿಳೀತು ತಿಳೀತು, ನಮ್ಮ ಕೇಶವರಾಯ್ರು. ಹಾಳು ಮರವು, ನಿನ್ನೆ ನೀವು ಆಡಿಸಿದ ಆಷಾಢಭೂತಿ ಎಕ್ಸಲೆಂಟ್' ಎಂದರು.

ಅದೇ ಕಾಲ, ಗೊರೂರು ಪ್ರತಿಷ್ಠಾನದ ಸ್ಥಾಪಕ ಸು. ರಂಗಸ್ವಾಮಿ ಮೂರ್ತಿರಾಯರಿಗೆ ಸನ್ಮಾನ ಸಮಾರಂಭವನ್ನು ಮಿಥಿಕ್ ಸೊಸೈಟಿಯ ಸಭಾಂಗಣದಲ್ಲಿ ಏರ್ಪಡಿಸಿದ್ದರು. ಆಹ್ವಾನಿತನಾಗಿದ್ದ ನಾನು ಹೋಗಿದ್ದೆ. ಬೆಳಿಗ್ಗೆ ಹತ್ತುಮೂವತ್ತಕ್ಕೆ ಸಮಾರಂಭ. ಕಾಲಕ್ಕೆ ಸರಿಯಾಗಿ ರಾಯರನ್ನು ಅವರ ಮನೆಯವರು ಕಾರಿನಲ್ಲಿ ಕರೆತಂದರು. ಮೂರ್ತಿರಾಯರನ್ನು ಸನ್ಮಾನಿಸಿದ ನಂತರ ಅವರ ಮುಂದೆ ಮೈಕನ್ನಿರಿಸಿದರು ಸು. ರಂಗಸ್ವಾಮಿ. ಅರೆಕ್ಷಣ ಏನೊಂದನ್ನು ಮಾತನಾಡದೆ ಮೌನದಿಂದಿದ್ದ ಮೂರ್ತಿರಾಯರು ನಂತರ 'ಈವತ್ತು ನನಗೆ ಇಲ್ಲಿ ಸನ್ಮಾನ ಇದೆ ಅನ್ನೋದೆ ಮರೆತು ಹೋಗಿತ್ತು. ಬೆಳಿಗ್ಗೆ ಪೇಪರ್ ನೋಡಿದ ನಂತರ ನನ್ನ ಮಗ ಜ್ಞಾಪಿಸಿ ಇಲ್ಲಿಗೆ ಗಡಿಬಿಡಿಯಲ್ಲಿ ಕರೆತಂದಿದ್ದಾನೆ. ಮನೆಯಿಂದ ಹೊರಟು

ಇಲ್ಲಿಗೆ ಕಾರಿನಲ್ಲಿ ಬರುವಾಗ ರಸ್ತೆಯುದ್ದಕ್ಕೂ ಇಲ್ಲೀಗ ಏನು ಹೇಳಬೇಕು ಎಂದು ಯೋಚಿಸುತ್ತಾ ಬಂದೆ. ಬಹಳ ಒಳ್ಳೆಯ ವಿಷಯಗಳು, ಆದರೆ ಅದೆಲ್ಲಾ ಈಗ ಮರೆತೇ ಹೋಗಿದೆ, ಏನೊಂದೂ ಜ್ಞಾಪಕಕ್ಕೆ ಬರುತ್ತಿಲ್ಲ, ಕ್ಷಮಿಸಿ' ಎಂದು ನಗುತ್ತ ಎಲ್ಲರಿಗೂ ಕೈ ಮುಗಿದು ಬಿಟ್ಟರು.

ಹೀಗೆ ವರ್ತಮಾನದ ಪ್ರಸ್ತುತ ಕ್ಷಣಗಳಲ್ಲಿ ನಡೆಯುವುದನ್ನು ಮರುಕ್ಷಣವೇ ಮರೆಯುವ ಮೂರ್ತಿರಾಯರಿಗೆ ವಿಚಿತ್ರವೆಂಬಂತೆ ಭೂತಕಾಲದಲ್ಲಿ ದಶಕಗಳ ಹಿಂದೆ ನಡೆದ ಏನೆಲ್ಲವೂ ಯಥಾವತ್ತಾಗಿ ಜ್ಞಾಪಕದಲ್ಲಿರುತ್ತದೆ. ಇದರಿಂದಾಗಿಯೇ ಅಲ್ಲವೇ ರಾಯರು ತಮ್ಮ ಆತ್ಮಚರಿತ್ರೆ 'ಸಂಜೆಗಣ್ಣಿನ ಹಿನ್ನೋಟ'ವನ್ನು ಅಷ್ಟು ನಿರ್ದಿಷ್ಟವಾಗಿ ಬರೆದಿರುವುದು? ಇದೆಲ್ಲಾ ಮೂರ್ತಿರಾಯರ ಸ್ಮರಣ ಶಕ್ತಿಗೆ ಸಂಬಂಧಿಸಿದಂತಿರುವ ಮರವಿನ ಮೋಜು. ಅದೇ ನೂರನ್ನು ಇತ್ತೀಚೆಗೆ ದಾಟಿರುವ ನಮ್ಮ ನೆಚ್ಚಿನ ನಿಟ್ಟೂರು ಶ್ರೀನಿವಾಸರಾಯರು ಮೂರ್ತಿರಾಯರಿಗಿಂತ ಕೇವಲ ಮೂರು ವರ್ಷವಷ್ಟೇ ಕಿರಿಯರು. ಆದರೆ ನಿಟ್ಟೂರರ ಸ್ಮರಣ ಶಕ್ತಿ ಅಸಾಧಾರಣವಾದದ್ದು, ಅಚ್ಚರಿಗೊಳಿಸುವಂತಹುದು. ಪ್ರಸ್ತುತ ಕಾಲದ ವಿಚಾರ ವಿವರಗಳು ಅಂತಿರಲಿ, ಹಿಂದೆಯೇ ಒಂದಾನೊಂದು ಕಾಲ ದಲ್ಲೆಂಬಂತೆ ನಡೆದಿರುವ ಘಟನೆಗಳನ್ನು ನೆನಪಿಸಿಕೊಂಡು, ಚೂರುಪಾರು ಚೀಟಿಯ ನೆರವೂ ಇಲ್ಲದೆ ವರುಷ ತಿಂಗಳು ದಿನವೂ ತಪ್ಪಾಗದಂತೆ ಓರಣವಾಗಿ ಒಪ್ಪಿಸಬಲ್ಲ ಇವರ ಸ್ಮರಣ ಶಕ್ತಿಯ ವಿಚಾರವನ್ನು ಗಿನ್ನಿಸ್ ಬುಕ್ಕಿನಲ್ಲಿ ದಾಖಲಿಸಬೇಕು.

ಇನ್ನಿವರ ದೇಹ ಶಕ್ತಿಯ ಬಗ್ಗೆ ಹೇಳುವುದಾದರೆ ದಿನಪತ್ರಿಕೆಗಳಲ್ಲಿರುವ ದೈನಂದಿನ ಕಾರ್ಯಕ್ರಮಗಳ ಕಾಲಮ್ಮನ್ನು ತಪ್ಪದೇ ಓದುವವ ನಾನು. ಕೆಲವಾರು ವರ್ಷಗಳಿಂದ ಗಮನಿಸಿದ್ದೇನೆ. ದಿನನಿತ್ಯ ಯಾವುದಾದರೊಂದು ಕಾರ್ಯಕ್ರಮದಲ್ಲಿ ನಿಟ್ಟೂರರು ಮುಖ್ಯ ಅತಿಥಿಯಾಗಿರುತ್ತಾರೆ. ಇಲ್ಲವೇ ಅಧ್ಯಕ್ಷರಾಗಿರುತ್ತಾರೆ. ಕಾರ್ಯಕ್ರಮ ಬೆಳಗಿನದ್ದೋ, ಮಧ್ಯಾಹ್ನದ್ದೋ, ಸಂಜೆಯದ್ದೋ, ಅಂತೂ ಯಾವುದೇ ವೇಳೆಯ ಏನಾದರೊಂದು ಕಾರ್ಯಕ್ರಮದಲ್ಲಿ ನಿಟ್ಟೂರರ ಹೆಸರು ಇದ್ದೇ ಇರುತ್ತದೆ. ಕೆಲವೊಮ್ಮೆ ದಿನದ ಎರಡು ಮೂರು ಕಾರ್ಯಕ್ರಮದಲ್ಲಿ ಇವರ ಹೆಸರು. ಹೀಗಿದ್ದರೂ ನಿಟ್ಟೂರರು ಎಂದೂ ಯಾವ ಕಾರ್ಯಕ್ರಮಕ್ಕೂ ತಪ್ಪಿಸಿಕೊಂಡಿರುವ ಅಥವಾ ತಡವಾಗಿ ಬಂದಿರುವ ದಾಖಲೆ ಇಲ್ಲ. ಒಪ್ಪಿಕೊಂಡರೆ ಮುಗಿಯಿತು. ಆಗಸವೆ ಬೀಳಲಿ-ಭೂಮಿಯೆ ಬಿರಿಯಲಿ - ಸಮುದ್ರವೇ ನುಗ್ಗಲಿ, ಏನೇ ಆದರೂ ನಿಟ್ಟೂರರು ಮಾತ್ರ ಬರಲೊಪ್ಪಿರುವ ವೇದಿಕೆಯಲ್ಲಿ ಹಾಜರ್, ಕಾಲಕ್ಕೆ ಸರಿಯಾಗಿ, ಅರೆ ನಿಮಿಷವೂ ಕೊರೆಯಾಗದಂತೆ.'

ಕುತೂಹಲದ ದೃಷ್ಟಿಯಿಂದಲಾದರೂ ನೀವೊಮ್ಮೆ ಇವರ ದೈನಂದಿನ ದಿನಚರಿಯ

ಡೈರಿಯನ್ನು ದಿಟ್ಟಿಸಬೇಕು. ನಿಟ್ಟೂರರ ನಿವಾಸದ ಗೋಡೆಯ ಮೇಲೆ ಗೂಟಕ್ಕೆ ತೂಗು ಬಿದ್ದಿರುವ ಕ್ಯಾಲೆಂಡರತ್ತ ಕಣ್ಣಾಡಿಸಬೇಕು. ಬೆಂಗಳೂರಿನಲ್ಲಿ ಮದುವೆ ಮುಂಜಿಗಳಿಗೆಂದು ಛತ್ರಗಳು, ಅಡುಗೆಯವರು, ಓಲಗದವರು, ಮೈಕಿನವರು, ಮೂರು ತಿಂಗಳು ಮೊದಲೇ ಬುಕ್ಕಾಗುವುದು ಮಾಮೂಲು. ಅತಿಥಿಯಾಗಿ ಬರಲೊಪ್ಪುವ ನಿಟ್ಟೂರರರೂ ಈ ವಿಚಾರದಲ್ಲಿ ಹೀಗೆಯೇ. ಮೂರು ತಿಂಗಳ ಮೊದಲೇ ಬುಕ್ಕಾಗಿರುತ್ತಾರೆ. ಇವರ ಮನೆ ಕ್ಯಾಲೆಂಡರಿನ ಎಲ್ಲ ಡೇಟ್ಗಳ ಮೇಲು ಸಾಮಾನ್ಯವಾಗಿ ಕಾಣುವುದು ಇಂಟು ಮಾರ್ಕು. ಇದು ಇಂದಿಗೂ ನಿಟ್ಟೂರರಿಗಿರುವ ಪಬ್ಲಿಕ್ ಡಿಮ್ಯಾಂಡು. ಆಶ್ಚರ್ಯವಾಗುವುದಿಲ್ಲವೆ? ನೂರನ್ನೂ ಮೀರಿರುವ ನರನೊಬ್ಬ ನಿರಂತರವಾಗಿ ನರರೂಪಿ ನಾರದನಂತೆ ಹೀಗೆ ದಿನನಿತ್ಯ ನಡೆದಾಡುವುದು ಸಾಧ್ಯವೆ? ಇಷ್ಟು ಸಾಲದೆಂಬಂತೆ ಏತನ್ಮಧ್ಯೆ ತುಸು ಬಿಡುವಿದ್ದರೆ ಅಂತಹ ಸಮಯದಲ್ಲಿ ಆತ್ಮೀಯತೆಯಿಂದ ಕರೆದವರ ಮನೆ ಮುಂಜಿ ಮದುವೆ ಗೃಹಪ್ರವೇಶ ಗಳಿಗೂ ನುಸುಳುವ ನಿಟ್ಟೂರರು ಅಲ್ಲಿಯವರನ್ನು ಹರಸಿಹೋಗುವುದುಂಟು! ಉಫ್ ಎಂದರೆ ಉರುಟಿಕೊಳ್ಳುವಂತಹ ತೆಳ್ಳನೆಯ ದೇಹಾಕೃತಿಯ ಈ ಮಹಾಮಾನವ ನಿಟ್ಟೂರರಲ್ಲಿ ಆ ಸೃಷ್ಟಿಕರ್ತ ಅದೆಂತಹ ಚಿತ್ರವಿಚಿತ್ರವೆನ್ನಬಹುದಾದ ಘನಶಕ್ತಿಯನ್ನು ತುಂಬಿರುವನೋ ಏನೋ, ಅದು ಆ ಭಗವಂತನಿಗೇ ಬೆಳಕು.

ಸರಳತೆ, ಸೌಜನ್ಯ, ಸ್ನೇಹ, ಸಂಸ್ಕೃತಿ, ಸಂಗ ಜೀವನ, ಇತ್ಯಾದಿ ಪದಗಳಿಗಿರುವ ವಿಶಿಷ್ಟಾರ್ಥವನ್ನು ತಿಳಿಯಬೇಕಾದರೆ ಇವಿಷ್ಟು ಗುಣಗಳನ್ನು ಸಾಂಕೇತಿಸುವಂತಿರುವ ನಿಟ್ಟೂರು ಶ್ರೀನಿವಾಸರಾಯರ ಸರಳ ಸುಂದರ ಬದುಕನ್ನು ನಾವು ತಿಳಿಯಬೇಕು. ಲಾಗಾಯ್ತಿನಿಂದಲೂ ನಿಟ್ಟೂರರು ಅಪ್ಪಟ ಖಾದೀ ವಸ್ತ್ರಧಾರಿ. ಸರಳರಲ್ಲಿ ಸರಳರು. ಮಗುವಿನ ಮೃದು ಮನಸ್ಸಿನ ಇವರಂತಹ ಮತ್ತೊಬ್ಬ ಸುಮಕೋಮಲ ವ್ಯಕ್ತಿಯನ್ನು ನಾವು ಈ ನಾಡಿನಲ್ಲಿ ಕಾಣಲಾರೆವೇನೋ. ಈ ಮಾತಿಗೆ ಸಾಕ್ಷಿ ಎಂಬಂತೆ ನಿಟ್ಟೂರರಿಂದ ನನಗಾದ ಒಂದು ಸುಂದರ ಅನುಭವ -

ಈಗೆರಡು ವರ್ಷಗಳ ಹಿಂದೆ ನನ್ನ ಮಗಳ ಮದುವೆ, ಬೆಂಗಳೂರು ಸಜ್ಜನರಾವ್ ಛತ್ರದಲ್ಲಿ ಹದಿನೈದು ದಿನ ಮೊದಲೇ ನಿಟ್ಟೂರರನ್ನು ಆಹ್ವಾನಿಸಿ ಆಶೀರ್ವಾದ ಪಡೆದು ಬಂದಿದ್ದೆ. ಮದುವೆಯ ದಿನ. ಬೆಳಗಾಗುತ್ತಿದ್ದಂತೆ ಬಂದ ಪತ್ರಿಕೆಯಲ್ಲಿ ದೈನಂದಿನ ಕಾರ್ಯಕ್ರಮದ ಕಾಲಂ ನೋಡಿದೆ. ಅಂದು ಬೆಳಗ್ಗೆ ಹತ್ತಕ್ಕೆ ನಿಟ್ಟೂರರ ಅಧ್ಯಕ್ಷತೆ, ಒಂದು ಕಾರ್ಯಕ್ರಮದಲ್ಲಿ. 'ಸರಿ ಸರಿ, ಇನ್ನಿವರೆಲ್ಲಿ ಬಂದಾರು?' ಅಂದುಕೊಂಡೆ. ಆದರೆ ಆಶ್ಚರ್ಯ ಕಾದಿತ್ತು. ಹನ್ನೆರಡರ ಹೊತ್ತು. ಛತ್ರದ ಹೆಬ್ಬಾಗಿಲಿನಲ್ಲಿ ನಿಟ್ಟೂರರು ಪ್ರತ್ಯಕ್ಷ! ಒಮ್ಮೆಲೇ ಆನಂದ ಆಶ್ಚರ್ಯ! ಹಸೆಮಣೆಯ ಮೇಲಿದ್ದ ನಾನು ಧಿಗ್ಗನೆದ್ದವನೇ ಅವರತ್ತ

ಒಡಿದೆ. ಕೈ ಹಿಡಿದು ಕರೆತಂದೆ. ಸಭಾಂಗಣದ ಮುಂದಿನ ಸೀಟೊಂದರಲ್ಲಿ ಕೂರಿಸಿದೆ. ನನ್ನ ಮಗಳು ಅಳಿಯನನ್ನು ಅವರಿದ್ದಲ್ಲಿಗೆ ಕರೆದೆ, ಬಂದರು. ನಮಸ್ಕರಿಸಿದರು. ನಿಟ್ಟೂರರು ಆತ್ಮೀಯತೆಯಿಂದ ಆಶೀರ್ವದಿಸಿದರು. ನಂತರ ಶುರುವಾಯಿತು ನೋಡಿ ನಮಸ್ಕರಿಸುವವರ ಸರದಿ. ದೊಡ್ಡವರು ಚಿಕ್ಕವರು ಮಕ್ಕಳು ಮರಿ ಎನ್ನದೆ ಎಲ್ಲರೂ ನಿಟ್ಟೂರರಿಗೆ ನಮಸ್ಕರಿಸುವವರೇ! ಹೀಗೆ ನಮಸ್ಕರಿಸಿದವರಿಗೆಲ್ಲಾ ಹರಸಿಹರಸಿಯೇ ನಿಟ್ಟೂರರು ನಿಟ್ಟುಸಿರು ಬಿಡುವಷ್ಟು ಸುಸ್ತಾಗಿ ಹೋದರು. ಈ ನಡುವೆ ಅಂದಿನ ಕೇಂದ್ರ ಬಿಂದುಗಳೆಂಬಂತೆ ಮಿರುಗುತ್ತಿದ್ದ ನಮ್ಮ ಮದುಮಕ್ಕಳ ಅಸ್ತಿತ್ವವೇ ಕೆಲ ಕಾಲ ಬ್ಯಾಕ್‌ಡ್ರಾಪಿಗೆ ಹೊರಟು ಹೋಯಿತು.

ಅನಂತರ ಅವರ ಅಪೇಕ್ಷೆಯಂತೆ ಅವರಿದ್ದಲ್ಲಿಗೇ ಒಂದು ಅಗಲವಾದ ತಟ್ಟೆಯಲ್ಲಿ ಒಂದು ಲೋಟ ತಿಳಿಸಾರು, ಒಂದು ಲೋಟ ತಿಳಿ ಮಜ್ಜಿಗೆ, ಎರಡು ಹಿಡಿ ಅನ್ನ, ಒಂದು ಚೂರು ಬರ್ಫಿ, ಒಂದಿಷ್ಟು ಪಲ್ಯ ಕೋಸಂಬರಿ ಹಪ್ಪಳ ಇವುಗಳನ್ನೆಲ್ಲಾ ಓರಣವಾಗಿರಿಸಿಕೊಂಡು ತಂದು ಅವರ ಮುಂದಿರಿಸಿ ಸ್ಟೂಲೊಂದರ ಮೇಲಿಟ್ಟೆ. ತಮ್ಮ ಕಿರುಗಣ್ಣುಗಳನ್ನು ಅರಳಿಸಿಕೊಂಡು ತಟ್ಟೆಯನ್ನು ದಿಟ್ಟಿಸಿದ ನಿಟ್ಟೂರರು ನಂತರ ಸೆಟೆದು ನೆಟ್ಟಗಾದವರೆ' ಏನಪ್ಪಾ ಇದೆಲ್ಲಾ, ನಾನು ಕೇಳಿದ್ದು ಒಪ್ಪೊತ್ತಿನ ಊಟವನ್ನಷ್ಟೆ. ಒಂದು ವಾರದ ಊಟವನ್ನಲ್ಲ ಎಂದವರೆ ಒಂದು ತಟ್ಟೆಯನ್ನು ತರಿಸಿಕೊಂಡರು. ತಮ್ಮ ತಟ್ಟೆಯಲ್ಲಿದ್ದ ಅರ್ಧದಷ್ಟನ್ನು ಖಾಲಿ ತಟ್ಟೆಗೆ ತಳ್ಳಿದರು. ನಂತರ ಲೋಟದಲ್ಲಿದ್ದ ತಿಳಿಸಾರನ್ನು ಎರಡು ಬಾರಿ ಹೀರಿದರು. ಎರಡು ಚಮಚ ಅನ್ನವನ್ನು ಈ ತಿಳಿಸಾರಿನ ಲೋಟಕ್ಕೇ ಹಾಕಿ ಕಲಕಿ ಕಲಕಿ ಕುಡಿದರು. ಅಷ್ಟಕ್ಕೇ ಒಮ್ಮೆ ತೇಗಿದರು. ನಂತರ ಬರ್ಫಿಯ ತುಂಡನ್ನು ಬಾಯಿಗೆಸೆದುಕೊಂಡು ಚಪ್ಪರಿಸಿದರು. ಬಳಿಕ ಹಪ್ಪಳದ ಚೂರನ್ನು ಕರಕರಿಸಿದರು. ಮತ್ತೆ ಎರಡು ಚಮಚ ಅನ್ನಕ್ಕೆ ಮೊಸರು ಬೆರೆಸಿಕೊಂಡು ತಿಂದು ಲೊಚಗುಟ್ಟಿದರು. ನಂತರ ಎರಡು ತೇಗು. ತದನಂತರ ಲೋಟದಲ್ಲಿನ ಮಜ್ಜಿಗೆಯನ್ನು ಇಡಿಯಾಗಿ ಕುಡಿದರು. ತದನಂತರ ತಟ್ಟೆಯನ್ನು ಪಕ್ಕಕ್ಕಿಟ್ಟರು. ಬಾಯಿಯನ್ನು ತಮ್ಮ ಅಂಗವಸ್ತ್ರದಿಂದ ಒರೆಸಿಕೊಳ್ಳುತ್ತ 'ಊಟ ತುಂಬ ಹೆವಿಯಾಯ್ತು ಕೇಶವರಾಯರೆ. ತುಂಬ ಸೊಗಸಾಗಿತ್ತು. ನಾನಿನ್ನು ಬರ್ತೀನಿ' ಎಂದು ಎದ್ದವರೆ ಎಲ್ಲರತ್ತ ಕೈ ಬೀಸುತ್ತ ಹೊರಟು ಹೋದರು.

ಎಂತಹ ಸರಳ ಸುಂದರ ಜೀವಿ! ಅವರು ಅಲ್ಲಿ ಇದ್ದಷ್ಟು ಹೊತ್ತು ಬೆಳದಿಂಗಳ ಪೆಂಪು. ಅವರ ಸಾನಿಧ್ಯವಂತೂ ತಂಪು ತಂಪು.

ಬದುಕನ್ನು ಬಹಳವಾಗಿ ಇಂದಿಗೂ ಪ್ರೀತಿಸುವವರು ಮೂರ್ತಿರಾಯರು. ನೂರ್ಮೂರು ದಾಟಿರುವ ಇವರು ಇನ್ನೂ ನೂರು ವರ್ಷ ಬದುಕಲು ನನಗಾಸೆ ಎನ್ನುತ್ತಾರೆ.

ನಿಜಲಿಂಗಪ್ಪನವರೂ ಹೀಗೆಯೇ ಅನ್ನುತ್ತಿದ್ದರು. ಇವರುಗಳಂತೆಯೆ ನಮ್ಮ ನಿಟ್ಟೂರರು. ಬದುಕಿನ ಎಲ್ಲ ರೀತಿಯ ಕ್ಷಣ ಕ್ಷಣವನ್ನು ನಗು ನಗುತ್ತಲೇ ಪ್ರೀತಿಸುವ ಪೈಕಿಯವರು. ಬದುಕಿನ ಬೆಲೆಯನ್ನು ಬಲ್ಲವರು ಇವರು. ಇವರುಗಳ ಬದುಕಿನಲ್ಲಿ 'ಬೋರ್' ಎಂಬ ಪದಕ್ಕೆ ಬೆಲೆಯೇ ಇಲ್ಲ ಅದಿಲ್ಲವೂ ಇಲ್ಲ. ದಿನದಿನವೂ ಪ್ರಕಾಶಿಸುವ ದಿನಮಣಿಯಂತೆ ಇವರೂ ದಿನಮಣಿಗಳು - ನಮ್ಮ ನಾಡಿನ ಕಣ್ಮಣಿಗಳು.

ಹಿಂದೊಬ್ಬರು ಹಿರಿಯರು ಅಂದಿದ್ದರು; ಕೈಲಾಸಂ, ದೇವುಡು, ಅ.ನ.ಕೃ., ಕುವೆಂಪು, ಬೇಂದ್ರೆ, ನಿಜಲಿಂಗಪ್ಪ, ಸರ್.ಎಂ.ವಿ. ಇಂಥವರನ್ನು ದಿನನಿತ್ಯ ನೆನೆದರು ಸಾಕು, ನಮ್ಮ ಜೀವನ ಪಾವನವೆನಿಸಿ ಆಯುಷ್ಯ ಹತ್ತುವರ್ಷವಾದರೂ ಹೆಚ್ಚುತ್ತದೆ ಎಂದು. ಹಾಗೆಯೇ ಚೈತನ್ಯದ ಚಿಲುಮೆಯಂತೆ, ಪೊರೆಬಿಟ್ಟ ನಾಗರದಂತೆ, ಗರಿಗೆದರಿದ ನವಿಲದಂತೆ ನಡೆದಾಡುತ್ತಿರುವ ನಿಟ್ಟೂರು ಶ್ರೀನಿವಾಸರಾಯರನ್ನು ದಿನಂಪ್ರತಿ ಧ್ಯಾನಿಸುವುದಾದರೆ ನಮ್ಮ ಆಯುಷ್ಯ ಹತ್ತೇನು, ಹತ್ತಾರು ವರ್ಷಗಳೇ ಹೆಚ್ಚಿತು.

**ಕೊನೆಯಲ್ಲಿ ಕೆಲವು ಮಾತು:**

ಇತ್ತೀಚೆಗಷ್ಟೆ, ಕೇವಲ ಕೆಲವು ತಿಂಗಳ ಹಿಂದೆ ಮನೆಯಲ್ಲೇ ನಿಟ್ಟೂರರು ಮುಗ್ಗರಿಸಿದರು. ಒಂದು ಕಾಲಿನ ಮೊಣಕಾಲ್ಮೂಳೆ ಬಿರಿಯಿತು. ಈ ನೂರರ ಮುಪ್ಪಿನಲ್ಲಿ ಬಿರಿದ ಮೂಳೆಯನ್ನು ಭದ್ರಪಡಿಸುವುದು ಬ್ರಹ್ಮನಿಂದಲೂ ಸಾಧ್ಯವಾಗದೇನೋ. ಆದರೆ ನಿಟ್ಟೂರರ ಕೇಸಿನಲ್ಲಿ ಹಾಗಾಗಲಿಲ್ಲ. ಬಿರಿದ ಮೂಳೆ ಸರಿಯಾಯಿತು. ಮತ್ತೆ ನಿಟ್ಟೂರರು ನಡೆದಾಡುವಂತಾಯ್ತು, ಚಕ್ರವಿರುವ ವಾಕರ್ ಸಹಾಯದಿಂದ. ಆದರೆ ಈಗಲೂ ಮುರಿತಕ್ಕೊಳಗಾಗಿರುವ ಕಾಲಿನಲ್ಲಿ ಮೊದಲಿಗಿದ್ದ ತ್ರಾಣವಿಲ್ಲ. 'ಹೋಗಲಿ ಬಿಡಿ, ಇದಕ್ಕಾಗಿ ದುಃಖಿಸುವುದೇನಿದೆ? ಕಾಲಿನಲ್ಲಿ ತ್ರಾಣವಿಲ್ಲದಿದ್ದರೆ ಏನಾಯಿತು? ಅವರೇನು ಈ ವಯಸ್ಸಿನಲ್ಲಿ ಫುಟ್‌ಬಾಲ್ ಆಡಬೇಕೆ? ಸದ್ಯ ನಡೆದಾಡುವಂತಾದರಲ್ಲ, ಅಷ್ಟೇ ಸಾಕು' ಅಂದರು ಹಲವರು. 'ಆದರೂ ಹೀಗಾದ ಮೇಲೆ ಇನ್ನವರು ಸಭೆ ಸಮಾರಂಭಗಳಿಗೆ ಬರಲಾರರೇನೋ?' ಎಂದರು ಕೆಲವರು. ಆದರೆ ಯಾರು ತಾನೇ ಏನೆಂದರೇನು, ನಿಟ್ಟೂರರದು ಬಲು ಗಟ್ಟಿ ಜೀವ. ಅದನ್ನು ಒಂದೆಡೆ ಕಟ್ಟಿ ಕೂರಿಸುವುದು ಜಗಜಟ್ಟಿಯಿಂದಲೂ ಸಾಧ್ಯವಾಗದು. ಹೀಗಾಗಿ ನಿಟ್ಟೂರರು ಮತ್ತೆ ಮೊದಲಿನಂತೆಯೇ ಸಭೆಗಳಿಗೆ ಬರಲಾರಂಭಿಸಿದ್ದಾರೆ. ಹೀಗೆ ಬರುವ ನಿಟ್ಟೂರರನ್ನು ಒಂದು ಕುರ್ಚಿಯಲ್ಲಿ ಕೂರಿಸಿ ಹೊತ್ತು ವೇದಿಕೆಯ ಮೇಲೆ ಪ್ರತಿಷ್ಠಾಪಿಸುವ ರೀತಿ ಜಾರಿಗೆ ಬಂದಿದೆ.

"ಸತ್ತ ವ್ಯಕ್ತಿಯನ್ನು ನಾಲ್ಕು ಜನ ಹೊತ್ತು ಹೋಗುವುದನ್ನು ನಾನು ಕಂಡಿದ್ದೀನೆ, ನೀವೂ ಕಂಡಿದ್ದೀರಿ. ಆದರೆ ಬದುಕಿರುವಾಗಲೇ ನಾಲ್ಕು ಮಂದಿಯಿಂದ ಹೊರೆಸಿಕೊಳ್ಳುವ

ಭಾಗ್ಯ ಈಗ ನನ್ನದಾಗಿದೆ. ಈ ಭಾಗ್ಯ ನಿಮ್ಮಲ್ಲಿ ಎಷ್ಟು ಮಂದಿಗೆ ಲಭ್ಯವಾದೀತು?' ಎಂದು ಒಂದು ಕಾಲನ್ನೇ ಕಳೆದುಕೊಂಡಿದ್ದ ದೇವುಡು ಆ ದುಃಸ್ಥಿತಿಯಲ್ಲಿ ಸಭೆಗಳಿಗೆ ಬಂದಾಗಲೆಲ್ಲಾ ಹೇಳುತ್ತಿದ್ದರು. ಅವರ ಕಾಲದಲ್ಲಿ ಅಂತಹ ಭಾಗ್ಯವನ್ನು ಬೇರಾರೂ ಕಾಣಲಿಲ್ಲ. ಆದರೆ ಪ್ರಸ್ತುತ ಅಂತಹ ಭಾಗ್ಯ ನಿಟ್ಟೂರರಿಗೆ ಲಭ್ಯವಾಗಿದೆ. ಆನಂದದಿಂದಲೇ ಅನುಭವಿಸುತ್ತಿದ್ದಾರೆ - ಬಂದದ್ದೆಲ್ಲಾ ಬರಲಿ, ಭಗವಂತನ ದಯೆಯೊಂದಿರಲಿ ಎಂದು ಅಂದುಕೊಳ್ಳುತ್ತ.

ಇದೆಲ್ಲಾ ಏನೇ ಇರಲಿ, ಒಟ್ಟಿನಲ್ಲಿ ನಮ್ಮ ನಿಟ್ಟೂರರ ನಿತ್ಯೋತ್ಸವವಂತೂ ಅಡ್ಡಿ ಆತಂಕವಿಲ್ಲದೆ ಅಚ್ಚುಕಟ್ಟಾಗಿ ಹಿಂದಿನ ಎಂದಿನಂತೆಯೇ ಇಂದಿಗೂ ನಡೆಯುತ್ತಿದೆ. ಈ ನಿಟ್ಟೂರರ ನಿತ್ಯೋತ್ಸವ ಇಂತೆಯೇ ನಿರಂತರವಾಗಿ ಸೂರ್ಕಾಲ ನಡೆಯುತ್ತಿರಲಿ ಎಂಬುದು ನನ್ನ ಹಾರೈಕೆ.



# ಸಾಮಾನ್ಯ ಬದುಕಿನಲ್ಲಿ ಸಿದ್ಧಿ ಕಂಡ ಸಹಸ್ರಾಯು

. . . . . . . . . . . . . . . . . . . . . . . . . . . . . ✍ *ಗೌರಿಸತ್ಯ**

ನನ್ನ ತಮ್ಮ, ಗೌರಿಸುಂದರ್, ನ್ಯಾಯಮೂರ್ತಿ ನಿಟ್ಟೂರು ಶ್ರೀನಿವಾಸರಾಯರ ಬಗ್ಗೆ ನೀನೂ ಒಂದೆರಡು ಪುಟ ಬರೆ ಎಂದಾಗ ನಾನು ಸಂದಿಗ್ಧಕ್ಕೆ ಒಳಗಾದೆ. ಕಾರಣ, ನಾನು ನಿಟ್ಟೂರರನ್ನು ಹೆಚ್ಚಾಗಿ ದೂರದಿಂದ ಬಲ್ಲವನು. ಈಚೆಗೆ ಮಾತ್ರ ನನ್ನ ತಮ್ಮ ಏರ್ಪಡಿಸಿದ್ದ ಹಲವು ಸಮಾರಂಭಗಳಲ್ಲಿ ಅವರನ್ನು ನಾನು ಕಂಡಿದ್ದೆ, ಮಾತನಾಡಿಸಿದ್ದೆ. ನಿಜ, ಅವರನ್ನು ಕಂಡರೆ ನನಗೆ ಗೌರವ, ಪೂಜ್ಯ ಭಾವನೆ. ಶತಮಾನದ ಆ ವ್ಯಕ್ತಿಯ ಬಗ್ಗೆ, ಅವರ ವ್ಯಕ್ತಿತ್ವದ ಬಗ್ಗೆ ಯಾರಿಗೆ ತಾನೇ ಗೌರವ- ಪೂಜ್ಯ ಭಾವನೆಗಳು ಬರುವುದಿಲ್ಲ? ಹೀಗಾಗಿ ಏನನ್ನು ಬರೆಯಲಿ ಎಂದುಕೊಂಡೆ.

ಅವರನ್ನು ಪ್ರಥಮವಾಗಿ ನನ್ನ ತಮ್ಮನ ಮನೆಯಲ್ಲೇ ನನ್ನನ್ನು ನಾನೇ ಪರಿಚಯಿಸಿಕೊಂಡು ಮಾತನಾಡಿಸಿದ್ದನ್ನು ಕುರಿತು ಬರೆಯಲೇ? ನನ್ನ ಹೆಮ್ಮೆಯ ತಮ್ಮಂದಿರ ಹೆಸರು ಹೇಳಿ ನನ್ನನ್ನು ಪರಿಚಯಿಸಿಕೊಂಡಾಗ, ನಿಟ್ಟೂರರು ಎತ್ತಿದ " ಹೋ, ಹೋ" ಉದ್ಗಾರದಲ್ಲೇ ನಾನು ಮಾರುಹೋಗಿದ್ದೆ. "ಹೋ, ಹೋ! ಜಿ.ಎಲ್.ಸ್ವಾಮಿಯ ಮಗ. ಗೊತ್ತು, ಗೊತ್ತು" - ಅವರಿಗೆ ನಾನು ಯಾರೆಂದು ಹೆಚ್ಚು ಹೇಳಬೇಕಿರಲಿಲ್ಲ.

"ಜಿ.ಎಲ್.ಸ್ವಾಮಿ, ಕಂಪೈಲರ್ ಆಫ್ ಹ್ಯಾಂಡ್ ಬುಕ್ಸ್.

---

* ೨೨೪, ಪ್ರಿಯಂ ದಿವಾನ್ಸ್ ರಸ್ತೆ, ಚಾಮರಾಜ ಮೊಹಲ್ಲಾ
ಮೈಸೂರು - ೫೭೦ ೦೨೪

ಎಂತಹ ಒಳ್ಳೆಯ ಕೆಲಸ ಮಾಡಿದ್ದರು. ಅಂತಹ ಕೆಲಸ ಈವರೆಗೆ ಯಾರೂ ಮಾಡಿಲ್ಲ.'' ನಿಟ್ಟೂರರು ನನ್ನ ತಂದೆಯ ಬಗ್ಗೆ ಆಡಿದ ಮಾತುಗಳು ನನ್ನನ್ನು ಮೂಕಸ್ಮಿತನನ್ನಾಗಿ ಮಾಡಿತ್ತು. ನನ್ನ ತಂದೆಯ ಬಗ್ಗೆ ನನಗೆ ಇನ್ನಷ್ಟು ಹೆಮ್ಮೆ ಎನ್ನಿಸಿತ್ತು. ನನ್ನ ತಂದೆಯ ಬಗ್ಗೆ ಅವರಿಗಿದ್ದ ಅಭಿಮಾನ, ಪ್ರೀತಿಯ ಜೊತೆಗೆ ನನಗೆ ಹೆಚ್ಚು ವಿಸ್ಮಯ ಉಂಟು ಮಾಡಿದ್ದು ನಿಟ್ಟೂರರ ಸ್ಮೃತಿಶಕ್ತಿ. ಅವರ ನೆನಪು, ಅದೊಂದು ಪವಾಡ. ಅವರು ನನ್ನ ತಂದೆಯ ಬಗ್ಗೆ ಆಡುತ್ತಿದ್ದ ಮಾತು ೫೦-೬೦ ವರ್ಷಗಳಷ್ಟು ಹಿಂದಿನವು! ಅದರ ಬಗ್ಗೆ ಅವರ ಅಸ್ಖಲಿತ ನೆನಪು ನನಗೆ ಆಶ್ಚರ್ಯ ತಂದಿತ್ತು.

ನನ್ನ ತಂದೆ ಸುಮಾರು ೬೦ ವರ್ಷಗಳ ಹಿಂದೆಯೇ ಅಂದಿನ ಮೈಸೂರು ರಾಜ್ಯದ ಪ್ರತಿ ಗ್ರಾಮಕ್ಕೆ, ತಾಲ್ಲೂಕಿಗೆ, ಜಿಲ್ಲೆಗೆ ಕೈಪಿಡಿಗಳನ್ನು ಪ್ರಕಟಿಸಿ, 'ಕಂಪೈಲರ್ ಆಫ್ ಹ್ಯಾಂಡ್ ಬುಕ್ಸ್' ಎಂದೇ ಮನ್ನಣೆ ಗಳಿಸಿದ್ದರು. ಆ ಕೈಪಿಡಿಗಳು ಆಯಾ ಸ್ಥಳಗಳ ಬಗ್ಗೆ ಎಲ್ಲ ಮಾಹಿತಿಯನ್ನು ಹೊಂದಿದ್ದವು. ಅವು ಇಂದಿಗೂ ಮಾದರಿಯಾಗಿ ಉಳಿದಿವೆ. ನಿಟ್ಟೂರರು ಹೇಳಿದಂತೆ ಅಂತಹ ಕೈಪಿಡಿಗಳನ್ನು ಈವರೆಗೆ ಯಾರು ತರುವ ಸಾಹಸ ಮಾಡಿಲ್ಲ. ನಮ್ಮ ತಂದೆಯ ಈ ಕಾರ್ಯವನ್ನು ಅರಿತಿರುವುದಿರಲಿ, ಹಿರಿಯ ನಿಟ್ಟೂರರು ತಮ್ಮ ಶತಮಾನದ ಅಂಚಿನಲ್ಲಿಯೂ ತಮ್ಮ ನೆನಪಿನ ಅಂಗಳದಲ್ಲಿ ಅವೆಲ್ಲವನ್ನೂ ಇಟ್ಟುಕೊಂಡಿದ್ದರು. ಆ ಅಭಿಮಾನವನ್ನು ನನ್ನೊಂದಿಗೆ ಹಂಚಿಕೊಂಡಿದ್ದರು.

ನಿಟ್ಟೂರರ ವ್ಯಕ್ತಿತ್ವ, ಅಗಾಧ ನೆನಪಿನ ಬಗ್ಗೆ ಇಷ್ಟು ಮಾತ್ರ ಬರೆದರೆ ಸಾಕೇ ಎನ್ನಿಸಿತು ನನಗೆ. ಅಥವಾ, ಅವರ ನಿಸ್ಪೃಹ ಬದುಕು, ಸರಳ ಉಡಿಗೆ, ಮಮತೆಯ ಮಾತು, ಸಜ್ಜನತೆಯ ನಡವಳಿಕೆಯ ಬಗ್ಗೆ ನನಗೆ ಮೂಡಿರುವ ಗೌರವದ ಬಗ್ಗೆ ಬರೆಯಲೇ?

ಅವರ ಶುಭ್ರ ಬಿಳೀ ಖಾದೀ ಪಂಚೆ, ಜುಬ್ಬ, ಮೇಲೊಂದು ಖದ್ದರ್ ವಲ್ಲಿಯ ಉಡಿಗೆಯನ್ನು ಕಂಡವರು, ಅವರ ಸರಳತೆಯನ್ನು ಕಂಡವರು, ಅವರ ಆದರ್ಶಗಳನ್ನು ಅರಿತವರು ಅವರನ್ನು ಗಾಂಧಿವಾದಿ ಎನ್ನಬಹುದು. ಆದರೆ ಅವರು ನನಗೆ ಗಾಂಧಿ'ವಾದಿ' ಯಾಗಿ ಕಾಣಲಿಲ್ಲ. ಹಾಗೆಂದು ಕರೆಯುವುದು ಅದೇಕೋ ನನಗೆ ಸರಿ ಎನ್ನಿಸಲಿಲ್ಲ. ಅವರು ಗಾಂಧಿ 'ವಾದಿ'ಯಾಗದೆ, ವ್ಯಾಖ್ಯಾನಕಾರರಾಗದೆ, ಗಾಂಧಿಯ ಆದರ್ಶಗಳನ್ನು, ತತ್ವಗಳನ್ನು ತಮ್ಮ ಮನಸ್ಸಿಗೆ ತೃಪ್ತಿ ತರುವ ರೀತಿಯಲ್ಲಿ ತಮ್ಮ ಬದುಕಿಗೆ ಅನ್ವಯಿಸಿ ಕೊಂಡು, ಅದನ್ನು ಸ್ವಲ್ಪವೂ ತೋರ್ಪಡಿಸಿಕೊಳ್ಳದೆ, ಪ್ರತಿಷ್ಠೆಯನ್ನಾಗಿ ಬಳಸಿಕೊಳ್ಳದೆ ಬದುಕುತ್ತಿರುವ ರೀತಿ ನನಗೆ ಹೆಚ್ಚು ಆದರ್ಶವೆನಿಸಿತು. ನನಗೆ ಹೆಚ್ಚು ಆಪ್ಯಾಯಮಾನವಾಗಿ ಕಾಣಿಸಿತು. ಆ ದೃಷ್ಟಿಯಲ್ಲಿ ಅವರು ಗಾಂಧೀ 'ವಾದಿ'ಯಾಗದೆ, ಗಾಂಧೀಜಿಯ ಬದುಕನ್ನು

ತಮ್ಮ ದಿನನಿತ್ಯದ ಬದುಕಿನಲ್ಲಿ ಅನ್ವಯಿಸಿಕೊಂಡಿರುವ ಅಪರೂಪದ ಆದರ್ಶವ್ಯಕ್ತಿಯಾಗಿ ಕಂಡರು.

ಸಮಾರಂಭಗಳಿಗೆ ಬಂದಾಗಲೂ ಅಷ್ಟೇ. ಅದೇ ಹಸನ್ಮುಖಿ. ಕಣ್ಣಿನಲ್ಲಿ ಮಮತೆಯ ಕೋಲ್ಮಿಂಚು. ತುಂಬು ಜೀವನ. ತೃಪ್ತಿಯ ಬದುಕು. ಬದುಕನ್ನೇ ಒಂದು ಔಪಾಸನೆಯನ್ನಾಗಿ ತೆಗೆದುಕೊಂಡ ಓರ್ವ ಔಪಾಸಕನಾಗಿ ನನಗೆ ಅವರು ಕಾಣುತ್ತಾರೆಂದರೆ ಅದು ಉತ್ಪ್ರೇಕ್ಷೆಯ ಮಾತಲ್ಲ. ಕರೆದ ಸಮಾರಂಭಕ್ಕೆಲ್ಲಾ ತಪ್ಪದೆ ಹಾಜರು. ಕೂರಲು ಮುಂದಿನ ಸಾಲೇ ಬೇಕೆಂದೇನೂ ಇಲ್ಲ. ಅವರನ್ನು ಕರೆಯಲು ಮನೆಗೆ ಫೋನ್ ಹಚ್ಚಿದಾಗ ಅವರಿಲ್ಲದಿದ್ದರೆ, ಅವರು ಹಿಂತಿರುಗಿದ ನಂತರ ಅವರೇ ಹಿಂತಿರುಗಿ ಫೋನಾಯಿಸಿ ವಿವರ ಪಡೆದುಕೊಳ್ಳುತ್ತಾರೆ. ಇದು ಮಾಜಿ ರಾಜ್ಯಪಾಲರ, ಮಾಜಿ ಶ್ರೇಷ್ಠ ನ್ಯಾಯಮೂರ್ತಿಗಳ ಸೌಜನ್ಯ, ಸರಳತೆ, ಸನ್ನಡತೆ.

ಇವೆಲ್ಲಾ ಕಂಡ ನಿನಗೆ ನಿಟ್ಟೂರರು ನಮ್ಮ ಬದುಕಿಗೆ ಮಾರ್ಗದರ್ಶಿಗಳಾಗಿ ನಿಲ್ಲುತ್ತಾರೆ. ಸಾಮಾನ್ಯ ಬದುಕಿನಲ್ಲೇ ಸಿದ್ಧಿ ಸಾಧಿಸಿದ ಸಹಸ್ರಾಯುವಾಗಿ ಕಾಣುತ್ತಾರೆ. ಅಂತಹ ಆದರ್ಶ ಪುರುಷರು, ಮಹಾನುಭಾವರು ಇಂದು ಹೆಚ್ಚಬೇಕಾಗಿದೆ. ಇತರರ ಬದುಕಿಗೆ ಎಂದಿಗಿಂತ ಹೆಚ್ಚಿಗೆ, ದಾರಿದೀಪವಾಗಿ ನಿಲ್ಲಬೇಕಾಗಿದೆ.

❑

# ಶತಮಾನದ ಸಾಕ್ಷಿ ಪುರುಷ

. . . . . . . . . . . . . . . . . . . . . . . . . . . . ✍ *ಬಾಬು ಕೃಷ್ಣಮೂರ್ತಿ**

"ಅಂದು ಜುಲೈ ೩೦, ೧೯೨೮ನೇ ಇಸವಿ. ನಾನಾಗ ನನ್ನ ವಕೀಲಿ ಕಛೇರಿಯನ್ನು ಚಿಕ್ಕಪೇಟೆಯ ಮಲ್ಲಪ್ಪ ಮಾರ್ಕೆಟ್‌ನಲ್ಲಿ ಇಟ್ಟುಕೊಂಡಿದ್ದೆ. ಸಮಯ ಸುಮಾರು ರಾತ್ರಿ ೭-೩೦. ಅಂದಿನ ಕೆಲಸ ಮುಗಿಸಿ, ಕಡತಗಳನ್ನು ಕಟ್ಟಿಟ್ಟು ಕಛೇರಿಯಿಂದ ಹೊರಬಂದು ನನ್ನ ಬೈಸಿಕಲ್ಲನ್ನು ತಳ್ಳಿಕೊಂಡು ಬಸವನಗುಡಿಯಲ್ಲಿದ್ದ ಮನೆಯ ಕಡೆಗೆ ಹೊರಟೆ. ಬೈಸಿಕಲ್ಲನ್ನು ತಳ್ಳಿಕೊಂಡು ಹೋಗಲು ಕಾರಣ ನನ್ನ ಜೊತೆಯಲ್ಲಿದ್ದ ವಕೀಲ ಮಿತ್ರರು ಮಿರ್ಲೆ ಲಕ್ಷ್ಮೀನಾರಣಪ್ಪ ಮತ್ತು ಎಂ.ಎ. ಗೋಪಾಲಸ್ವಾಮಿ ಅಯ್ಯಂಗಾರ್ ಪಾದಚಾರಿಗಳಾಗಿದ್ದುದು. ನಾನಾಗ ನನ್ನ ಸೋದರ ಮಾವ ಎಂ.ಎಸ್. ಕೃಷ್ಣರಾಯರೊಂದಿಗೆ ಅವರ ಮನೆಯಲ್ಲಿ ವಾಸಿಸುತ್ತಿದ್ದೆ. ಆರ್ಕಾಟ್ ಶ್ರೀನಿವಾಸಾಚಾರ್ ರಸ್ತೆಯಲ್ಲಿ ತುಸು ದೂರ ಸಾಗುವ ವೇಳೆಗೆ ದೂರದಿಂದ ಗುಂಡುಗಳು ಹಾರಾಡಿದ ಸಪ್ಪಳ ಕೇಳಿ ಬಂದು ಒಂದು ಕ್ಷಣ ನಾವು ಅವಾಕ್ಕಾದೆವು. ಅದು ಸುಲ್ತಾನ್‌ಪೇಟೆ ಮಾಧ್ಯಮಿಕ ಶಾಲೆಯ ಕಟ್ಟಡದ ಕಡೆಯಿಂದ ಕೇಳಿಬಂದ ಸಪ್ಪಳ. ನಾವು ಅದೇ ದಾರಿಯಲ್ಲಿ ಬೇಗ ಬೇಗ ಹೆಜ್ಜೆ ಹಾಕುತ್ತಾ ಸಾಗಿದೆವು. ಘಟನಾ ಸ್ಥಳವನ್ನು ಸಮೀಪಿಸುತ್ತಿದ್ದಂತೆ ಅಲ್ಲೊಂದು ಅಲ್ಲೋಲ ಕಲ್ಲೋಲ ವಾತಾವರಣ ಸೃಷ್ಟಿಯಾಗಿರುವುದು ಗಮನಕ್ಕೆ ಬಂತು. ಜನ ರೋಷಾವೇಶದಿಂದ ಕೂಗಾಡುತ್ತಿದ್ದರು. ವಿದ್ಯುಚ್ಛಕ್ತಿ ಸ್ಥಗಿತವಾಗಿ ಕತ್ತಲೆ ಬೇರೆ ಕವಿದಿತ್ತು."

---

* ನಂ. ೨೬, 'ಅನುಗ್ರಹ' ೧೮ನೇ ಅಡ್ಡರಸ್ತೆ, ೮ನೇ ಮುಖ್ಯರಸ್ತೆ,
ಪುಷ್ಪಾ ಲೇಔಟ್, ಎನ್.ಎಸ್. ಪಾಳ್ಯ, ಬಿ.ಟಿ.ಎಂ. ೨ನೇ ಸ್ಟೇಜ್
ಬೆಂಗಳೂರು - ೫೬೦ ೦೭೬

- ಇದು ನಮ್ಮ ಭಾಗ್ಯವಶದಿಂದ ನಮ್ಮೊಡನಿರುವ ಧೀಮಂತ ಶತಾಯುಷಿ ಶ್ರೀ ನಿಟ್ಟೂರು ಶ್ರೀನಿವಾಸರಾಯರು ತಮ್ಮ ನೆನಪಿನ ಗಣಿಯಿಂದ ಅಂದಿನ ಒಂದು ಐತಿಹಾಸಿಕ ಮಹತ್ವದ ಘಟನೆಯನ್ನು ಬಿಚ್ಚಿಡಲು ಪೀಠಿಕೆ ಹಾಕಿದ ಬಗೆ.

ಸುಲ್ತಾನ್ ಪೇಟೆ ಗಣಪತಿ ಗಲಾಟೆಯೆಂದು ಆನಂತರ ಪ್ರಸಿದ್ಧಿಗೆ ಬಂದ ಆ ದಿನದ ಘಟನೆ ಅನೇಕ ದೃಷ್ಟಿಗಳಿಂದ ಮಹತ್ವದ್ದು. ಅಂದಿನವರೆಗೆ ಬೆಂಗಳೂರು ಕೇಳರಿಯದ ಒಂದು ಕೋಮು ಗಲಭೆ ಅದು. ನಾಲ್ವಡಿ ಕೃಷ್ಣರಾಜ ಒಡೆಯರು ಮಹಾರಾಜರಾಗಿ, ಅವರ ಬಾಲ್ಯ ಸ್ನೇಹಿತ, ಸಹಪಾಠಿ ಮಿರ್ಜಾ ಇಸ್ಮಾಯಿಲ್ ಸಹೋದರರು ದಿವಾನರಾಗಿ ಸಮರ್ಥವಾಗಿ ಆಡಳಿತ ನಡೆಸುತ್ತಿದ್ದ ದಿನಗಳವು. ಇಲ್ಲಿನ ಪ್ರಜೆಗಳದು ನೆಮ್ಮದಿಯ ಬಾಳ್ವೆ. ಮಹಾರಾಜರಲ್ಲಿ ಎಲ್ಲ ಮತ, ಪಂಥ, ಕೋಮು, ಜಾತಿಗಳ ಜನರಿಗೆ ಅಸೀಮ ಭಕ್ತಿ, ಗೌರವ, ಶ್ರದ್ಧೆ. ಮಹಾತ್ಮಾ ಗಾಂಧಿಯವರಿಂದಲೇ 'ರಾಜರ್ಷಿ' ಎಂದು ಕಾಣಿಸಿಕೊಂಡ ಮಹಾನುಭಾವ ನಾಲ್ವಡಿಯವರು.

ಪ್ರಶಾಂತವಾದ ಕೊಳ ಒಂದರಲ್ಲಿ ಕಲ್ಲು ಬಿದ್ದು ಅದು ಕದಡಿ ಹೋಗುವಂತೆ ಮಾಡಿದ ಗಲಭೆ ಈ ಸುಲ್ತಾನ್ ಪೇಟೆ ಗಣಪತಿ ಗಲಭೆ.

ಇವರ ಪ್ರತ್ಯಕ್ಷದರ್ಶಿ ಮಾತ್ರವಲ್ಲ, ಇದರಲ್ಲಿ ಮುಖ್ಯಪಾತ್ರಧಾರಿಯೂ ಹೌದು ನಿಟ್ಟೂರು ಶ್ರೀನಿವಾಸರಾಯರು. ಬೆಂಗಳೂರಿನ ಒಂದು ಶತಮಾನದ ಏಳುಬೀಳುಗಳನ್ನು ಕಂಡ ಜೀವಂತ ಸಾಕ್ಷಿ ಈ ಹಿರಿಜೀವ. ಬಾಲ್ಯದಿಂದ ಆರಂಭಿಸಿ ಇಂದಿನವರೆಗೆ ಬೆಂಗಳೂರಿನ ನಾಗರಿಕ ಜೀವನದಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುತ್ತಾ ಬಂದಿರುವವರು. ಗಾಂಧೀಜಿಯವರನ್ನು ಹತ್ತಿರದಿಂದ ಕಂಡವರು. 'ಸತ್ಯ ಶೋಧನ' ಪುಸ್ತಕ ಪ್ರಕಾಶನವನ್ನು ಸ್ಥಾಪಿಸಿ ಪುಸ್ತಕ ಪ್ರಕಾಶನಕ್ಕೆ ಒಂದು ಹೊಸ ಆಯಾಮ ಕಲ್ಪಿಸಿ ಅನೇಕ ಪ್ರಸಿದ್ಧ ಕನ್ನಡ ಲೇಖಕರನ್ನು ಸಾರಸ್ವತ ಲೋಕಕ್ಕೆ ನೀಡಿರುವವರು. ಎರಡು ದೇಹ ಒಂದು ಜೀವ ಎನ್ನುವಂತಿದ್ದ ಅವರೂ, ತಿರುಮಲೆ ತಾತಾಚಾರ್ಯ ಶರ್ಮರು ಒಂದಾಗಿ 'ವಿಶ್ವಕರ್ನಾಟಕ' ಪತ್ರಿಕೆಯನ್ನು ನಡೆಸಿದರು. ಪತ್ರಿಕೆಯ ಸ್ವರೂಪದಿಂದ ಆರಂಭಿಸಿ ಅದರಲ್ಲಿನ ಸುದ್ದಿ, ಲೇಖನಗಳ ಪ್ರಕಟಣೆಯವರೆಗೆ ಅದರಲ್ಲಿ ತೊಡಗಿಸಿಕೊಂಡವರು. ೧೯೨೭ರಷ್ಟು ಹಿಂದೆಯೇ ತಮ್ಮ ಪತ್ನಿಯೊಡನೆ ಸೇರಿಕೊಂಡು ಮಹಾತ್ಮಾ ಗಾಂಧಿಯವರ ಆತ್ಮಕಥೆಯನ್ನು ಕನ್ನಡಕ್ಕೆ ಅನುವಾದ ಮಾಡಿ ವಿಶ್ವಕರ್ನಾಟಕದಲ್ಲಿ ಪ್ರಕಟಿಸಿದ್ದವರು.

ಸುಲ್ತಾನ್‌ಪೇಟೆ ಗಣಪತಿಯ ಗಲಾಟೆಯ ಪ್ರಸಂಗದಲ್ಲಿಯೂ ಆರಂಭದಿಂದ ಕೊನೆಯವರೆಗೂ ಆ ಘಟನಾವಳಿಗಳಲ್ಲಿ ಸಕ್ರಿಯವಾಗಿ ಭಾಗವಹಿಸಿದವರು ಶ್ರೀ ನಿಟ್ಟೂರರು.

ಶ್ರೀ ನಿಟ್ಟೂರರರೊಂದಿಗೆ ನಾನು ನಡೆಸಿದ ಒಂದೂವರೆ ಗಂಟೆಯ ಸಂದರ್ಶನವನ್ನು ಆಧರಿಸಿ ಈ ಬರಹವನ್ನು ಸಿದ್ಧಪಡಿಸಿದ್ದೇನೆ.

ಮುಖ್ಯವಾಗಿ ಸಂದರ್ಶನವೇ ಇದಕ್ಕೆ ಆಧಾರವಾದರೂ ಇದಕ್ಕೆ ಪುಷ್ಟಿ ನೀಡುವ ಸಲುವಾಗಿ ಇನ್ನು ಕೆಲವು ಅಡಕಗಳನ್ನು ಬಳಸಿಕೊಂಡಿದ್ದೀನಿ.

* * *

ಆರ್ಕಾಟ್ ಶ್ರೀನಿವಾಸಾಚಾರ್ ರಸ್ತೆಯಲ್ಲಿ ಬೆಂಗಳೂರು ಮುನ್ಸಿಪಾಲಿಟಿಗೆ ಸೇರಿದ ಆಕ್ಟ್ರಾಯ್ ಕಛೇರಿಯಿದ್ದ ಒಂದು ಹಳೆಯ ಕಟ್ಟಡವಿತ್ತು. ೧೯೧೮ರಿಂದಲೂ ಈ ಕಟ್ಟಡದ ಸೆಂಟ್ರಲ್ ಹಾಲ್‌ನಲ್ಲಿ ಗಣಪತಿಯ ವಿಗ್ರಹ ಒಂದಿತ್ತು. ಸುಲ್ತಾನ್‌ಪೇಟೆಯಲ್ಲಿ ಎಸ್.ಆರ್. ನಂಜುಂಡಯ್ಯ ಎಂಬ ದಾನಿಯೊಬ್ಬರು ಒಂದು ಮಾಧ್ಯಮಿಕ ಶಾಲೆಯನ್ನು ನಡೆಸುತ್ತಿದ್ದರು. ಅವರು ತಮ್ಮ ಶಾಲೆಯ ಒಂದು ಶಾಖೆಯನ್ನು ಈ ಕಟ್ಟಡದಲ್ಲಿ ಆರಂಭಿಸಿದರು. ಶಾಲಾ ಮಕ್ಕಳು ಈ ಗಣಪತಿಯನ್ನು ಶಾಲೆಯ ಮುಂದಿನ ಬಯಲು ಪ್ರದೇಶಕ್ಕೆ ತಂದು ಅದಕ್ಕೊಂದು ಚಿಕ್ಕ ಗುಡಿ ಕಟ್ಟಿ ಪ್ರತಿದಿನ ಅದಕ್ಕೆ ನಮಸ್ಕಾರ ಮಾಡಿ ಪಾಠ ಪ್ರವಚನಗಳನ್ನು ಆರಂಭಿಸುವ ಪದ್ಧತಿಯನ್ನು ಬೆಳೆಸಿಕೊಂಡಿದ್ದರು.

ಈ ಶಾಲಾ ಕಟ್ಟಡದ ಮುಂದೆಯೇ ಅಂದಿನ ಪ್ರಭಾವಿ ಮುಂದಾಳು ಮಹಮ್ಮದ್ ಅಬ್ಬಾಸ್ ಖಾನರ ಮಹಡಿ ಮನೆ. ದಿಟ್ಟ ಸ್ವಭಾವದ, ಆಕರ್ಷಕ ವ್ಯಕ್ತಿತ್ವ ಹೊಂದಿದ್ದ ಉತ್ತಮ ವಾಗ್ಮಿ ಹಾಗೂ ಕಾರ್ಯಸಾಧಕ ಅಬ್ಬಾಸ್ ಖಾನ್ ಸಾಹೇಬರು. ದಿವಾನರ ಆಪ್ತ ವಲಯಕ್ಕೆ ಸೇರಿದವರೆಂದು ಆ ದಿನಗಳಲ್ಲಿ ಜನಜನಿತವಾಗಿತ್ತು. ಆರಂಭದ ದಿನಗಳಲ್ಲಿ ಅರಣ್ಯ ಇಲಾಖೆ, ಎಕ್ಸೈಸ್ ಇಲಾಖೆಯ ನೌಕರಿಯಲ್ಲಿ ಸಾಹೇಬರು ಆನಂತರ ಮರಮುಟ್ಟು ವ್ಯಾಪಾರ ಆರಂಭಿಸಿದರು. ಅದರಿಂದ ಯಥೇಚ್ಛ ಹಣ ಸಂಪಾದಿಸಿದರು. ಆ ಹಣದಿಂದಲೇ ಆಗ ಅವರಿದ್ದ ಮನೆಯನ್ನು ಕೊಂಡುಕೊಂಡದ್ದು. ಪ್ರಜಾಪ್ರತಿನಿಧಿ ಸಭೆಯ ಸಮರ್ಥ ಸದಸ್ಯರೂ, ಆನಂತರ ಬೆಂಗಳೂರು ಮುನ್ಸಿಪಾಲಿಟಿಯ ಅಧ್ಯಕ್ಷರೂ ಆಗಿದ್ದವರು.

ಅಬ್ಬಾಸ್ ಖಾನರಿಗೆ ನವಾಬ್ ಗುಲಾಂ ಅಹಮದ್ ಕಲಾಮಿಯೆಂಬ ಆಪ್ತ ಮಿತ್ರರು. ಅವರೂ ಶ್ರೀಮಂತರು. ವಾಣಿಯಂಬಾಡಿಯ ಕಡೆಯವರು. ಈ ಇಬ್ಬರು ಗೆಳೆಯರು ಸೇರಿ ಚಂದಾ ವಸೂಲಿ ಮಾಡಿ ೧೯೧೦-೧೧ರಲ್ಲಿ ಆರ್ಕಾಟ್ ಶ್ರೀನಿವಾಸಾಚಾರ್ ರಸ್ತೆಯಲ್ಲಿಯೇ ಸೆಂಟ್ರಲ್ ಮಹಮಡನ್ ಅಸೋಸಿಯೇಷನ್ನನ್ನು ಸ್ಥಾಪಿಸಿದ್ದರು. ಇದು ಸುಲ್ತಾನ್‌ಪೇಟೆ ಶಾಲೆಯ ಸಮೀಪವೇ ಇತ್ತು.

ಒಮ್ಮೆ ಇದ್ದಕ್ಕಿದ್ದಂತೆ ಶಾಲೆಯ ಆವರಣದಲ್ಲಿದ್ದ ಗಣಪತಿ ವಿಗ್ರಹ ಮಾಯವಾಯಿತು. ಇದರಿಂದ ವಿದ್ಯಾರ್ಥಿಗಳಲ್ಲಿ, ಸಾರ್ವಜನಿಕರಲ್ಲಿ ಆತಂಕ ಉಂಟಾಯಿತು. 'ವಿಗ್ರಹ ಮಾಯವಾಯಿತು. ಇದು ಯಾರ ಕೆಲಸ?' ಎಂದು ಚರ್ಚೆ ಶುರುವಾಯಿತು. ಎಲ್ಲರ ಅನುಮಾನವೂ ಅಬ್ಬಾಸ್ ಖಾನರ ಕಡೆಗೆ ತಿರುಗಿತು. ಅಬ್ಬಾಸ್ ಖಾನರ ವಿನಂತಿಯ ಮೇರೆಗೆ ದಿವಾನರು ಈ ಕೆಲಸ ಮಾಡಿದ್ದಾರೆಂಬ ಗುಮಾನಿ ಬಲವಾಯಿತು.

ದಿವಾನರಿಗೆ ಈ ಗಣಪತಿ ವಿಗ್ರಹ ಮುಂದೊಮ್ಮೆ ಕೋಮುಗಲಭೆಗೆ ಕಾರಣವಾಗ ಬಹುದು ಎಂಬ ಅನುಮಾನ ಹುಟ್ಟಿತಂತೆ. ಅದಕ್ಕೆ ಕಾರಣ ಅದರ ಸಮೀಪ ಎದುರಿಗಿದ್ದ ಮಸೀದಿ. ಮುಂದಾಗಬಹುದಾದ ಕೋಮು ಘರ್ಷಣೆಯನ್ನು ತಡೆಯಲು ದಿವಾನರು ಅದನ್ನು ಸ್ಥಳಾಂತರಿಸುವಂತೆ ಅಂದಿನ ವಿದ್ಯಾ ಇಲಾಖೆಯ ನಿರ್ದೇಶಕರಿಗೆ ೧೯೨೮ರ ಜೂನ್ ೧೨ರಂದು ಒಂದು ಹುಕುಂ ಹೊರಡಿಸಿದರಂತೆ. ಕೂಡಲೇ ಕಾರ್ಯಪ್ರವೃತ್ತವಾದ ಇಲಾಖೆ (ಶಂಕರಪುರದ ರಂಗರಾವ್ ರಸ್ತೆಯೆಂಬ ಹೆಸರಿಗೆ ಕಾರಣವಾದ ರಂಗರಾವ್ ಎಂಬುವರು ಆಗ ವಿದ್ಯಾ ಇಲಾಖೆಯ ಮುಖ್ಯ ಅಧಿಕಾರಿಯಾಗಿದ್ದರಂತೆ) ಆ ಗಣಪತಿ ವಿಗ್ರಹವನ್ನು ಸ್ಥಳಾಂತರಿಸಿತು.

ಆ ವೇಳೆಗೆ ಮಹಾರಾಷ್ಟ್ರದಲ್ಲಿ ಲೋಕಮಾನ್ಯ ತಿಲಕರ ಸಾರ್ವಜನಿಕ ಗಣೇಶೋತ್ಸವ ಗಳ ಪರಿಣಾಮವಾಗಿ ಇಲ್ಲಿಯೂ ಗಣಪತಿ ಅಪಾರ ಶ್ರದ್ಧಾಭಕ್ತಿಗಳಿಗೆ ಕಾರಣವಾಗಿದ್ದ ಗಣಪತಿ ಮಾಯವಾಗಿರುವ ಸಂಬಂಧದಲ್ಲಿ ಅಬ್ಬಾಸ್ ಖಾನರದೇ ಮುಖ್ಯ ಪಾತ್ರವೆಂಬ ಗುಮಾನಿ ಬಲವಾಗಿ ಊರೆಲ್ಲ ಹಬ್ಬಿತು. ಗಣಪತಿ ವಿಗ್ರಹವನ್ನು ಸ್ವಸ್ಥಾನಕ್ಕೆ ಮರಳಿಸ ಬೇಕೆಂಬ ಚಳವಳಿ ಪ್ರಾರಂಭವಾಯಿತು.

೧೯೨೮ರ ಜುಲೈ ೨೩ರಿಂದ ವಿದ್ಯಾರ್ಥಿಗಳು ಮುಷ್ಕರ ಪ್ರಾರಂಭಿಸಿದರು. ಅವರಿಗೆ ಬೆಂಬಲವಾಗಿ ಹಿರಿಯರೂ ಕಣಕ್ಕಿಳಿದರು. ಹಿಂದೊಮ್ಮೆ ಮೈಸೂರು ವಿಶ್ವವಿದ್ಯಾಲಯದ ಉಪಕುಲಪತಿಗಳಾಗಿದ್ದವರೂ, ಕನ್ನಡ ಸಾಹಿತ್ಯ ಪರಿಷತ್ತಿನ ಸ್ಥಾಪಕರಲ್ಲೊಬ್ಬರೂ ಆಗಿದ್ದ ಎಚ್.ವಿ. ನಂಜುಂಡಯ್ಯನವರ ಕಿರಿಯ ಮಗ ಎಚ್.ವಿ. ಸುಬ್ರಹ್ಮಣ್ಯಂ ಈ ಚಳವಳಿಗೆ ಮುಂದಾಳಾದರು. ಅವರ ಜೊತೆಗೆ ಬಳೇಪೇಟೆಯಲ್ಲಿ ಗುಲ್ಕನ್ ವ್ಯಾಪಾರ ಮಾಡುತ್ತಿದ್ದ ಜಮಖಂಡಿ ಭೀಮರಾವ್ ಮತ್ತು ಅಂದಿನ ನಾಗರೀಕರ ಮುಂದಾಳು ರಾಮ್‌ಲಾಲ್ ತಿವಾರಿ ಸೇರಿಕೊಂಡರು. ಈ ಮೂವರನ್ನು ಪೊಲೀಸರು ಬಂಧಿಸಿ ಸೆಂಟ್ರಲ್ ಜೈಲಿ ನಲ್ಲಿಟ್ಟಿದ್ದರು.

ವಿದ್ಯಾರ್ಥಿಗಳು ಹಾಗೂ ಜನರ ಚಳವಳಿಯ ಕಾವು ಬಲವಾಗಿ ವಿಗ್ರಹವನ್ನು ಅದರ ಸ್ವಸ್ಥಾನಕ್ಕೆ ಮರಳಿಸದೆ ಸರ್ಕಾರಕ್ಕೆ ಬೇರೆ ದಾರಿಯಿರಲಿಲ್ಲ. ಜುಲೈ ೨೯ರಂದು ಗಣಪತಿ

ವಿಗ್ರಹ ಅದರ ಸ್ವಸ್ಥಾನಕ್ಕೆ ಬಂದರೂ ವಿದ್ಯಾರ್ಥಿಗಳೂ, ಸಾರ್ವಜನಿಕರೂ ತಮ್ಮ ಮೂವರು ನಾಯಕರ ಬಿಡುಗಡೆಗಾಗಿ ಆಂದೋಲನ ಮುಂದುವರಿಸಿದರು. ದಿವಾನರ ನಿವಾಸವಾಗಿದ್ದ ಕಾರ್ಲ್‌ಟೌನ್ ಹೌಸ್, ಸೆಂಟ್ರಲ್ ಜೈಲು, ಪಬ್ಲಿಕ್ ಆಫೀಸ್ ಮುಂತಾದ ಸ್ಥಳಗಳಲ್ಲಿ ಸಹಸ್ರಾರು ಸಂಖ್ಯೆಯಲ್ಲಿ ಸೇರಿದ ಜನರು ಘೋಷಣೆಗಳನ್ನು ಕೂಗುತ್ತಾ ರೋಷಾವೇಶ ದಿಂದ ವರ್ತಿಸಲಾರಂಭಿಸಿದರು. ಸರ್ಕಾರದ ತಲೆ ಬಿಸಿಯಾಯಿತು. ಪೊಲೀಸ್ ಇನ್ಸ್‌ಪೆಕ್ಟರ್ ಜನರಲ್ ಎಸ್. ಹಿರಿಯಣ್ಣಯ್ಯ ಮತ್ತು ಜಿಲ್ಲಾ ಮ್ಯಾಜಿಸ್ಟ್ರೇಟ್ ತಾಜ್ ಪಿರಾನ್ ರಂಗಕ್ಕಿಳಿದರು.

ಕಾರ್ಲ್‌ಟನ್ ಹೌಸ್‌ನಿಂದ ದಿವಾನರು ತಮ್ಮ ಕಾರಿನಲ್ಲಿ ಹೋಗುವಾಗ ಅಲ್ಲಿ ನೆರೆದಿದ್ದ ವಿದ್ಯಾರ್ಥಿಗಳು ಕಲ್ಲುಗಳನ್ನು ಎಸೆದು ಕಾರಿನ ಕಿಟಕಿಯ ಗಾಜುಗಳನ್ನು ಒಡೆದರು. ಗುಂಪು ಪಬ್ಲಿಕ್ ಆಫೀಸ್ ಕಡೆ ಹೊರಟಾಗ ಅದನ್ನು ನಿಯಂತ್ರಿಸಲು ಹೆಬ್ಬಾಳದಲ್ಲಿದ್ದ ಮೈಸೂರು ಇಂಪೀರಿಯಲ್ ಲ್ಯಾನ್ಸರ್ಸ್‌ನಿಂದ ಕುದುರೆ ಸವಾರರನ್ನು ಕರೆಸಲಾಯಿತು. ಕುದುರೆಯೊಂದರ ಕಾಲಿಗೆ ಸಿಕ್ಕಿಕೊಂಡ ಒಬ್ಬ ಚಿಕ್ಕ ವಿದ್ಯಾರ್ಥಿ ನುಜ್ಜುಗುಜ್ಜಾಗಿ ಹೋಗಿ ಕೊನೆಗೆ ಅವನ ಒಂದು ಕಾಲನ್ನು ಕತ್ತರಿಸಿ ಹಾಕಬೇಕಾಯಿತು. ಪಬ್ಲಿಕ್ ಆಫೀಸನ್ನು ಕಾಯಲು ಕೂಡ ಅಶ್ವಾರೋಹಿ ದಳ ಬಂತು. ಇಷ್ಟರಲ್ಲಿ ನಗರದ ಗಣ್ಯರು ಕೆಲವರು ಮಧ್ಯೆ ಪ್ರವೇಶಿಸಿ ಬಂಧಿತ ನಾಯಕರ ಬಿಡುಗಡೆಯಾಯಿತು. ಇದರಿಂದ ಸಂತೋಷಗೊಂಡ ವಿದ್ಯಾರ್ಥಿಗಳು ಉತ್ಸಾಹದಿಂದ ನಾಯಕರನ್ನು ಭವ್ಯವಾದ ಮೆರವಣಿಗೆಯಲ್ಲಿ ಸುಲ್ತಾನ್‌ಪೇಟೆಯ ಶಾಲೆಗೆ ಕರೆದೊಯ್ದರು. ಅಲ್ಲಿ ಗಣಪತಿಗೆ ಪೂಜೆ ಮಾಡಿದ ನಂತರ ಪ್ರದರ್ಶನಕಾರರು ಚದುರಿದರು.

ಇದು ಹಿಂದೂಗಳ ವಿಜಯವೆಂದು ಭಾವಿಸಿದ ಕೆಲವರು ಮುಸಲ್ಮಾನರಲ್ಲಿ ಕೋಪಾಸೂಯೆಗಳು ಮೂಡಿದವು. ಅವರು ಗುಂಪುಗಳನ್ನು ಕಟ್ಟಿಕೊಂಡು ಕೈಗಳಲ್ಲಿ ಲಾಠಿ ಮುಂತಾದ ಆಯುಧಗಳನ್ನು ಹಿಡಿದು ರಸ್ತೆಗಿಳಿದರು. ಅಲ್ಲಲ್ಲಿ ಸಿಕ್ಕ ಹಿಂದುಗಳ ಮೇಲೆ ಮುಗಿಬಿದ್ದು ಥಳಿಸಿದರು. ಎಷ್ಟೋ ಜನ ತೀವ್ರವಾಗಿ ಗಾಯಗೊಂಡರು. ಎಲ್ಲಿಂದಲೋ ಗುಂಡುಗಳೂ ಹಾರಿದವು. ಜುಲೈ ೩೦ರ ರಾತ್ರಿ ಏಳೂವರೆಯಲ್ಲಿ ನಡೆದ ಈ ಗಲಭೆಯನ್ನೇ ನಿಟ್ಟೂರರು ಕಂಡಿದ್ದು.

ಈ ಸಂದರ್ಭದ ಇನ್ನೊಂದು ಪ್ರತ್ಯಕ್ಷದರ್ಶಿ ವರದಿಯನ್ನು ಸ್ವಾತಂತ್ರ್ಯಪೂರ್ವದ ಹಿರಿಯ ನಾಯಕರು, ಸ್ವಾತಂತ್ರ್ಯಾನಂತರ ರಾಜ್ಯ ಕಾಂಗ್ರೆಸ್ ಅಧ್ಯಕ್ಷರು, ನಿಜಲಿಂಗಪ್ಪ ಮತ್ತು ಜತ್ತಿಯವರ ಮಂತ್ರಿಮಂಡಲದಲ್ಲಿ ಮಂತ್ರಿಗಳೂ ಆಗಿದ್ದ ಜನಾನುರಾಗಿ ಆದರ್ಶ ಜೀವಿ ಹೆಚ್.ಕೆ. ವೀರಣ್ಣಗೌಡರು ತಮ್ಮ 'ಬದುಕು-ಮೆಲುಕು' ಎಂಬ ಆತ್ಮಕಥೆಯಲ್ಲಿ ಆ ದಿನದ ಚಿತ್ರವನ್ನು ನೀಡಿದ್ದಾರೆ. ಆಗ ಅವರು 'ಚಿತ್ರಗುಪ್ತ' ಪತ್ರಿಕಾ ಸಂಪಾದಕ

ರಾಗಿದ್ದರು. ಅವರು ಹೀಗೆ ಬರೆಯುತ್ತಾರೆ: "ನಿಜವೋ ಸುಳ್ಳೋ ಅಬ್ಬಾಸ್‌ಖಾನರೇ ಗಣಪತಿ ಗಲಭೆಗೆ ಕಾರಣರೆಂಬ ವಾರ್ತೆ ಹಬ್ಬಿತ್ತು. ಆ ರಾತ್ರಿ ಪೊಲೀಸರು ಗುಂಡು ಹಾರಿಸಿದ್ದರಿಂದ ಕೆಲವರು ಸತ್ತರೆಂದೂ, ಮುಸ್ಲಿಮರಲ್ಲಿ ಗೂಂಡಾಗಳಾಗಿದ್ದವರು ಕೆಲವರು ಹಿಂದುಗಳನ್ನು ಅಬ್ಬಾಸ್‌ಖಾನರ ಮನೆಯೊಳಕ್ಕೆ ಎಳೆದುಕೊಂಡು ಹೋಗಿ ಹತ್ಯೆ ಮಾಡಿದರೆಂದೂ, ಹಲ ಬಗೆಯ ವದಂತಿಗಳು ಕಾಳ್ಗಿಚ್ಚಿನಂತೆ ಊರಲ್ಲೆಲ್ಲ ಹಬ್ಬಿತ್ತು. ಜನತೆಯಲ್ಲಿ ಅಸಮಾಧಾನ, ಅಶಾಂತತೆ ತಾಂಡವವಾಡುತ್ತಿತ್ತು....

"ಮಾರನೆ ದಿನ ಸಾಯಂಕಾಲ ನಾಲ್ಕು ಗಂಟೆ ಸುಮಾರಿಗೆ ಚಿಕ್ಕಪೇಟೆ ಚೌಕದಲ್ಲಿ ಜನರು ಕಿಕ್ಕಿರಿದು ನೆರೆದಿದ್ದರು. ಆರ್ಕಾಟ್ ಶ್ರೀನಿವಾಸಾಚಾರ್ ಬೀದಿಯಲ್ಲಿದ್ದ ದೊಡ್ಡ ಪೋಸ್ಟ್ ಆಫೀಸ್‌ವರೆಗೂ ಜನರ ಗುಂಪು ಮುನ್ನುಗ್ಗಲು ತಳ್ಳಾಡುತ್ತಿತ್ತು. ಅವರೆದುರಿಗೆ ಹಳೆ ಸಂತೇಪೇಟೆವರೆಗೆ ಪೊಲೀಸರು ಗುಂಡಿನ ಮೇಲೆ ಗುಂಡು ಹಾರಿಸಲು ಸಿದ್ಧರಾಗಿ ನಿಂತಿದ್ದರು. "

"ನಾನು ಆರ್ಕಾಟ್ ಶ್ರೀನಿವಾಸಾಚಾರ್ ಬೀದಿಯಲ್ಲಿ ಫ್ರೀವ್ಸ್ ಕಂಪೆನಿಗೆ ಸೇರಿದ್ದ ದೊಡ್ಡ ಮನೆಯಲ್ಲಿ, ಗ್ರಾಮ ಸೇವಾ ಪ್ರೆಸ್ ಮತ್ತು ಚಿತ್ರಗುಪ್ತ ಪತ್ರಿಕೆ ಆಫೀಸುಗಳನ್ನು ನಡೆಸುತ್ತಾ ಮಹಡಿ ಮೇಲೆ ವಾಸಮಾಡುತ್ತಿದ್ದೆ. ಬೀದಿಯಲ್ಲಿ ಜನರ ಅಶಾಂತ ಗುಂಪು, ಪೊಲೀಸರ ಸನ್ನಾಹ ಇದೆಲ್ಲಾ ನಡೆಯುತ್ತಿದ್ದಾಗ ಪೊಲೀಸ್ ಇನ್ಸ್‌ಪೆಕ್ಟರ್ ಜನರಲ್ ಎಸ್. ಹಿರಣ್ಣಯ್ಯ ಮತ್ತು ಡಿಸ್ಟ್ರಿಕ್ಟ್ ಮ್ಯಾಜಿಸ್ಟ್ರೇಟ್ ತಾಜ್ ಪಿರಾನ್ ನನ್ನ ಆಫೀಸ್ ಬಳಿ ಬಂದು ನನ್ನ ಹೆಸರು ಹಿಡಿದು ಕೂಗಿ ಗೌಡರೇ, ದಯಮಾಡಿ ಹೊರಗೆ ಬನ್ನಿ. ಜನರನ್ನು ಶಾಂತಗೊಳಿಸಿ, ನಿಮ್ಮ ದೇಶಾಭಿಮಾನ ತೋರಿಸಿ' ಎಂದು ಹೇಳಿದರು. ನಾನು ಹೊರಗೆ ಬಂದೆ. ಜನರ ಗುಂಪಿದ್ದ ಕಡೆಗೆ ಹೋಗಿ, ಅವರಿಗೆ ಕೈ ಮುಗಿಯುತ್ತಾ 'ದಯಮಾಡಿ ಹಿಂದಕ್ಕೆ ಸರಿಯಿರಿ. ಗಲಭೆಗೆ ಅವಕಾಶ ಕೊಡಬೇಡಿ. ಅನಾಹುತವಾಗಬಾರದು' ಎಂದು ಬೇಡಿಕೊಳ್ಳುತ್ತಿದ್ದೆ. ನನ್ನನ್ನು ನೋಡಿ ಗುಂಪು ಸ್ವಲ್ಪ ಸ್ವಲ್ಪ ಚಿಕ್ಕಪೇಟೆ ಚೌಕದ ಕಡೆಗೆ ಹಿಂದೆಹಿಂದಕ್ಕೆ ಸರಿಯುತ್ತಿತ್ತು. ಗುಂಪಿನಲ್ಲಿದ್ದ ಕೆಲವರು ನನ್ನನ್ನು ಕುರಿತು, 'ನೀವೇಕೆ ಬಂದಿರಿ? ಈ ದಿನ (ಬಹುಶಃ ಮುಸಲ್ಮಾನರಿಗೆ) ಸರಿಯಾಗಿ ಮಾಡುತ್ತೇವೆ. ನೀವು ದಯಮಾಡಿ ಹೊರಟು ಹೋಗಿ' ಎಂದು ಹೇಳಲಾರಂಭಿಸಿದರು. ಆದರೂ ನಾನು ಗುಂಪಿನವರನ್ನು ಪ್ರಾರ್ಥಿಸಿಕೊಳ್ಳುತ್ತಾ ಹಿಂದೆಹಿಂದೆ ಸರಿಯುತ್ತಾ ಚಿಕ್ಕಪೇಟೆ ಚೌಕದವರೆಗೆ ಅವರನ್ನು ತಳ್ಳಿಕೊಂಡು ಹೋಗಿ, ಅವರು ಹಿಂದೆ ಹೋಗುವಂತೆ ಅವರನ್ನು ಒತ್ತಾಯ ಪಡಿಸುತ್ತಿದ್ದೆ.

ಆಗ ಜಿಲ್ಲಾ ಮ್ಯಾಜಿಸ್ಟ್ರೇಟರು ಇದ್ದಕ್ಕಿದ್ದಂತೆ ನನ್ನ ಸಮೀಪಕ್ಕೆ ಬಂದು 'ಈಗ

ಪೊಲೀಸರು ಗುಂಡು ಹಾರಿಸುತ್ತಾರೆ. ನಾವು ಯಾರ ಮುಖವನ್ನೂ ನೋಡುವುದಿಲ್ಲ. ತಂತಮ್ಮ ಪ್ರಾಣ ಉಳಿಸಿಕೊಳ್ಳಲು ಇದೇ ಕಡೇ ಅವಕಾಶ' ಎಂದು ಸಾರಿಬಿಟ್ಟರು.... ನಾನು ಚರಂಡಿ ಅಂಚಿನಲ್ಲೇ ನನ್ನ ಆಫೀಸ್ ಕಡೆಗೆ ಹಿಂದಿರುಗುತ್ತಿದ್ದೆ. ನಾನು ಹಳೆ ತರಗುಪೇಟೆ ಹತ್ತಿರ ಹೋದಾಗ ಪೊಲೀಸರ ಗುಂಡಿನ ಚಟಚಟ ಶಬ್ದ ಕೇಳಿದವು. ಕೆಲವೇ ನಿಮಿಷಗಳಲ್ಲಿ ಪೊಲೀಸರ ಬಂದೂಕು ಶಬ್ದ ನಿಂತುಹೋಯಿತು. ಹಿಂದಿರುಗಿ ನೋಡಿದೆ. ಪೊಲೀಸರು ಸೆಟ್ಟಿಕಲ್ಲಪ್ಪನವರ ಮನೆಯಿದ್ದ ಬೀದಿಯತ್ತ ಓಡುತ್ತಿದ್ದಾರೆ. ಗುಂಪು ಅವರನ್ನು ಬೆನ್ನಟ್ಟಿಸಿಕೊಂಡು ನುಗ್ಗುತ್ತಿದೆ. ನನಗೆ ಆಶ್ಚರ್ಯವಾಯಿತು. ಏನೆಂದು ವಿಚಾರಿಸಲು ಪೊಲೀಸರು ಆರು ಸಾರಿ ಗುಂಡು ಹಾರಿಸುವಷ್ಟು ಮಾತ್ರ ಅವರ ಬಂದೂಕುಗಳಲ್ಲಿ ಮದ್ದಿತ್ತೆಂದೂ, ಮದ್ದು ತೀರಿಹೋದ ಕಾರಣ ಅವರು ಹಿಮ್ಮೆಟ್ಟುತ್ತಿದ್ದಾರೆಂದೂ, ಈ ಗುಟ್ಟು ತಿಳಿದ ಗುಂಪು ಅವರ ಮೇಲೆ ಬೀಳಲು ಹಿಂಬಾಲಿಸುತ್ತಿದ್ದಾರೆಂದು ತಿಳಿಯಿತು.

ಪುನಃ ನಾನು ಪೊಲೀಸಿನವರಿಗೂ ಗುಂಪಿಗೂ ಹೊಡೆದಾಟ ನಡೆಯುತ್ತಿದ್ದ ಸ್ಥಳಕ್ಕೆ ಹೋದೆ. ಅಷ್ಟರಲ್ಲಿ ಗುಂಪಿನಲ್ಲಿದ್ದವರ ಪೈಕಿ ಒಬ್ಬನು ಅಲ್ಲಿದ್ದ ಸಿಟಿ ಮ್ಯಾಜಿಸ್ಟ್ರೇಟ್ ನಾರಾಯಣಸ್ವಾಮಿ ನಾಯ್ಡು ಅವರ ಕೈಲಿದ್ದ ಬೆತ್ತವನ್ನು ಕಿತ್ತುಗೊಂಡು ಅವರ ತಲೆ ಮೇಲೆ ಬೆತ್ತದಿಂದ ಹೊಡೆಯುತ್ತಿದ್ದುದು ನನ್ನ ಕಣ್ಣಿಗೆ ಬಿತ್ತು.... ಮ್ಯಾಜಿಸ್ಟ್ರೇಟರ ಪೇಟ ಹಾರಿಹೋಗಿತ್ತು. ಅವರ ತಲೆಯ ಒಂದು ಪಕ್ಕದಿಂದ ರಕ್ತ ಸೋರುತ್ತಿತ್ತು. ಪೊಲೀಸರು ನೋಡುತ್ತಾ ನಿಂತಿದ್ದರು. ಮ್ಯಾಜಿಸ್ಟ್ರೇಟರ ಬುರುಡೆಯಿಂದ ರಕ್ತ ಸೋರಿ ಅವರ ಕತ್ತು, ಹೆಗಲುಗಳ ಮೇಲೆ ಹರಿದು ಅವರ ಬಟ್ಟೆಗಳೆಲ್ಲ ರಕ್ತಮಯವಾಗಿದ್ದವು. ಈ ದೃಶ್ಯ ನೋಡಿದ ಗುಂಪಿನವರಿಗೆ ಮನಸ್ಸು ನೊಂದಿರಬಹುದು. ಏಕೆಂದರೆ ನಾರಾಯಣಸ್ವಾಮಿ ನಾಯ್ಡು ಒಳ್ಳೆಯ ದಯಾವಂತರಾದ ಅಧಿಕಾರಿಗಳೆನಿಸಿಕೊಂಡಿದ್ದರು.... ನಾನು ಮ್ಯಾಜಿಸ್ಟ್ರೇಟ್‌ರ ಗಾಯಗಳನ್ನು ಒದ್ದೆ ಬಟ್ಟೆಯಿಂದ ಒರೆಸಿ, ಮಡಿ ಬಟ್ಟೆಗಳಿಂದ ಗಾಯಗಳಿಗೆ ಸುತ್ತಿ ಅವರನ್ನು ಅದೇ ವ್ಯಾನಿನಲ್ಲಿ ಆಸ್ಪತ್ರೆಗೆ ಕಳುಹಿಸಿಕೊಟ್ಟೆ. ಸ್ವಲ್ಪ ಹೊತ್ತಿನಲ್ಲೇ ಗುಂಪು ಚದುರಿತು. ಜಿಲ್ಲಾಧಿಕಾರಿಯಾಗಲೀ, ಪೊಲೀಸು ಇನ್ಸ್‌ಪೆಕ್ಟರ್ ಜನರಲ್ಲಾಗಲೀ ಅಲ್ಲಿರಲಿಲ್ಲ. ಸಿಟಿ ಮ್ಯಾಜಿಸ್ಟ್ರೇಟರಿಗೆ ಏಟು ಬೀಳುತ್ತಿದ್ದುದನ್ನು ನೋಡಿದ ಒಡನೆ ಅವರು ಆ ಸ್ಥಳದಿಂದ ಕಾಲು ತೆಗೆದರೆಂದು ಕಾಣುತ್ತದೆ... ಅಂತೂ ನಾನೂ ಶ್ರೀ ಪಿ.ಆರ್. ರಾಮಯ್ಯನವರು, ತೀ.ತಾ. ಶರ್ಮ ಕಲ್ಲೆಸೆಯುತ್ತಿದ್ದೇವೆಂದು ತೊಂಬತ್ತು ಮಂದಿ ಮೇಲೆ ಒಂದು ಕೇಸನ್ನೂ, ನನ್ನನ್ನೂ ಸೇರಿಸಿ ಇನ್ನೂ ಸುಮಾರು ಹದಿನೈದು ಮಂದಿ ಮೇಲೆ ಇನ್ನೊಂದು ಕೇಸನ್ನು ಪೊಲೀಸರು ಹೂಡಿದರು. ಒಂದು ವರ್ಷದ ಮೇಲೆ ಸರ್ಕಾರದವರು ಈ ಕೇಸುಗಳನ್ನು ಹಿಂದೆಗೆದುಕೊಂಡರು.

ಈ ಗಲಭೆಯ ಕಾರಣ ಬೆಂಗಳೂರು ನಾಗರಿಕರಲ್ಲಿ ಮೂರು ಗುಂಪುಗಳಾದವು. ಹಿಂದು ಮತ್ತು ಮುಸ್ಲಿಂರ ಎರಡು ಗುಂಪುಗಳು ಇದ್ದೇ ಇದ್ದವು. ಆನಂತರ ಮತ್ತೊಂದು ಗುಂಪುಗೊಂಡಿತು. ಹಿಂದುಗಳಲ್ಲಿ ಬ್ರಾಹ್ಮಣ, ಬ್ರಾಹ್ಮಣೇತರ ಎಂಬ ಭಾವನೆಯೂ ಬೆಳೆಯಿತು. ಹಿಂದುಗಳಲ್ಲಿ ಒಂದು ಸರ್ಕಾರದ ಪರ ಅಂದರೆ ಮಿರ್ಜಾರವರ ಪರ. ಇನ್ನೊಂದು ಅವರ ವಿರುದ್ಧ ಎಂದಾಯಿತು. ಮೊದಲ ಗುಂಪಿನಲ್ಲಿ ನೀಲಗಿರಿ ಸಂಜೀವಯ್ಯ, ಎಚ್.ಸಿ. ದಾಸಪ್ಪ, ಕೆ.ಎಚ್. ರಾಮಯ್ಯ ಮುಂತಾದ ಧುರೀಣರಿದ್ದರೆ, ಎರಡನೆ ಗುಂಪಿನಲ್ಲಿ ನಿಟ್ಟೂರು ಶ್ರೀನಿವಾಸರಾಯರು, ತಿರುಮಲೆ ತಾತಾಚಾರ್ಯ ಶರ್ಮ, ವೀರಕೇಸರಿ ಸೀತಾರಾಮಶಾಸ್ತ್ರಿ, ಪಾಮಡಿ ಸುಬ್ಬರಾಯಶೆಟ್ಟಿ, ಸಂಪಿಗೆ ವೆಂಕಟಪತಯ್ಯ ಮುಂತಾದವರಿದ್ದರು.

ಈ ಘಟನೆಯ ಹಿನ್ನೆಲೆಯಲ್ಲಿ ಮಹಾರಾಜರ ವರ್ತನೆಯನ್ನು ಟೀಕಿಸುತ್ತಾ ತಿ.ತಾ. ಶರ್ಮರು ವಿಶ್ವಕರ್ನಾಟಕದಲ್ಲಿ ದಿಟ್ಟವಾಗಿ ಹೀಗೆ ಬರೆದರು : "ಶ್ರೀಮನ್ಮಹಾರಾಜರವರು ತಮ್ಮ ಬಾಲ್ಯ ಸ್ನೇಹಿತರೂ, ಅಂತರಂಗ ಸ್ನೇಹಿತರೂ ಆಗಿದ್ದವರನ್ನು ಪ್ರಧಾನರಾಗಿ ನೇಮಿಸಿದಂದಿನಿಂದ ಪ್ರಭು ಪ್ರಧಾನರಿಬ್ಬರ ಮಧ್ಯೆ ಪ್ರಜಾಹಿತಕರವಾದ ಮೈಸೂರು ರಾಜ್ಯಾಂಗದ ವಿಶೇಷ ಗುಣವೊಂದಕ್ಕೆ ಲೋಪ ಬಂತು. ಎರಡು ಪ್ರಕೃತಿಗಳೂ ಏಕರೂಪತೆಯನ್ನು ಹೊಂದಿದವು. ಮೂರನೆಯ ಪ್ರಕೃತಿ ಸಹಜವಾಗಿ ತನ್ನ ಕರ್ತವ್ಯವನ್ನು ಮರೆತು ಪ್ರಧಾನರ ತಾಳಕ್ಕೆ ಸರಿಯಾಗಿ ಹೆಜ್ಜೆಯನ್ನು ಇಡಲಾರಂಭಿಸಿತು. ಪ್ರಜಾವಾತ್ಸಲ್ಯದಿಂದ ತುಂಬ ಕರ್ತವ್ಯ ಪಥದಲ್ಲಿ ಕಾಲಿಟ್ಟ ನಿರಂಕುಶ ಪ್ರಭುತ್ವವು ಇಂದು ಪ್ರಧಾನರು ಚಲಿಸಿದಂತೆ ಚಲಿಸುವ ನಿರಂಕುಶಾಧಿಕಾರಿಯಾಗಿದೆ.

"ಪ್ರಜಾತಂತ್ರವೇ ಪ್ರಬಲರಾಗುತ್ತಿರುವ ಈ ಕಾಲದಲ್ಲಿ ಆಡಳಿತವೆಲ್ಲವೂ ಒಬ್ಬ ವ್ಯಕ್ತಿಯನ್ನೇ (ಆ ವ್ಯಕ್ತಿಯು ಎಷ್ಟೇ ಪ್ರಭಾವಶಾಲಿಯೇ ಆಗಿರಲಿ) ಆಶ್ರಯಿಸುವುದು ಬಹು ಅಪಾಯಕರವಾದದ್ದು... ನಾಡಿನಲ್ಲಿ ಕಾಣಬರುವ ಇಂದಿನ ಅಶಾಂತಿಗೆ, ಅತೃಪ್ತಿಗೆ ಇದೇ ಮೂಲ ಕಾರಣ." (೩೦-೧೨-೧೯೨೮)

ಒಟ್ಟಾರೆ ಸರ್ಕಾರಿ ಪರ ಶಕ್ತಿಗಳೆಲ್ಲ ಗಣಪತಿ ಗಲಾಟೆಯ ಎಲ್ಲ ಜವಾಬ್ದಾರಿಯನ್ನೂ ಹಿಂದುಗಳ ಮೇಲೆ ಹೊರಿಸುತ್ತಾ ಪ್ರಚಾರ ಮಾಡಲಾರಂಭಿಸಿದುವು. ಇದು ಮಿರ್ಜಾ ಸಾಹೇಬರ ಪ್ರೇರಣೆಯಿಂದಲೇ ಎಂದು ಭಾವಿಸಿದ ಪಾಮಡಿ ಸುಬ್ಬರಾಯ ಶೆಟ್ಟರು ಮಹಾರಾಜರನ್ನು ಮುಖತಃ ಕಂಡು ದಿವಾನರ ವರ್ತನೆ ಹಾಗೂ ಅಬ್ಬಾಸಖಾನರ ಪಾತ್ರದ ಬಗ್ಗೆ ದೂರು ಸಲ್ಲಿಸಿದಾಗ ಶಾಂತ ಸ್ವಭಾವದ ನಾಲ್ವಡಿಯವರು ಒಮ್ಮೆಲೆ ಕುಪಿತರಾಗಿ

ಮುಖ ಕೆಂಪಗೆ ಮಾಡಿಕೊಂಡರಂತೆ. ಯಾವ ಕಾರಣಕ್ಕೂ ಮಿರ್ಜಾರನ್ನು ಬಿಟ್ಟುಕೊಡಲಿಲ್ಲ. ಪಾಮಡಿಯವರು ಪೆಚ್ಚು ಮೋರೆ ಹಾಕಿಕೊಂಡು ಹಿಂದಿರುಗಬೇಕಾಯಿತು.

ವೀರಕೇಸರಿ ಸೀತಾರಾಮಶಾಸ್ತ್ರಿಗಳ 'ವೀರಕೇಸರಿ', ತಿ.ತಾ. ಶರ್ಮರ 'ವಿಶ್ವ ಕರ್ನಾಟಕ', ಮಕ್ಕಳ ಪುಸ್ತಕದ ರೂವಾರಿ ಅಶ್ವತ್ಥನಾರಾಯಣರಾಯರ 'ನವಜೀವನ' ವೀರಣ್ಣಗೌಡರ 'ಚಿತ್ರಗುಪ್ತ' ಜನರಿಗೆ ಸತ್ಯಾಂಶಗಳನ್ನು ತಿಳಿಸಿ ಜಾಗೃತಗೊಳಿಸುವುದರಲ್ಲಿ ಅಪೂರ್ವ ಪಾತ್ರ ವಹಿಸಿದವು. ಪಿ.ಆರ್. ರಾಮಯ್ಯನವರ 'ತಾಯಿನಾಡು' ಸಹ ಸ್ವಲ್ಪ ಮಟ್ಟಿಗೆ ಪಾತ್ರ ವಹಿಸಿತಾದರೂ ಮಿಕ್ಕ ಪತ್ರಿಕೆಗಳಷ್ಟಲ್ಲ.

ವೀರಕೇಸರಿ ಸೀತಾರಾಮಶಾಸ್ತ್ರಿ ಮತ್ತು ಅಶ್ವತ್ಥನಾರಾಯಣರಾಯರ ಮೇಲೆ ಅವರ ಬರಹಗಳಿಂದಾಗಿ ಸರ್ಕಾರ ರಾಜದ್ರೋಹದ ಮೊಕದ್ದಮೆ ಹೂಡಿತು. ಭಾರತದಲ್ಲಿ ಎಲ್ಲೆಡೆ ರಾಜದ್ರೋಹಾತ್ಮಕ ಮೊಕದ್ದಮೆಗಳು ಎಷ್ಟೇ ನಡೆದಿದ್ದರೂ ಅದು ಜಾರಿಗೆ ಬಂದ ೧೮೮೧ ರಿಂದ ಮೈಸೂರು ಸಂಸ್ಥಾನದಲ್ಲಿ ಇದೇ ಮೊಟ್ಟಮೊದಲ 'ರಾಜದ್ರೋಹ'ದ ಮೊಕದ್ದಮೆ ಯೆಂಬ ಕೀರ್ತಿಗೆ ಪಾತ್ರವಾಯಿತು. ಅವರಿಬ್ಬರ ವಿಚಾರಣೆ ನಡೆಸಿದ ಜಿಲ್ಲಾ ಮ್ಯಾಜಿಸ್ಟ್ರೇಟ್ ತಾಜ್ ಪಿರಾನ್‌ರು ೧೨೪-A ವಿಧಿಗನುಸಾರವಾಗಿ ತಲಾ ಆರು ತಿಂಗಳ ಸಾದಾ ಕಾರಾಗೃಹ ವಾಸ ಹಾಗೂ ೨೦೦ ರೂ.ಗಳ ಜುಲ್ಮಾನೆ, ಅದು ತಪ್ಪಿದರೆ ಮತ್ತೆ ೩ ತಿಂಗಳ ಕಾರಾಗೃಹ ವಾಸದ ಶಿಕ್ಷೆ ವಿಧಿಸಿದರು. ಇದು ತಿಳಿದ ಕೂಡಲೇ ತಿ.ತಾ. ಶರ್ಮರು ವಿಶ್ವಕರ್ನಾಟಕದಲ್ಲಿ ಸ್ಫೂರ್ತಿಪ್ರದವಾದ ಅಭಿನಂದನಾ ಲೇಖನ ಬರೆದರು: "ಶಾಸ್ತ್ರೀಗಳೂ, ರಾಯರೂ ಯಾರ ತಲೆಯನ್ನೂ ಹೊಡೆಯಲಿಲ್ಲ. ಯಾರ ಮನೆಯನ್ನೂ ದೋಚಲಿಲ್ಲ. ಮತ್ತೆ ಯಾವ ತರದ ಅನೀತಿ ಕೃತ್ಯವನ್ನು ಮಾಡಲಿಲ್ಲ.

'ಈ ಸರ್ಕಾರ ಬುಡಮುಟ್ಟ ಮುರಿದು ಬೀಳಬೇಕು'

'ಮಿ|| ಮಿರ್ಜಾರವರ ದಿವಾನ್‌ಗಿರಿಯು ಕೊನೆ ಮುಟ್ಟಬೇಕು'

'ಜವಾಬ್ದಾರಿ ಸರ್ಕಾರವು ಸ್ಥಾಪಿಸಲ್ಪಡಬೇಕು'

- ಮುಂತಾಗಿ ಹೇಳಿದರು, ಬರೆದರು. ಒಂದು ವರ್ಷದಿಂದ ಮೈಸೂರಿನಲ್ಲಾದ ಪರಿವರ್ತನದ ಫಲವಾಗಿ ಈ ಬಗೆಯ ಮಾತುಗಳು ಸಾಧಾರಣವಾಗಿ ಎಲ್ಲರ ಬಾಯಲ್ಲೂ ಹೊರಡುತ್ತಿವೆ. ಶಾಸನಸಭೆಗಳಲ್ಲೂ ಕೇಳಿಬರುತ್ತಿದೆ. ಇದೊಂದು ಅಪರಾಧವಾಗಿ ಎಣಿಸಿ ಅವರನ್ನು ಸರ್ಕಾರದವರು ಶಿಕ್ಷೆಗೆ ಗುರಿ ಮಾಡಿದರು. ಮೈಸೂರಿನಲ್ಲಿ ಪ್ರಜಾಕೋಟಿಯ ಸದಾಶಯ ಸಾಧನೆಯ ಪ್ರಯತ್ನದಲ್ಲಿ ಸೆರೆಮನೆಗೆ ಹೋದವರಲ್ಲಿ ನಮ್ಮ ಬಂಧುಗಳಿಬ್ಬರೂ ಮೊದಲಿಗರು. ಅವರನ್ನು ನಾವು ತ್ರಿಕರಣಪೂರ್ವಕವಾಗಿ ಅಭಿನಂದಿಸುತ್ತೇವೆ. ೧೨೪-A

ವಿಧಿಯಂತೆ ಶಿಕ್ಷೆಗೆ ಗುರಿಯಾಗುವುದೇ ಒಂದು ಯೋಗ. ಲೋಕಮಾನ್ಯ ಬಾಲಗಂಗಾಧರ ತಿಲಕರೇ ಮೊದಲಾದವರು ಈ ವಿಧಿಗನುಸಾರವಾಗಿಯೇ ಸೆರೆಮನೆಗೆ ಹೋದುದು. ಗಾಂಧಿಯವರಿಗೆ ಈ ಶಿಕ್ಷೆ ವಿಧಿಸಿದಾಗ ಅವರು 'ಭರತ ಖಂಡದ ದೇಶಭಕ್ತಾಗ್ರೇಸರನೇಕರು ಈ ವಿಧಿಯಂತೆ ಶಿಕ್ಷಿಸಲ್ಪಟ್ಟಿದ್ದಾರೆ. ಈ ವಿಧಿಯಂತೆ ನಾನೂ ಶಿಕ್ಷಿಸಲ್ಪಟ್ಟಿರುವೆನಲ್ಲಾ ಎಂದು ಹಿಗ್ಗುತ್ತೇನೆ' ಅಂದರು. ಇಂತಹ ಸಾಂಗತ್ಯ ಪಡೆದ ನಮ್ಮ ಸಂಪಾದಕ ಮಿತ್ರರಿಬ್ಬರೂ ಅಭಿನಂದನಾರ್ಹರಲ್ಲವೇ!" (೧೧-೮-೧೯೨೮)

ಗಣಪತಿ ಗಲಾಟೆಯ ವರದಿ ಮಾಡಲು ಅನೇಕ ಸ್ಥಳಗಳಿಂದ ವರದಿಗಾರರು ಬಂದಿದ್ದರು. ಮಿರ್ಜಾರವರು ಒಳ್ಳೆಯವರು. ಆದರೆ ರಾಜಕಾರಣದಲ್ಲಿ ಚತುರರು. ಯಾವ ದಾಳ ಹೇಗೆ ಹಾಕಬೇಕೆಂದು ಬಲ್ಲವರು. 'ದಿ ಹಿಂದೂ' ಪತ್ರಿಕೆಯ ವರದಿಗಾರ ಆಂಧ್ರದ ಚಲುವಯ್ಯ ಎಂಬುವರು. ಮಿರ್ಜಾ ಸಾಹೇಬರು ಅವರನ್ನು 'ಒಲಿಸಿ'ಕೊಂಡು, ತಮ್ಮಲ್ಲೇ ಆಶ್ರಯ ನೀಡಿ ತಮಗನುಕೂಲಕರವಾಗಿ ಸುದ್ದಿಯನ್ನು ಕಳಿಸುವಂತೆ ಮಾಡುವುದರಲ್ಲಿ ಯಶಸ್ವಿಯಾಗಿದ್ದರು. ಅದೇ ಮದ್ರಾಸಿನಿಂದ ಟಂಗಟೂರಿ ಪ್ರಕಾಶಕ 'ಸ್ವರಾಜ್ಯ'ದ ವರದಿಗಾರರಾಗಿ ಭಾಸ್ಕರನ್ ಎಂಬುವರು ಬಂದಿದ್ದರು. ಅವರನ್ನು ಕರೆ ಕಳಿಸಿದವರು ನಿಟ್ಟೂರರೇ. ಅವರ ಮೇಲೆ ಮಿರ್ಜಾ ಸಾಹೇಬರ ಮೋಡಿ ಪ್ರಭಾವ ಬೀರಲಿಲ್ಲ. ಅವರು ಸತ್ಯಾಂಶಗಳಿಂದ ಕೂಡಿದ ವರದಿಗಳನ್ನು ಕಳಿಸುತ್ತಿದ್ದರು. ಪ್ರತಿ ಸಂಜೆ ಈ ಪತ್ರಕರ್ತರೆಲ್ಲ ನಿಟ್ಟೂರರ ಚಿಕ್ಕಪೇಟೆ ಕಛೇರಿಯಲ್ಲಿ ಸೇರಿ ಅವರೊಂದಿಗೆ ಚರ್ಚಿಸಿ ವರದಿ ಸಿದ್ಧ ಮಾಡುತ್ತಿದ್ದರು. ಇದರಿಂದ ಬೆಂಗಳೂರು ಜನತೆ 'ಸ್ವರಾಜ್ಯ'ವನ್ನು ಕೊಳ್ಳುವುದರಲ್ಲಿ ಉತ್ಸಾಹ ತೋರಿದರು. ೨-೩ ಸಾವಿರ ಪ್ರಸಾರ ಸಂಖ್ಯೆಯನ್ನು ಮುಟ್ಟಿತು. ಬೆಂಗಳೂರಿನಲ್ಲಿ ಆ ಕಾಲದಲ್ಲಿ ಅದು ಒಂದು ದಾಖಲೆ. ಅಂತೆಯೇ ವಿಶ್ವಕರ್ನಾಟಕ, ನವಜೀವನ, ಚಿತ್ರಗುಪ್ತ, ವೀರಕೇಸರಿ ಬಿಸಿ ದೋಸೆಗಳಂತೆ ಮಾರಾಟವಾಗಿ ದಾಖಲೆ ಸ್ಥಾಪಿಸಿದವು.

ಈ ಚಳವಳಿಯ ಸುದ್ದಿಗಳನ್ನು ಪ್ರಕಟಿಸಲು ಜಮುಖಂಡಿ ಭೀಮರಾಯರು ಚಿಕ್ಕಪೇಟೆಯ ತಮ್ಮ ಅಂಗಡಿ (ಮತ್ತು ನಿವಾಸ) ಮುಂದೆ ಕರಿ ಹಲಗೆಯನ್ನಿರಿಸಿ ಅದರಲ್ಲಿ ಸುದ್ದಿ ಬರೆಸುತ್ತಿದ್ದರು. ಅದನ್ನು ಬರೆಯುತ್ತಿದ್ದವರು ವಕೀಲರಾದ ಡಿ. ಶಾಮರಾಯರು ಮತ್ತು ಅಪ್ಪುರಾಯರು. ಇವರಿಬ್ಬರು ಆ ದಿನಗಳಲ್ಲೆ ಅಬ್ಬಾಸ್‌ಖಾನ್‌ರೊಂದಿಗೆ ಮಹಾರಾಜರ ಜೊತೆ ಸಹಭೋಜನ ಮಾಡುತ್ತಿದ್ದುದುಂಟು!

ಈ ಗಲಭೆಯ ಹಿಂದಿನ ಸತ್ಯಾಂಶಗಳನ್ನು ಬಹಿರಂಗಗೊಳಿಸಲು ವಿಚಾರಣೆ ನಡೆಸ ಬೇಕೆಂದು ಜನರ ಒತ್ತಡ ಹೆಚ್ಚಾದಾಗ ಒಂದು ವಿಚಾರಣಾ ಸಮಿತಿಯನ್ನು ನೇಮಿಸಲು ತೀರ್ಮಾನಿಸಿದ ಮಿರ್ಜಾ ಸಾಹೇಬರು ಅದರ ಅಧ್ಯಕ್ಷತೆಯನ್ನು ವಹಿಸಬೇಕೆಂದು

ಮೋಕ್ಷಗೊಂಡಂ ವಿಶ್ವೇಶ್ವರಯ್ಯನವರನ್ನು ಕೇಳಿದರು. ಆರಂಭದಲ್ಲಿ ಒಲ್ಲೆನೆಂದ ವಿಶ್ವೇಶ್ವರಯ್ಯನವರು ಆನಂತರ ಒಪ್ಪಿಗೆ ಸೂಚಿಸಿದರು. ೧೯೨೮ರ ಆಗಸ್ಟ್ ೨೮ರಂದು ವಿಶ್ವೇಶ್ವರಯ್ಯ ಸಮಿತಿ ನೇಮಕವಾಯಿತು. ಅದರಲ್ಲಿ ನ್ಯಾಯಾಧೀಶ ಡಿ.ಕೆ. ರಾಮರಾವ್, ಕೆ.ಪಿ. ಪುಟ್ಟಣ್ಣ ಶೆಟ್ಟಿ, ಶಾಸನಸಭಾ ಸದಸ್ಯ ಎನ್.ಜಿ. ಬಸವಪ್ಪ, ಮುಸ್ಲಿಂರ ನಾಯಕ ಗುಲಾಮ್ ಅಹಮದ್ ಕಲಾಮಿ, ಶಾಸನಸಭಾ ಸದಸ್ಯ ರಾಲ್ಫ್ ನೆಯ್‌ರಿದ್ದರು. ಅದರ ಕಾರ್ಯದಶಿ ಸಿ.ಇ. ನಿರೋನ್ಹಾ.

ಬೆಂಗಳೂರು ಮಿಥಿಕ್ ಸೊಸೈಟಿಯ ಡ್ಯಾಲಿ ಮೆಮೋರಿಯಲ್ ಹಾಲ್‌ನಲ್ಲಿ ೩೦ ಬಾರಿ ಸಭೆ ಸೇರಿದ ಈ ಸಮಿತಿ ಒಟ್ಟು ೧೨೫ ಸಾಕ್ಷಿಗಳಿಂದ ಮಾಹಿತಿ ಸಂಗ್ರಹಿಸಿತು. ವಿಚಾರಣಾವಧಿಯಲ್ಲಿ ವಾತಾವರಣದಲ್ಲಿ ಉದ್ರಿಕ್ತತೆ ತುಂಬಿತ್ತು. ವಿಶ್ವೇಶ್ವರಯ್ಯನವರು ತಾಳ್ಮೆ, ಜಾಣ್ಮೆ, ಚಾಕಚಕ್ಯತೆಗಳಿಂದ ಅದನ್ನು ನಿಭಾಯಿಸಿದರು.

ಗಲಾಟೆ ಪ್ರಾರಂಭವಾದಂದಿನಿಂದ ಅದನ್ನು ತೀಕ್ಷ್ಣವಾಗಿ ಗಮನಿಸುತ್ತಿದ್ದವರು ನಿಟ್ಟೂರರು. ಹಂತಹಂತದಲ್ಲೂ ನ್ಯಾಯಪರವಾಗಿ ನಿಂತವರು. ವಿಚಾರಣಾ ಸಮಿತಿಯ ಮುಂದೆ ಬೆಂಗಳೂರು ನಾಗರಿಕರ ಪರವಾಗಿ ವಾದ ಮಂಡಿಸಿದವರು ಅವರೇ. ಅವರು ನೀಡುತ್ತಿದ್ದ ಮಾಹಿತಿ, ವಿಚಾರಗಳನ್ನು ಮಂಡಿಸುವ ರೀತಿ ವಿಚಾರಣಾ ಸಮಿತಿಯ ಎಲ್ಲ ಸದಸ್ಯರಿಗೂ ತುಂಬಾ ಮೆಚ್ಚುಗೆಯಾಯಿತು.

ಮಿರ್ಜಾ ಇಸ್ಮಾಯಿಲ್‌ರನ್ನು ದಿವಾನ್ ಪದವಿಯಿಂದ ಕೆಳಗಿಳಿಸಲು ಮತ್ತು ರಾಜ್ಯಾಂಗವನ್ನು ಬುಡಮೇಲು ಮಾಡಲು ಹಿಂದೂಗಳ ಪಿತೂರಿಯಿದೆಯೆಂದು ಎಲ್ಲೆಡೆ ಒಂದು ವಾದ ಹಬ್ಬಿತ್ತು. ಆದರೆ ಇದು ತಪ್ಪೆಂದು ವಾದಿಸಿದ ನಿಟ್ಟೂರರು ಅಲ್ಲಿಯವರೆಗೂ ತಮ್ಮ ಜವಾಬ್ದಾರಿ, ಹಕ್ಕು ಹಾಗೂ ಪೌರಪ್ರಜ್ಞೆಯ ಬಗ್ಗೆ ನಿದ್ರಾವಶರಾಗಿದ್ದ ಬೆಂಗಳೂರು ನಾಗರಿಕರು ಎಚ್ಚೆತ್ತು ತಮ್ಮ ಪ್ರತಿಭಟನೆಯನ್ನು ವ್ಯಕ್ತಪಡಿಸಿದ ಒಂದು ಕ್ರಾಂತಿಕಾರಿ ಘಟನೆ ಅದೆಂದು ಬಣ್ಣಿಸಿದರು. ವಿಚಾರಣಾ ನಂತರ ಮುಸ್ಲಿಂರ ಗೂಂಡಾವರ್ತನೆಯನ್ನು ಸಮರ್ಥಿಸಿಕೊಳ್ಳಲು ಆಸಕ್ತರು ಹೂಡಿದ ಕುಯುಕ್ತಿ ಇದೆಂದು ಸ್ಥಿರಪಟ್ಟಿತು. ಜೊತೆಗೆ ಆ ಸಮಯದಲ್ಲಿ ಪೊಲೀಸ್ ಅಧಿಕಾರಿಗಳು ಮ್ಯಾಜಿಸ್ಟ್ರೇಟರು ಸಮಯಕ್ಕೆ ತಕ್ಕಂತೆ ಸೂಕ್ತ ಕ್ರಮ ಕೈಗೊಳ್ಳಲಿಲ್ಲವೆಂದೂ, ಇಡೀ ಪೊಲೀಸ್ ಪಡೆಗೆ ಪಾರ್ಶ್ವವಾಯು ಬಡಿದಂತಾಗಿತ್ತೆಂದೂ ವರದಿ ತಿಳಿಸಿತ್ತು. ಇಂತಹ ನಿಷ್ಕ್ರಿಯ, ನಿರಾಸಕ್ತ ಅಧಿಕಾರಿಗಳ ಮೇಲೆ ಸರ್ಕಾರ ಯಾವ ಕ್ರಮವೂ ಕೈಗೊಳ್ಳಲಿಲ್ಲ ಮತ್ತು ವಿವರವನ್ನೂ ಕೇಳಲಿಲ್ಲ. ಇದು ಸರಿಯಲ್ಲ ಎಂಬ ಟೀಕೆಯನ್ನು ವಿಚಾರಣಾ ಸಮಿತಿ ಸರ್ಕಾರದ ಮೇಲೂ ಮಾಡಿತು 'ಈ ರಾಷ್ಟ್ರದ ಪ್ರಜೆಗಳಲ್ಲಿ ಮತ, ಭಾಷೆ, ಆಚಾರ, ವಿಚಾರ, ಸಂಸ್ಕಾರ ಹಾಗೂ ಜೀವನ ಶೈಲಿಯಲ್ಲಿ

ವೈರುಧ್ಯಗಳು ಮೊದಲಿನಿಂದಲೂ ಇರುವಂತಹುವೇ. ಇದನ್ನು ನಿವಾರಿಸಿ ಜನರಲ್ಲಿ ಐಕ್ಯತೆ-ಸಾಮರಸ್ಯತೆಗಳನ್ನು ಮೂಡಿಸಲು ಪ್ರಯತ್ನಗಳಾವುವೂ ನಡೆದಿಲ್ಲ. ಇವು ಸಮಾಜದಲ್ಲಿ ಶಾಶ್ವತವಾಗಿರುವ ಸಂಗತಿಗಳೇ ಎಂದು ಒಪ್ಪಿಕೊಂಡಂತಾಗಿದೆ. ಸಮಾಜದ ಈ ಎರಡೂ ಗುಂಪುಗಳು ದೇಶಪ್ರೇಮ ಹಾಗೂ ಸಾರ್ವಜನಿಕ ಹಿತಾಸಕ್ತಿಗಳಿಂದ ಪ್ರೇರಿತವಾಗಿ ಸ್ವಯಂ ಸ್ಫೂರ್ತಿಯಿಂದ ಸತತವಾಗಿ ಪ್ರಯತ್ನಶೀಲರಾಗುವುದರಿಂದ ಮಾತ್ರ ಈ ಭೇದಭಾವವನ್ನು ಅಳಿಸಬಹುದು' ಎಂದು ಸಮಿತಿ ಕೊನೆಯಲ್ಲಿ ತನ್ನ ತೀರ್ಮಾನ ನೀಡಿತ್ತು.

ಸಾರ್ವತ್ರಿಕವಾಗಿ ಈ ವರದಿಗೆ ಸ್ವಾಗತ ದೊರೆತರೂ ಮಿರ್ಜಾರವರ ಆಡಳಿತದ ಮೇಲೆ ಹಾಕಲಾದ ಬರೆ ಇದೆಂಬ ಭಾವನೆ ಮಿರ್ಜಾರಲ್ಲಿ ಉಂಟಾಗಿ ವಿಶ್ವೇಶ್ವರಯ್ಯನವರೊಂದಿಗಿನ ಅವರ ಸಂಬಂಧ ಸ್ವಲ್ಪ ಕೆಟ್ಟಿತು ಎಂಬ ಅಭಿಪ್ರಾಯ ಒಂದುಂಟು.

ಆದರೆ ಒಂದು ಮಧ್ಯಾಹ್ನ ದಿವಾನರಲ್ಲಿಗೆ ವರದಿಯನ್ನು ಕಳಿಸಿದ ವಿಶ್ವೇಶ್ವರಯ್ಯನವರು ಅಂದು ಸಂಜೆ ಮಾಮೂಲಿ ವಾಕಿಂಗ್ ಹೊರಟು ಮಿರ್ಜಾರ ಮನೆಗೆ ಬಂದರು. ಮಿರ್ಜಾರ ಕೋಣೆಯಲ್ಲಿ ನಾಲ್ಕು ಫೋಟೋಗಳು ಗೋಡೆಗೆ ತೂಗುಹಾಕಲ್ಪಟ್ಟಿದ್ದವು. ಅದರಲ್ಲಿ ಒಂದು ಪರ್ಷಿಯನ್ ಕವಿ ಫಿರ್ದೂಸಿ. ಇನ್ನೊಂದು ಮಹಾರಾಜ ನಾಲ್ವಡಿಯವರ ಗ್ರೂಪ್ ಫೋಟೋ ಮೂರನೆಯದು. ಮಿರ್ಜಾರ ತಂದೆ ಆಗ್‌ಜಾನ್‌ರವರದು. ನಾಲ್ಕನೆಯದು ವಿಶ್ವೇಶ್ವರಯ್ಯನವರದು.

ವಿಶ್ವೇಶ್ವರಯ್ಯನವರು, ಆ ಫೋಟೋವನ್ನು ತೋರಿಸುತ್ತಾ, 'ಇಲ್ಲಿ ಇದಕ್ಕೆ ಜಾಗವಿಲ್ಲ ತೆಗೆದು ಹಾಕಿಬಿಡಿ' ಎಂದರಂತೆ.

'ಅದೇಕೆ ಹಾಗೆನ್ನುತ್ತೀರಿ?' ಎಂದು ಮಿರ್ಜಾರು ಪ್ರಶ್ನಿಸಿದರಂತೆ.

'ನಾನು ರಿಪೋರ್ಟನ್ನು ನಿಮಗೆ ಕಳಿಸಿದೆನಲ್ಲಾ. ಅದರಿಂದ ನಿಮಗೆ ಸಮಾಧಾನವಾಗಿರಲಾರದು; ಅಸಮಾಧಾನವಾಗಿರಬೇಕು'.

ಅದಕ್ಕೆ ಜವಾಬು ನೀಡಿದ ಮಿರ್ಜಾರವರು ಹೀಗೆಂದರು :

'ನಿಮ್ಮನ್ನು ನನ್ನ ತಂದೆಯ ಪಂಕ್ತಿಯಲ್ಲಿ ಸೇರಿಸಿದ್ದೀನಿ. ನನ್ನ ತಂದೆಯ ಸ್ಥಾನ ನನ್ನ ಜೀವನದಲ್ಲಿ ಹೇಗೆ ಖಾಯಂ ಆದದ್ದೋ ನಿಮ್ಮ ಸ್ಥಾನವೂ ನನ್ನ ದೃಷ್ಟಿಯಲ್ಲಿ ಹಾಗೇ ಖಾಯಂ ಆದದ್ದು'.

ಭಿನ್ನಮತಗಳು ನೂರಾರು ಇದ್ದರು ಪರಸ್ಪರ ಗೌರವ ಅವರ ನಡುವೆ ಎಂದಿಗೂ ಕಡಿಮೆಯಾಗಿರಲಿಲ್ಲ. ರಾಜಕೀಯದಲ್ಲಿ ವಿರೋಧಿಗಳಾಗಿದ್ದರೂ ವ್ಯಕ್ತಿಗತ ಸಂಬಂಧ

ಕೆಡುವ ಅವಶ್ಯಕತೆಯಿಲ್ಲ ಎಂಬ ನಂಬಿಕೆ ಅವರದಾಗಿತ್ತು, ಅಂದಿನ ಪ್ರಬುದ್ಧರು ನಡೆಯುತ್ತಿದ್ದ ರೀತಿ ಅದು.

ಸುಲ್ತಾನ್‌ಪೇಟೆ ಗಣಪತಿ ಬಗ್ಗೆ ನಿಟ್ಟೂರು ಶ್ರೀನಿವಾಸರಾಯರ ಒಟ್ಟಾರೆ ಅಭಿಪ್ರಾಯ ಇದು : "ಈ ಗಲಾಟೆ ಮೈಸೂರು ಸಂಸ್ಥಾನದ ಇತಿಹಾಸದಲ್ಲಿ ಒಂದು ಅತ್ಯಂತ ಮಹತ್ವದ ಘಟನೆ. ಇದು ಹಿಂದು-ಮುಸ್ಲಿಂರ ನಡುವಿನ ಕೋಮು ಗಲಭೆ ಎಂಬ ಕೆಲವರ ವ್ಯಾಖ್ಯಾನ ಉಂಟು. ಆದರೆ ಇದು ನಮ್ಮ ನಾಗರಿಕರಲ್ಲಿ ರಾಜಕೀಯ ಪ್ರಜ್ಞೆಯನ್ನು ಹೊರಸೂಸಿದ ಒಂದು ಘಟನೆ. ಸರ್ಕಾರದ ಪಕ್ಷಪಾತ ಮನೋಧರ್ಮಕ್ಕೆ ಜನತೆ ಎಸೆದಿದ್ದ ನೇರ ಸವಾಲು ಇದಾಗಿತ್ತು. ಜವಾಬ್ದಾರಿ ಸರ್ಕಾರದ ರಚನೆಯಾಗಬೇಕೆಂಬ ಕೂಗಿನ ಮರುಧ್ವನಿ ಇದಾಗಿತ್ತು. ಇಲ್ಲಿಂದ ಮುಂದಿನ ದಿನಗಳಲ್ಲಿ ರಾಜಕೀಯ ಜಾಗೃತಿ, ಹೋರಾಟದ ಕೆಚ್ಚು ಪ್ರಕಟವಾಗಲಾರಂಭಿಸಿತು. ಆದ್ದರಿಂದ ಇದೊಂದು ಅತಿ ಮಹತ್ವದ ಮೈಲಿಗಲ್ಲು."

ಪೂಜ್ಯ ನಿಟ್ಟೂರರ ನೆನಪಿನ ಶಕ್ತಿ ಪ್ರಸಿದ್ಧವಾದದ್ದು. ಅದರ ಬಗ್ಗೆ ನಾನು ಸಾಕಷ್ಟು ಕೇಳಿದ್ದೆ. ಆದರೆ ಈ ಸಂದರ್ಶನದಲ್ಲಿ ಅವರು ನೀಡಿದ ವಿವರಗಳು ನನ್ನನ್ನು ಬೆಚ್ಚಿಬೀಳುವಂತೆ ಮಾಡಿದ್ದವು. ವ್ಯಕ್ತಿಗಳ ಹೆಸರುಗಳು, ತಾರೀಖುಗಳು ಅವರ ಬೆರಳ ತುದಿಗಳಲ್ಲಿವೆ. ಕಳೆದ ಶತಮಾನದ ಮೂರನೆಯ ದಶಕದ ಘಟನೆಯೊಂದನ್ನು ವಿವರಿಸುತ್ತಾ ನನ್ನನ್ನು ಅವರು ಆ ದಿನಗಳಿಗೆ, ಆ ಸನ್ನಿವೇಶಗಳಿಗೆ ಕರೆದೊಯ್ದು ನನಗೊಂದು ಅಪೂರ್ವ ಅನುಭವ ನೀಡಿದರು. ನನ್ನ ಜೀವನದಲ್ಲಿ ಇದೊಂದು ಅಪೂರ್ವ ಅವಿಸ್ಮರಣೀಯ ಸಂದರ್ಭ.



# ದೊಡ್ಡತನದ ಶ್ರೀ ನಿಟ್ಟೂರು ಶ್ರೀನಿವಾಸರಾಯರು

................. ✍ ಡಾ|| ಎಚ್.ಎಸ್. ಗೋಪಾಲರಾವ್*

ಇತ್ತೀಚಿನ ದಿನಗಳಲ್ಲಿ ಶ್ರೀ ನಿಟ್ಟೂರು ಶ್ರೀನಿವಾಸರಾಯರನ್ನು ಬಲ್ಲೆ ಎನ್ನುವುದು ಒಂದು ಹೆಮ್ಮೆಯ ಸಂಗತಿ. ಪ್ರತಿ ನಿತ್ಯ ಬೆಂಗಳೂರಿನ ಒಂದಲ್ಲ ಒಂದು ಕಾರ್ಯಕ್ರಮದಲ್ಲಿ ಶ್ರೀ ನಿಟ್ಟೂರು ಶ್ರೀನಿವಾಸರಾಯರು ಪ್ರಮುಖ ಸ್ಥಾನದಲ್ಲಿ ಹಾಜರಿರುತ್ತಾರೆ. ಯಾವುದೇ ದಿನ ಪತ್ರಿಕೆಯ 'ನಗರದಲ್ಲಿ ಇಂದು' ಕಾಲಂನಲ್ಲಿ ಯಾವುದಾದರೂ ಒಂದು ಪ್ರಮುಖ ಕಾರ್ಯಕ್ರಮದಲ್ಲಿ ಅವರ ಹೆಸರನ್ನು ಕಾಣಬಹುದು. ಅವರಿಗೆ ಪ್ರಿಯವಾಗುವ ಕೆಲವು ಕಾರ್ಯಕ್ರಮಗಳಲ್ಲಿ ಶ್ರೋತೃವಾಗಿ ಯಾದರೂ ಅವರು ಪಾಲ್ಗೊಳ್ಳುತ್ತಾರೆ. ಅಂತಹ ಕಾರ್ಯಕ್ರಮ ಗಳಿಗೆ ಹೋದರೆ, ಸಮೀಪದಿಂದ ಅವರನ್ನು ಕಾಣಬಹುದು; ಅವಕಾಶ ಸಿಕ್ಕರೆ, ಮಾತನಾಡಿಸಬಹುದು. ಹಾಗೆ ಮಾತನಾಡಿಸಿ ದಾಗ, ಮನಬಿಚ್ಚಿ ಮಾತನಾಡುತ್ತಾ, ಪರಿಚಯ ಮಾಡಿಕೊಳ್ಳು ತ್ತಾರೆ. ಕೌಟುಂಬಿಕ ಹಿನ್ನೆಲೆ ಕೇಳುತ್ತಾರೆ. ಗಾಬರಿ ಆಗಬೇಡಿ, ನಿಮಗೆ ಆಶ್ಚರ್ಯ ಎನ್ನಿಸಬಹುದು. ನೀವು ಹೇಳಿದ ನಿಮ್ಮ ಕೌಟುಂಬಿಕ ವಿವರಗಳಿಂದ, ಅವರು ನಿಮ್ಮ ಕುಟುಂಬದ ಯಾರೋ ಒಬ್ಬರನ್ನು ನೆನಪಿಗೆ ತಂದುಕೊಂಡು, ಅವರ ಬಗ್ಗೆ ನಿಮಗೇ ತಿಳಿದಿರದಷ್ಟು ಮಾಹಿತಿಯನ್ನು ಒದಗಿಸುತ್ತಾರೆ. ಇದು ಶ್ರೀ ನಿಟ್ಟೂರು ಶ್ರೀನಿವಾಸರಾಯರ ನೆನಪಿನ ಶಕ್ತಿ ಎಂದು ಮಾತ್ರ ತಿಳಿಯಬೇಡಿ; ಅದು ಅವರಿಗಿರುವ ಮತ್ತು ಇದ್ದ ಜನ ಸಂಪರ್ಕಕ್ಕೂ ಒಂದು ಉದಾಹರಣೆ. ಇಷ್ಟೆಲ್ಲ ನೆನಪಿನ ಶಕ್ತಿ

---

* 'ಸ್ವಸ್ತಿಶ್ರೀ ಸ್ಕಂದ' ಅರಸಿನ ಕುಂಟೆ, ನೆಲಮಂಗಲ ತಾಲ್ಲೂಕು
ಬೆಂಗಳೂರು ಗ್ರಾಮಾಂತರ - ೫೬೨ ೧೨೩

ಇರುವ, ಅಷ್ಟೊಂದು ಜನರನ್ನು ತಿಳಿದಿರುವ ಶ್ರೀನಿವಾಸರಾಯರ ವಯಸ್ಸು ಎಷ್ಟೆಂದು ತಿಳಿದಾಗ ನೀವು ಮತ್ತಷ್ಟು ಗೊಂದಲಕ್ಕೆ ಗುರಿಯಾಗುತ್ತೀರಿ. ಇತ್ತೀಚಿನ ದಿನಗಳಲ್ಲಿ ಮಾತ್ರವಲ್ಲದೆ, ಬಹಳ ಹಿಂದಿನ ದಿನಗಳಿಂದಲೂ ತಿಳಿದಿರುವ ಪ್ರಕಾರ ಅರುವತ್ತಕ್ಕೆ ಅರುಳೋ, ಮರುಳೋ! ಶ್ರೀನಿವಾಸರಾಯರು ಅರುವತ್ತನ್ನು ದಾಟಿ ನಲವತ್ತು ವರ್ಷಗಳಾಗಿವೆ. ಆದರೂ ಅವರ ನೆನಪಿನ ಶಕ್ತಿ ಬೆರಗು ಹುಟ್ಟಿಸುವಷ್ಟು ಚುರುಕು. ನಿಮಗೇ ನಾಚಿಕೆ ಆಗುವಂತೆ. ಅದೆಷ್ಟೋ ದಿನಾಂಕ ಮತ್ತು ಜನರನ್ನು ನೆನಪು ಮಾಡಿಕೊಡುತ್ತಾರೆ.

ಕೆಲವು ವರ್ಷಗಳ ಹಿಂದೆ ಒಂದು ಸಮಾರಂಭಕ್ಕೆ ಹೋಗಿದ್ದಾಗ ನನ್ನ ಪರಿಚಿತರೊಬ್ಬರು 'ನಿಮಗೊಬ್ಬರು ಅಪರೂಪದ ವ್ಯಕ್ತಿಯ ಪರಿಚಯ ಮಾಡಿಕೊಡುತ್ತೇನೆ ಬನ್ನಿ' ಎಂದು ಕೈ ಹಿಡಿದು ಎಳೆದುಕೊಂಡೇ ಹೋದರು. ಅವರು ಸಮೀಪಿಸುತ್ತಿದ್ದ ವ್ಯಕ್ತಿ ಯಾರು ಎಂದು ತಿಳಿಯುತ್ತಿದ್ದಂತೆ ನನಗೆ ನಗು ಬಂದರೂ, ತಡೆದುಕೊಂಡು ಅವರ ಜೊತೆಗೆ ಹೋಗಿ, ಅವರು ಪರಿಚಯಿಸಲಿದ್ದವರ ಮುಂದೆ ನಿಂತೆ. ನಾವು ನಿಂತದ್ದನ್ನು ಗಮನಿಸಿದ ಅವರು, ನಮ್ಮತ್ತ ತಿರುಗಿದರು. ನನ್ನನ್ನು ಕರೆದುಕೊಂಡು ಹೋಗಿದ್ದವರು, 'ಸಾರ್, ಇವರು...' ಎಂದು ಬಾಯಿ ತೆರೆಯುತ್ತಿದ್ದಂತೆಯೇ, 'ಯಾರು ಗೋಪಾಲರಾವೇ' ಎಂದು ಮಾತನ್ನಾರಂಭಿಸಿದರು. ಪರಿಚಯಿಸಲು ಕರೆದುಕೊಂಡು ಹೋಗಿದ್ದ ಸ್ನೇಹಿತರು ಗಲಿಬಿಲಿಗೊಂಡದ್ದನ್ನು ನಾನು ಕಂಡೆ. 'ಗೋಪಾಲರಾವ್‌ನ ತುಂಬಾ ವರ್ಷಗಳಿಂದಲೂ ಬಲ್ಲೆ' ಎಂದರು ಶ್ರೀನಿವಾಸರಾಯರು.

ಹೌದು, ಶ್ರೀನಿವಾಸರಾಯರು ಬಹಳ ವರ್ಷಗಳಿಂದ ನನ್ನನ್ನು ಬಲ್ಲರು ಎನ್ನುವುದಕ್ಕಿಂತ ನಾನು ಅವರನ್ನು ಬಹಳ ವರ್ಷಗಳಿಂದ ಬಲ್ಲೆ ಎನ್ನುವುದು ಹೆಮ್ಮೆಯ ಅಥವಾ ಗರ್ವದ ಮಾತು. ಏಕೆಂದರೆ, ನಾನು ಅವರನ್ನು ಬಲ್ಲ ಸುಮಾರು ೪೪/೪೫ ವರ್ಷಗಳು ಅವರ ಪಾಲಿಗೇ ಏನೂ ಅಲ್ಲ ಅನಿಸಬಹುದು; ಆದರೆ ನನ್ನ ಪಾಲಿಗೆ ಅದು ಹೆಚ್ಚು. ಅಂತಹ ದೊಡ್ಡವರನ್ನು, ಹಿರಿಯರನ್ನು ನಾನು ಕಾಣುವ ವೇಳೆಗಾಗಲೇ, ಅವರು ಉಚ್ಚ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರಾಗಿದ್ದರು. ಕ್ಷಮಿಸಿ, ನನ್ನ ನೆನಪು ಸರಿ ಎನಿಸಿದರೆ, ಅದೇ ಸಂದರ್ಭದಲ್ಲಿ ಅವರು ಹಂಗಾಮಿ ರಾಜ್ಯಪಾಲರೂ ಆಗಿದ್ದರು. ಬಹುತೇಕ ೧೯೫೭ ಅಥವಾ ೧೯೫೮ ಎಂದು ನೆನಪು (ಬಹುತೇಕ ಶ್ರೀನಿವಾಸರಾಯರಿಗೆ ಆ ದಿನಾಂಕವೂ ನೆನಪಿರಬಹುದು). ಆಗ ನಾನು ಶಿವಗಂಗೆಯ ಮಾಧ್ಯಮಿಕ ಶಾಲೆಯಲ್ಲಿ ಎರಡನೆಯ ಅಥವಾ ಮೂರನೆಯ ತರಗತಿಯ ವಿದ್ಯಾರ್ಥಿ. ಆಗ ನಮ್ಮ ತಂದೆ ಶಿವಗಂಗೆಯ ಸಮೀಪದ ಬರಗೇನಹಳ್ಳಿಯಲ್ಲಿ ಪ್ರಾಥಮಿಕ ಶಾಲೆಯ ಉಪಾಧ್ಯಾಯರಾಗಿದ್ದರು. ಅದೇ ಊರಿನಲ್ಲಿ ನಮ್ಮ ವಾಸ. ನಮ್ಮ ಸಂಬಂಧಿಕರು ಮತ್ತು ಪರಿಚಯದವರು ಯಾರೇ ಶಿವಗಂಗೆಗೆ

ಬಂದರೂ ಮೊದಲು ನಮ್ಮ ಮನೆಗೆ ಬಂದು, ನಂತರ ಶಿವಗಂಗೆಗೆ ಹೋಗುತ್ತಿದ್ದುದು ವಾಡಿಕೆ. ಹಾಗೆ ಬಂದವರ ಜೊತೆಗೆ ಚಿಕ್ಕ ಹುಡುಗರಾಗಿದ್ದ ನಮಗೂ ಹೋಗಲು ಅವಕಾಶ. ಈ ಕಾರಣದಿಂದಾಗಿ, ನಾನು ಅದೆಷ್ಟು ಬಾರಿ ಶಿವಗಂಗೆ ಬೆಟ್ಟವನ್ನು ಹತ್ತಿದ್ದೇನೋ ನನಗೆ ಲೆಕ್ಕ ಸಿಕ್ಕಿಲ್ಲ. ಎಷ್ಟೋ ಸಂದರ್ಭಗಳಲ್ಲಿ ಒಂದೇ ದಿನ ಎರಡು ಬಾರಿ ಬೆಟ್ಟ ಹತ್ತಿರುವುದೂ ಉಂಟು. ಆಗ ಅದು ನಮಗೂ ಖುಷಿ ನೀಡುತ್ತಿದ್ದ ಸನ್ನಿವೇಶ.

ನಮ್ಮ ತಾಯಿಯ ಅಕ್ಕ, ಎಂದರೆ ನಮ್ಮ ದೊಡ್ಡಮ್ಮನ ಯಜಮಾನರು, ಎಂದರೆ ನಮ್ಮ ದೊಡ್ಡಪ್ಪ. ಶ್ರೀ ಎಂ.ಎಸ್. ಶ್ರೌತಿ (ನಂತರ ಅವರು ಸ್ವಾಮಿ ಅಚಲಾನಂದ ಆದರು) ಎನ್ನುವವರು ಕರ್ನಾಟಕ ಏಕೀಕರಣಕ್ಕೆ ಮೊದಲು ಮದ್ರಾಸ್ ಅಧಿಪತ್ಯಕ್ಕೆ ಸೇರಿದ್ದ ಪ್ರದೇಶಗಳಲ್ಲಿ ಲೋಕೋಪಯೋಗಿ ಇಲಾಖೆಯಲ್ಲಿ ಎಂಜಿನಿಯರ್ ಆಗಿದ್ದರು. ಏಕೀಕರಣದ ನಂತರ ವಿಶಾಲ ಮೈಸೂರು ರಾಜ್ಯದಲ್ಲಿ ಸೇವೆ ಸಲ್ಲಿಸಿದರು. ಆ ಕಾಲಕ್ಕೆ ಕಂಡೂ ಕಾಣದಂತಿದ್ದ ಲಂಚಗುಳಿತನವನ್ನು ಕಂಡು ಸಹಿಸದೆ, ಅದನ್ನು ತಡೆಗಟ್ಟಲೂ ಸಾಧ್ಯವಾಗದೆ, ಆ ಸುಳಿಯಲ್ಲಿ ಸಿಕ್ಕಿಕೊಳ್ಳಲೂ ಇಷ್ಟಪಡದೆ, ಅವರು ನಿವೃತ್ತಿಗೆ ಕೆಲವು ವರ್ಷಗಳ ಮೊದಲೇ ಸ್ವಯಂ ನಿವೃತ್ತಿ ಪಡೆದರು. ಅವರಿಗೆ ಅನೇಕ ಗಣ್ಯರ ಪರಿಚಯವಿತ್ತು. ತಮ್ಮ ಆಪ್ತ ವಲಯದ ಗಣ್ಯರನ್ನು ಶಿವಗಂಗೆಗೆ ಕರೆತರುತ್ತಿದ್ದರು. ಹಾಗೆ ಕರೆತಂದ ಗಣ್ಯರನ್ನು ನಮ್ಮ ಮನೆಗೂ ಕರೆತರುತ್ತಿದ್ದರು. ಹಾಗೆ ಒಮ್ಮೆ ನಮ್ಮ ಮನೆಗೆ ಬಂದವರು ನಿಟ್ಟೂರು ಶ್ರೀನಿವಾಸರಾಯರು. ಆ ದಿನದ ಒಂದು ಚಿತ್ರ ನನಗೆ ಇನ್ನೂ ಚೆನ್ನಾಗಿ ನೆನಪಿದೆ. ಶಿವಗಂಗೆಯ ಬೆಟ್ಟದ ತಪ್ಪಲಿನಲ್ಲಿರುವ ಶೃಂಗೇರಿ ಸಂಸ್ಥಾನದ ಮಠದ ಮುಂದೆ ನಿಂತು, ಆ ಕಾಲಕ್ಕೆ ಹೊಸದಾಗಿದ್ದ ಹವಾಯಿ ಚಪ್ಪಲಿಗಳನ್ನು ಹಾಕಿದ್ದ ಶ್ರೀ ನಿಟ್ಟೂರು ಶ್ರೀನಿವಾಸರಾಯರು, ಚಪ್ಪಲಿಯನ್ನು ಕಳಚದೆಯೇ ಕಾಲನ್ನು ತೊಳೆದುಕೊಳ್ಳುತ್ತಾ, 'ಇವು ಚರ್ಮದ ತಯಾರಿಕೆಯಲ್ಲ. ಆದ್ದರಿಂದ ದೇವಸ್ಥಾನದ ಹೊರತು ಬೇರೆ ಕಡೆ ಆತಂಕವೂ ಇಲ್ಲದೆ ಬಳಸಬಹುದು.'

ಆ ದಿನ ನಮ್ಮ ದೊಡ್ಡಪ್ಪನವರ ಜೊತೆಯಲ್ಲಿ ಶ್ರೀ ನಿಟ್ಟೂರು ಶ್ರೀನಿವಾಸರಾಯರಲ್ಲದೆ, ಧಾರವಾಡದಲ್ಲಿ ನೆಲೆಸಿದ್ದ, ಆ ಕಾಲದ ಮಹತ್ವದ ಕವಿಗಳಲ್ಲಿ ಒಬ್ಬರಾದ ಶ್ರೀ ಸಾಲಿ ರಾಮಚಂದ್ರರಾಯರೂ ಬಂದಿದ್ದರು ಎಂದು ನೆನಪು. ಎಲ್ಲರೂ ಗಂಗಾಧರೇಶ್ವರನ ದೇವಸ್ಥಾನದವರೆಗೆ ಬೆಟ್ಟ ಹತ್ತಿದೆವು. ರಾಜ್ಯದ ಉಚ್ಚ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರು ಬಂದಿದ್ದಾರೆಂದು ದೇವಸ್ಥಾನದ ಅರ್ಚಕರು ವಿಶೇಷ ಗೌರವ, ಅದಕ್ಕಿಂತ ಹೆಚ್ಚಾಗಿ ಭಯ-ಭಕ್ತಿಗಳಿಂದ ಪೂಜೆ ಮಾಡಿಕೊಟ್ಟರು. ಆದರೆ ನಿಟ್ಟೂರರಿಗೆ ಬಹುತೇಕ ಅದು ಗಮನಕ್ಕೇ ಬಂದಿರಲಿಲ್ಲ. ದೇವಾಲಯದ ವಾಸ್ತು, ಮೂರ್ತಿ ಶಿಲ್ಪ, ಪೂಜಾ ವಿಗ್ರಹದ

ವೈಶಿಷ್ಟ್ಯಗಳು ಇತ್ಯಾದಿ ವಿಚಾರಗಳಲ್ಲಿ ಅವರು ಪರಸ್ಪರ ಆಡಿಕೊಂಡ ಮಾತುಗಳು ಆಗ ನನಗೇನೂ ಅರ್ಥವಾಗಿರಲಿಲ್ಲ. ದೊಡ್ಡವರ ದೊಡ್ಡ ದೊಡ್ಡ ವಿಷಯಗಳು ಎಂದು ಆಶ್ಚರ್ಯ ಮಾತ್ರ ಖಂಡಿತ ಆಗಿತ್ತು. ಶ್ರೀ ನಿಟ್ಟೂರು ಶ್ರೀನಿವಾಸರಾಯರನ್ನು ಆ ಮೊದಲು ನಾನು ನೋಡಿರುವ ಸಾಧ್ಯತೆಗಳಿದ್ದರೂ, ನನ್ನ ನೆನಪಿನಲ್ಲಿ ದಾಖಲಾಗಿರುವ ಅವರ ಮೊಟ್ಟ ಮೊದಲ ಚಿತ್ರ ಅದು. ಆ ನಂತರ ಹಲವಾರು ವರ್ಷಗಳ ಕಾಲ ಅವರ ಸಂಪರ್ಕ ಲಭ್ಯವಾಗಿರಲಿಲ್ಲ.

ಎಷ್ಟೋ ವರ್ಷಗಳಾದ ಮೇಲೆ ಹಲವಾರು ಸಭೆ, ಸಮಾರಂಭಗಳಲ್ಲಿ ಶ್ರೀನಿವಾಸರಾಯ ರನ್ನು ಭೇಟಿಯಾಗುವ ಅವಕಾಶಗಳು ದೊರೆತವು. ಯಾವಾಗಲೋ ಒಮ್ಮೆ, ಅವರಿಗೆ ಹಳೆಯ ನೆನಪುಗಳನ್ನು ಹೇಳಿದೆ. ನಮ್ಮ ಊರಿಗೆ ಬಂದಿದ್ದನ್ನು ಅವರು ಮರೆತಿರಲಿಲ್ಲ.

ಬಿ.ಎಂ.ಶ್ರೀ. ಪ್ರತಿಷ್ಠಾನ ಮತ್ತು ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆಗಳೊಡನೆ ನನ್ನ ಸಂಪರ್ಕ ಹೆಚ್ಚಿದಂತೆಲ್ಲಾ ನಿಟ್ಟೂರರನ್ನು ಭೇಟಿಯಾಗುವ ಮತ್ತು ಅವರೊಡನೆ ಮಾತನಾಡುವ ಸಂದರ್ಭಗಳು ಹೆಚ್ಚಿದವು. ಆ ಸಂದರ್ಭಗಳು ಸದುಪಯೋಗ ಮಾಡಿಕೊಂಡಿದ್ದೇನೆ ಎಂಬ ಹೆಮ್ಮೆ ನನಗಿದೆ.

ನಾನು ನವಕರ್ನಾಟಕ ಪ್ರಕಾಶನ ಸಂಸ್ಥೆಗಾಗಿ, ಕರ್ನಾಟಕ ಏಕೀಕರಣ ಕೃತಿಯ ರಚನೆಗೆ ತೊಡಗಿದಾಗ ಎಲ್ಲ ರೀತಿಯ ಮಾರ್ಗದರ್ಶನ ಮಾಡಿದ ಶ್ರೀ ನಿಟ್ಟೂರರೊಡನೆ ಸುಮಾರು ಮೂರು ಗಂಟೆಗಳಿಗೂ ಹೆಚ್ಚು ಕಾಲ ಸಂದರ್ಶನ ಮಾಡಿ, ಅವರ ನೆನಪಿನ ಬುತ್ತಿಯಿಂದ ದೊರೆತ ಅತ್ಯಮೂಲ್ಯ ಮಾಹಿತಿಯನ್ನು ಸಂಗ್ರಹಿಸಲು ಸಾಧ್ಯವಾಗಿದೆ. ಕನ್ನಡ ಸಾಹಿತ್ಯ ಪರಿಷತ್ತಿನೊಂದಿಗೆ, ಅದರ ಹುಟ್ಟಿನ ದಿನಗಳಿಂದಲೂ ಸಂಪರ್ಕ ಹೊಂದಿರುವ ಶ್ರೀ ನಿಟ್ಟೂರರಿಗೆ, ಬೆಂಗಳೂರಿನಲ್ಲಿ ಸಂಬಂಧ ಇಲ್ಲ ಎನ್ನುವ ಯಾವುದಾದರೂ ಒಂದು ಸಂಸ್ಥೆ ಇರುವಂತಿಲ್ಲ. ಶ್ರೀ ಎಂ.ಎಸ್. ಕೃಷ್ಣರಾಯರಂತಹ ನಿಷ್ಠಾವಂತ ಹಾಗೂ ಸಾಮಾಜಿಕ ಕಳಕಳಿಯ ಅಧಿಕಾರಿಯ ಮತ್ತು ಶ್ರೀ ಎಂ. ಹಿರಿಯಣ್ಣನವರಂತಹ ಮೇಧಾವಿ ವಿದ್ವಾಂಸರ ಸೋದರ ಸಂಬಂಧಿಯಾದ, ಋಷಿ ಸದೃಶ ವ್ಯಕ್ತಿತ್ವದ, ಹಿರಿಯರಾದ ಶ್ರೀ ಡಿ.ವಿ. ಗುಂಡಪ್ಪ ನವರ ನಿಕಟವರ್ತಿಯಾಗಿದ್ದ ಶ್ರೀ ನಿಟ್ಟೂರರಲ್ಲಿ ಆ ಹಿರಿಯರೆಲ್ಲರ ಗುಣಗಳು ಸೇರಿ ಹೋಗಿವೆ. ಆದ್ದರಿಂದಲೇ ನಿಟ್ಟೂರರನ್ನು ಕಂಡಾಗಲೆಲ್ಲಾ ಆ ಹಿರಿಯ ಜೀವಗಳು ಎದುರು ನಿಂತಂತಾಗುತ್ತದೆ.

ತಮಗಿದ್ದ ಹಿರಿಯರ ಸಂಪರ್ಕಕ್ಕಿಂತ ಹೆಚ್ಚಾಗಿ, ತಾವೇ ಗಳಿಸಿಕೊಂಡಿದ್ದ ಹಿರಿಯ ಹಾಗೂ ಗೌರವದ ಸ್ಥಾನಮಾನಗಳಿಂದ ನಿಟ್ಟೂರರು ಜನಸಾಮಾನ್ಯರಿಂದ ದೂರವಾಗಿ, ತಮ್ಮದೇ ಆದ ಒಂದು ಗಾಜಿನ ಮನೆಯನ್ನು ಕಟ್ಟಿಕೊಂಡು, ಮಡಿವಂತ ಬದುಕು

ನಡೆಸಬಹುದಾಗಿತ್ತು. ಆದರೆ ಅವರು ಎಂದೂ ಸಾಮಾನ್ಯ ಜನರಿಂದ ದೂರ ನಿಲ್ಲುವ ಪ್ರಯತ್ನವನ್ನೇ ಮಾಡಿಲ್ಲ. ಈಗಲೂ ತಮಗೆ ಆಪ್ತರಾದವರ ಎನ್ನುವುದಕ್ಕಿಂತ ವಿಶ್ವಾಸದಿಂದ ಕರೆದವರ ಮನೆಗಳ ಶುಭ ಸಮಾರಂಭಗಳಲ್ಲಿ ಪ್ರೀತಿಯಿಂದ ಭಾಗವಹಿಸುತ್ತಾರೆ.

ಕಳೆದ ವರ್ಷ ನಾನು ನನ್ನ ಮನೆಯ ಮೇಲೆ, ನಾನು ಮತ್ತು ನನ್ನ ಪುಸ್ತಕಗಳಿಗಾಗಿ ಪ್ರತ್ಯೇಕವಾಗಿ ಒಂದು ಭಾಗವನ್ನು ಕಟ್ಟಿಸಿಕೊಂಡೆ. ಆಗ ನನ್ನ ಹಲವಾರು ಸ್ನೇಹಿತರನ್ನು ಕರೆದು ಊಟ ಹಾಕಬೇಕೆಂದುಕೊಂಡೆ. ಹಲವು ಸ್ನೇಹಿತರನ್ನು ಆಹ್ವಾನಿಸಿದೆ. ನಿಶ್ಚಿತ ದಿನಕ್ಕೆ ಎರಡು ದಿನ ಮೊದಲು, ದೂರ ಬಹಳ ಎಂಬ ಕಾರಣದಿಂದ ಬರುತ್ತಾರೋ, ಇಲ್ಲವೋ ಎಂದು ಅನುಮಾನದಿಂದಲೇ, ಶ್ರೀ ನಿಟ್ಟೂರರನ್ನೂ ಆಹ್ವಾನಿಸಿದೆ. ಅವರು ಪ್ರೀತಿಯಿಂದ ಬಂದು ಎಲ್ಲರೊಡನೆ ಬೆರೆತರು. ಸಂತೋಷಪಟ್ಟರು.

ಉದಯ ದೂರದರ್ಶನದ 'ಪರಿಚಯ' ಕಾರ್ಯಕ್ರಮದಲ್ಲಿ ನನ್ನ ಪರಿಚಯ ಆದದ್ದನ್ನು ನೋಡಿ, ಸಂತೋಷಪಟ್ಟು, ನಂತರ ಭೇಟಿಯಾದಾಗ ಅಭಿನಂದಿಸಿದ ಹಿರಿಯರು ಶ್ರೀ ನಿಟ್ಟೂರು ಶ್ರೀನಿವಾಸರಾಯರು. ಇಂತಹ ದೊಡ್ಡವರ ಬಗ್ಗೆ ಎಷ್ಟು ಹೇಳಿದರೂ ಮುಗಿಯಿತು ಎನಿಸುವುದಿಲ್ಲ.

ಹಿರಿಯ ಕಾದಂಬರಿಕಾರ ಶ್ರೀ ಸಿ.ಕೆ. ನಾಗರಾಜರಾಯರೂ ಶ್ರೀ ನಿಟ್ಟೂರು ಶ್ರೀನಿವಾಸರಾಯರಿಗೆ ಸೋದರಿಕೆಯ ಸಂಬಂಧ. ಅವರು ಎರಡು ಐತಿಹಾಸಿಕ ಕಾದಂಬರಿಗಳನ್ನು ಕುರಿತು ನಾನು ಉಪನ್ಯಾಸ ನೀಡುವ ಸಂದರ್ಭ ಒದಗಿ ಬಂದಿತ್ತು. ಆ ಸಂದರ್ಭದಲ್ಲಿ ಶ್ರೀ ನಿಟ್ಟೂರು ಶ್ರೀನಿವಾಸರಾಯರು ಉಪಸ್ಥಿತರಿದ್ದರು. ಅದರಿಂದ ನನಗೆ ಸಂತೋಷವಾಗಿತ್ತು. ಕಾರ್ಯಕ್ರಮ ಮುಗಿದ ಮೇಲೆ ಶ್ರೀಮತಿ ನಾಗರಾಜರೊಡನೆ ಮಾತನ್ನಾಡುತ್ತಿದ್ದಾಗ, ಶ್ರೀ ನಿಟ್ಟೂರರರು ೧೯೪೬ರಲ್ಲೋ, ೪೭ರಲ್ಲೋ, ನಮ್ಮ ಕುಟುಂಬಕ್ಕೆ ಸಂಬಂಧಿಸಿದಂತೆ ನಡೆದಿದ್ದ ಒಂದು ಮದುವೆಯನ್ನು ನೆನಪು ಮಾಡಿಕೊಂಡರು. ಸಾಮಾನ್ಯ ವಿಷಯಗಳ ಬಗೆಗೂ ಅವರಿಗಿರುವ ನೆನಪುಗಳು ನನ್ನ ಆಶ್ಚರ್ಯವನ್ನು ಹೆಚ್ಚಿಸಿದವು.

ಹೇಳುತ್ತಾ ಹೋದರೆ ಕೊನೆಯಾಗುವಂತಿಲ್ಲ. ಸ್ವಾಮಿ ಅಚಲಾನಂದರು ಕನ್ನಡಕ್ಕೆ ಅನುವಾದ ಮಾಡಿರುವ ಪ್ರೊ. ಹಿರಿಯಣ್ಣ ಅವರ ಇಂಗ್ಲಿಷ್ ಕೃತಿಯೊಂದರ ಪ್ರಕಟಣೆ, ಹೊಸಕೆರೆ ಚಿದಂಬರಯ್ಯನವರ ಸಾಹಿತ್ಯ ಕೃತಿಗಳು ಇತ್ಯಾದಿ ಇನ್ನೂ ಹತ್ತು, ಹಲವು ವಿಷಯಗಳ ಬಗ್ಗೆ ಅವರಿಗಿರುವ ಆಸಕ್ತಿಯ ಬಗ್ಗೆ ನಾನಂತೂ ಬೆರಗಾಗಿದ್ದೇನೆ.

ಸತ್ಯ ಶೋಧನ ಪ್ರಕಟಣ ಮಂದಿರದ ಮೂಲಕ ಉತ್ತಮ ಕೃತಿಗಳ ಪ್ರಕಟನೆ ಮಾಡಿ

ಸಾಹಿತ್ಯ ಲೋಕದ ಶ್ರೀಮಂತಿಕೆ ಹೆಚ್ಚಿಸಿರುವ ಶ್ರೀ ನಿಟ್ಟೂರರು ಅಪ್ಪಟ ಗಾಂಧೀವಾದಿ. ಗಾಂಧೀಜಿಯನ್ನು ಇನ್ನೂ ಮರೆತಿಲ್ಲದ ಶ್ರೀ ನಿಟ್ಟೂರರು ಹಳೆಯದನ್ನು ಹಳಿಯುವುದಿಲ್ಲ. ಹೊಸತನ್ನು ನಿಂದಿಸುವುದಿಲ್ಲ. ಪ್ರಗತಿಯನ್ನು ಕಂಡು ಸಂತೋಷಪಡುವ ಹೃದಯ ಶ್ರೀಮಂತಿಕೆಯ ಇಂತಹ ಹಿರಿಯರ ಜೊತೆಗೆ ನಾವು ಕೆಲವು ಒಳ್ಳೆಯ ಕ್ಷಣಗಳನ್ನು ಕಳೆದಿದ್ದೇವೆ. ಎಂದು ಹೇಳಿಕೊಳ್ಳುವುದು ನಮಗೆ ಹೆಮ್ಮೆಯ ಮಾತು. ಅದೇ ನಮ್ಮ ಶ್ರೀಮಂತಿಕೆ.

ಈಗ ಶ್ರೀ ನಿಟ್ಟೂರು ಶ್ರೀನಿವಾಸರಾಯರಿಗೆ ನೂರರ ಹರೆಯ. ತೊಂಭತ್ತೊಂಬತ್ತು ಸಾರ್ಥಕ ವರ್ಷಗಳನ್ನು ಮುಗಿಸಿ, ನೂರನ್ನು ದಾಟಲಿರುವ ಈ ಹಿರಿಯರನ್ನು ಕಂಡು ಆ ನೂರಕ್ಕೂ ಸಂತೋಷವಾಗಿರಬೇಕು. ತನ್ನ ಬಗ್ಗೆ ಎಂದೂ ಬೇಸರಿಸಿಕೊಳ್ಳದ, ಚೇತನಗಳನ್ನು ಕಾಲವೂ ಗೌರವಿಸುವುದು ಸಹಜ. ಕಿರಿಯರೆನ್ನದೆ, ಹಿರಿಯರೆನ್ನದೆ, ಇವರು ನನ್ನವರು, ಇವರು ಬೇರೆಯವರು ಎನ್ನದೆ, ಬಡವ-ಬಲ್ಲಿದ ಎನ್ನದೆ ಎಲ್ಲರನ್ನೂ ಅವರವರ ಕೆಲಸಗಳಿಂದ ಗುರುತಿಸಿ ಗೌರವಿಸುವ ಇಂತಹ ಹಿರಿಯರು ಜೀವನ ಪ್ರೀತಿಯನ್ನು ಹೆಚ್ಚಿಸುತ್ತಾರೆ.

ಡಿ.ವಿ.ಜಿ., ಮಾಸ್ತಿ, ವಿ.ಸೀ. ಮುಂತಾದ ಶುದ್ಧ ಮನಸ್ಸಿನ ಹಿರಿಯರೆಲ್ಲರೂ ಒಂದಾಗಿರುವಂತೆ ಕಾಣುವ ಹಿರಿಯ ಹಾಗೂ ನಿರ್ಮಲ ಮನಸ್ಸಿನ, ದ್ವೇಷದ ಬಗ್ಗೆ ತಿಳಿಯದ ಶ್ರೀ ನಿಟ್ಟೂರು ಶ್ರೀನಿವಾಸರಾಯರಂತಹವರು ನಮಗೆ ಪರಿಚಿತರು ಎಂದು ಗರ್ವದಿಂದ ಹೇಳಿಕೊಳ್ಳಲು ಯಾರಿಗೆ ತಾನೆ ಸಂಕೋಚವಾಗುತ್ತದೆ.



# ಶತಮಾನದ ಸಾಕ್ಷಿ ಪ್ರಜ್ಞೆ

.............................✍ *ಶೂದ್ರ ಶ್ರೀನಿವಾಸ್**

ನ್ಯಾಯಮೂರ್ತಿ ನಿಟ್ಟೂರು ಶ್ರೀನಿವಾಸರಾವ್ ಅವರು ಸಾಂಸ್ಕೃತಿಕವಾಗಿ ನಮ್ಮ ನಡುವೆ ಓಡಾಡಿಕೊಂಡಿರುವ ಅಪರೂಪದ ಸಾಕ್ಷಿ ಚಿತ್ರ. ಕಳೆದ ಮೂವತ್ತು ವರ್ಷಗಳಿಂದ ಯಾವುದೇ ಸಭೆ ಸಮಾರಂಭದಲ್ಲಿ ಅವರಿಲ್ಲದ ಚಿತ್ರವನ್ನು ನಾನು ಕಂಡಿಲ್ಲ. ತಮಗೆ ಆಹ್ವಾನ ಪತ್ರಿಕೆ ಬಂದಿರಲಿ, ಬರದಿರಲಿ ಕಾರ್ಯಕ್ರಮದ ಸ್ವರೂಪವನ್ನು ಅರಿತು ಭಾಗವಹಿಸುವ ಅಪರೂಪದ ವ್ಯಕ್ತಿತ್ವವನ್ನು ಹೊಂದಿರುವಂಥವರು. ಸದಾ ಶ್ವೇತಧಾರಿಯಾಗಿ ನೂರು ವರ್ಷಗಳ ಗಡಿಯನ್ನು ದಾಟಿ ನಿಂತಿರುವ ಇವರು ತಮ್ಮ ಮಾನಸಿಕ ಸ್ಥೈರ್ಯವನ್ನು ಆರೋಗ್ಯಪೂರ್ಣವಾಗಿ ಕಾಪಾಡಿಕೊಂಡಿರುವಂಥವರು. ಸುಮಾರು ಕಾಲು ಶತಮಾನದ ಹಿಂದೆ ಬೆಂಗಳೂರಿನ ಬಸವನಗುಡಿ ನ್ಯಾಷನಲ್ ಕಾಲೇಜಿನಲ್ಲಿ 'ಕನ್ನಡ ಉಳಿಸಿ ' ಎಂಬ ಸಾಂಸ್ಕೃತಿಕ ಕಾರ್ಯಕ್ರಮವನ್ನು ಏರ್ಪಡಿಸಿದ್ದೆವು. ಅದರ ಸಂಚಾಲಕ ನಾನಾಗಿದ್ದೆ. ಡಾ|| ಚಿದಾನಂದಮೂರ್ತಿಯವರು ಅಧ್ಯಕ್ಷರಾಗಿದ್ದರು. ಗೋಕಾಕ್ ಚಳವಳಿ ಇನ್ನು ಹುಟ್ಟಿಕೊಂಡಿರಲಿಲ್ಲ. ಕನ್ನಡವನ್ನು ಯಾಕೆ ಮತ್ತು ಹೇಗೆ ಉಳಿಸಬೇಕು ಎಂಬುದರ ಬಗ್ಗೆ ಒಂದು ಕಿರು ಮಾರ್ಗದರ್ಶಿ ಕೃತಿಯನ್ನು ಹೊರತಂದಿದ್ದೆವು.

ಈ ಒಂದು ದಿನದ ವಿಚಾರ ಸಂಕೀರ್ಣದಲ್ಲಿ ನ್ಯಾಯಮೂರ್ತಿ ನಿಟ್ಟೂರುರವರು, ಖಾದ್ರಿ ಶಾಮಣ್ಣ, ಪ್ರೊ. ಎಂ.ಡಿ. ನಂಜುಂಡಸ್ವಾಮಿಯವರು ಹಾಗೂ ಬಿ.ಜಿ.ಎಲ್. ಸ್ವಾಮಿ

---

* ಖಾವಿಮನೆ, ಅಣ್ಣಯ್ಯರೆಡ್ಡಿ ಲೇಔಟ್, ಒನೇ ಫೇಸ್
ಜಯನಗರ, ಬೆಂಗಳೂರು - ೫೬೦ ೦೭೮

ಮುಂತಾದವರು ಭಾಗವಹಿಸಿದ್ದರು. ಅಂದು ಕಾರ್ಯಕ್ರಮದಲ್ಲಿ ಪ್ರೊ. ಎಂ.ಡಿ. ನಂಜುಂಡ ಸ್ವಾಮಿಯವರು ಪುರೋಹಿತಶಾಹಿಯನ್ನು ತೀವ್ರರೀತಿಯಲ್ಲಿ ಖಂಡಿಸಿದ್ದರು. ಕನ್ನಡ ಸಾಯುತ್ತಿರುವುದು ಸಂಸ್ಕೃತೀಕರಣದಿಂದ ಎಂದು ಪ್ರಸ್ತಾಪಿಸಿದ್ದರು. ಅಂದು ಕಾರ್ಯಕ್ರಮ ಮುಗಿದ ಮೇಲೆ ಖಾಸಗಿಯಾಗಿ ಚರ್ಚೆಮಾಡುತ್ತಿರುವ ಸಂದರ್ಭದಲ್ಲಿ ತುಂಬ ನೊಂದುಕೊಂಡು "ಏನಪ್ಪ, ಈ ಬ್ರಾಹ್ಮಣ ಅಬ್ರಾಹ್ಮಣ ಅನ್ನೋದು ಕೇವಲ ತಮಿಳು ನಾಡಿನಲ್ಲಿ ಮಾತ್ರ ಎಂದು ತಿಳಿದಿದ್ದೆ. ಆದರೆ ಆ ರೋಗ ಇಲ್ಲಿಯೂ ವ್ಯಾಪಕವಾಗಿದೆ" ಎಂದಾಗ ನಿಟ್ಟೂರುರವರು "ಇಂಥದನ್ನೆಲ್ಲ ನೀವು ನೆಮ್ಮದಿಯಿಂದ ಸ್ವೀಕರಿಸಬೇಕು. ಒಂದು ಸಮಾಜದಲ್ಲಿ ನಾನಾ ರೀತಿಯ ಸ್ಥಿತ್ಯಂತರಗಳಾಗುತ್ತಿರುವ ಸಮಯದಲ್ಲಿ ಈ ರೀತಿಯ ಚರ್ಚೆ ಮತ್ತು ಅಭಿಪ್ರಾಯ ಮಂಡನೆ ಸ್ವಾಭಾವಿಕ ಎಂದು ಸಮಾಧಾನದ ಮಾತನ್ನು ಹೇಳಿದ್ದರು. ಆದರೆ ಜಿ.ಜಿ.ಎಲ್. ಸ್ವಾಮಿಯವರು ತುಂಬ ಭಾವನಾತ್ಮಕ ವ್ಯಕ್ತಿಯಾಗಿದ್ದರಿಂದ ನಿಟ್ಟೂರುರವರ ಮಾತಿನಿಂದ ಸಮಾಧಾನಗೊಂಡಿರಲಿಲ್ಲ. ಅವರ ಮನೆಗೆ ಎರಡು ಮೂರು ಬಾರಿ ಹೋದಾಗಲೆಲ್ಲ ಅಸಮಾಧಾನವನ್ನು ವ್ಯಕ್ತಪಡಿಸಿದ್ದರು.

'ಕನ್ನಡ ಉಳಿಸಿ' ಕಾರ್ಯಕ್ರಮದಿಂದ ದೂರನಾದೆ. ಮುಂದೆ ಗೋಕಾಕ್ ಚಳವಳಿ ನಿಜವಾಗಿಯೂ ಕನ್ನಡ ಉಳಿಸುವ ಹೋರಾಟವಲ್ಲ ಎಂದು ನಾವು ಒಂದಷ್ಟು ಗೆಳೆಯರು ಅದರ ವಿರುದ್ಧವಾಗಿ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದೆವು. ಅದರಲ್ಲಿ ಯು.ಆರ್. ಅನಂತಮೂರ್ತಿ, ಕಿ.ರಂ. ನಾಗರಾಜ್, ಡಿ.ಆರ್.ನಾಗರಾಜ್ ಮುಂತಾದವರೂ ಇದ್ದರು. ಈ ಸಂದರ್ಭದಲ್ಲಿ ಬೆಂಗಳೂರಿನ ಗೋಖಲೆ ಸಾರ್ವಜನಿಕ ಸಂಸ್ಥೆಯಲ್ಲಿ ನ್ಯಾಯಮೂರ್ತಿ ನಿಟ್ಟೂರು ಅವರನ್ನು ಸಾಕಷ್ಟು ಬಾರಿ ಭೇಟಿಯಾಗಿದ್ದೇನೆ. ತುಂಬ ಶಿಸ್ತಿನ ಮತ್ತು ಕಾರ್ಯದಕ್ಷತೆಯ ವ್ಯಕ್ತಿತ್ವವನ್ನು ಹೊಂದಿರುವಂಥವರು.

ತಮ್ಮ ಸುತ್ತಲೂ ಏನು ನಡೆಯುತ್ತಿದೆ ಎಂಬುದರ ಬಗ್ಗೆ ಸದಾ ತೆರೆದುಕೊಂಡು ಇಟ್ಟುಕೊಂಡು ಬಂದವರು. ಇದಕ್ಕೆ ಅವರು ಗೋಖಲೆ ಸಾರ್ವಜನಿಕ ಸಂಸ್ಥೆಯಲ್ಲಿ ಏರ್ಪಡಿಸುತ್ತಿದ್ದ ಕಾರ್ಯಕ್ರಮಗಳೇ ಸಾಕ್ಷಿ. ಹಾಗೆಯೇ ಅವರು ಬೆಂಗಳೂರಿನ ಯಾವುದೇ ಸಭೆ ಸಮಾರಂಭಗಳಲ್ಲಿ ಭಾಗವಹಿಸುತ್ತಿದ್ದುದು ತಮ್ಮ ವ್ಯಕ್ತಿತ್ವವನ್ನು ಲವಲವಿಕೆಯಿಂದ ಇಟ್ಟುಕೊಳ್ಳಬೇಕು ಎಂಬ ಕಾರಣಕ್ಕಾಗಿ. ಒಬ್ಬ ಗಾಂಧಿವಾದಿಗೆ ಮಾತ್ರ ಈ ರೀತಿಯ ಕಾರ್ಯವೈಖರಿ ಸಾಧ್ಯ. ಯಾಕೆಂದರೆ ಎಷ್ಟೋ ಬಾರಿ ಯೋಚಿಸಿದ್ದೇನೆ. ಈ ಹಿರಿಯ ಚೈತನ್ಯ ಕಾರ್ಯಕ್ರಮದ ಮುದ್ರಿತ ಸಮಯಕ್ಕೆ ಸರಿಯಾಗಿ ಬಂದು ಕೂರುತ್ತಿದ್ದವರು. ಎಷ್ಟೋ ಬಾರಿ ಇವರು ಬಂದು ಕೂತ ಮೇಲೆ ಅರ್ಧಗಂಟೆ ಒಂದು ಗಂಟೆ ತಡವಾಗಿ ಕಾರ್ಯಕ್ರಮ ಪ್ರಾರಂಭವಾಗುತ್ತಿದ್ದರೂ; ಒಂದು ರೀತಿಯ ಸ್ಥಿತ ಪ್ರಜ್ಞೆ ಮನಸ್ಥಿತಿಯಿಂದ

ತಮ್ಮ ಹಾಜರಿಯನ್ನು ಕಂಡುಕೊಂಡು ಬಂದವರು. ಹಾಗೆಯೇ ಕಾರ್ಯಕ್ರಮ ಮುಗಿಯು ವವರೆವಿಗೂ ಅಕ್ಕಪಕ್ಕ ಚಲಿಸದೆ ಕೇಳಿಸಿಕೊಳ್ಳುತ್ತಿದ್ದವರು. ನಾವು ಎಷ್ಟೋ ಬಾರಿ ಗೆಳೆಯರು ಇದನ್ನು ಕುರಿತು ಮಾತಾಡಿಕೊಂಡಿದ್ದೇವೆ. ಒಬ್ಬ ಹಿರಿಯ ನ್ಯಾಯಮೂರ್ತಿಯಾಗಿ ತಮ್ಮ ವೃತ್ತಿಜೀವನದಿಂದಲೇ ಈ ರೀತಿಯ ಆದರ್ಶ ಸಮಯ ಪ್ರಜ್ಞೆಯನ್ನು ಬೆಳೆಸಿಕೊಂಡು ಬಂದಿರಬಹುದು ಎಂದು ಯೋಚಿಸಿದ್ದೇನೆ.

ಒಂದು ಅಪರೂಪದ ಕಾರ್ಯಕ್ರಮ ಈಗಲೂ ನೆನಪಿದೆ. ನಾನು 'ಪಿಯುಸಿ ಎಲ್' ಮಾನವ ಹಕ್ಕುಗಳ ಹೋರಾಟ ಸಂಘಟನೆಯ ಪ್ರಧಾನ ಕಾರ್ಯದರ್ಶಿಯಾಗಿದ್ದೆ. ಆಗ ಮಾನವ ಹಕ್ಕುಗಳ ಹೋರಾಟದ ಕೆಲವು ಮೂಲಭೂತ ಸಮಸ್ಯೆಗಳ ಬಗ್ಗೆ ಒಂದು ಚರ್ಚೆಯನ್ನು ಏರ್ಪಡಿಸಿದ್ದೆವು. ಅದರಲ್ಲಿ ನ್ಯಾಯಮೂರ್ತಿ ನಿಟ್ಟೂರುರವರು, ಕುಲದೀಪನಾಯರ್, ಸಿ.ಜಿ.ಕೆ. ರೆಡ್ಡಿ ಮತ್ತು ಹಿರಿಯ ಮಾನವ ಹಕ್ಕುಗಳ ಹೋರಾಟಗಾರ ಎಂ.ಎಂ. ಥಾಮಸ್ ಮುಂತಾದವರು ಭಾಗವಹಿಸಿದ್ದರು. ಎಂ.ಎಂ. ಥಾಮಸ್‌ರವರು ಆಗ ತುಂಬ ಸುದ್ದಿಯಲ್ಲಿದ್ದಂಥವರು. ನಾಗಾಲ್ಯಾಂಡಿನ ರಾಜ್ಯಪಾಲರಾಗಿ ಕೇಂದ್ರದ ವಿರುದ್ಧ ತಮ್ಮ ಅಭಿಪ್ರಾಯವನ್ನು ತೀವ್ರ ರೀತಿಯಲ್ಲಿ ವ್ಯಕ್ತಪಡಿಸಿ ರಾಷ್ಟ್ರದಾದ್ಯಂತ ವಿಚಾರವಾದಿಗಳ ಮನಸೆಳೆದವರು. ಇದರ ಜೊತೆಗೆ ೧೯೭೬ರಲ್ಲಿ ಕೇರಳದ ಕೊಚ್ಚಿನ್‌ನಲ್ಲಿ 'ತುರ್ತುಪರಿಸ್ಥಿತಿ ವಿರೋಧಿ ಲೇಖಕರ' ಸಮ್ಮೇಳನದಲ್ಲಿ ಅವರ ಭಾಷಣ ಕೇಳಿ ರೋಮಾಂಚಿತನಾಗಿದ್ದೆ. ಆ ಸಮ್ಮೇಳನವನ್ನು ಉದ್ಘಾಟಿಸಿದವರು ನಮ್ಮ ಕೆ. ಶಿವರಾಮ ಕಾರಂತರು. ಕಾರಂತರ ಉದ್ಘಾಟನಾ ಭಾಷಣ ಕೇಳಿ ಮೆಚ್ಚಿ ಹಿರಿಯ ರಾಜಕೀಯ ಮುತ್ಸದ್ದಿ ಮತ್ತು ಚಿಂತಕ ಇ.ಎಂ.ಎಸ್ ನಂಬೂದರಿಪಾದ್‌ರವರು "ನಮ್ಮ ನಡುವೆ ಇಂಥ ಲೇಖಕರೂ ಇದ್ದಾರೆಂಬುದು ಸಂತೋಷದ ವಿಷಯ" ಎಂದು ತಮ್ಮ ಮೆಚ್ಚಿಗೆಯನ್ನು ವ್ಯಕ್ತಪಡಿಸಿದ್ದರು.

ನ್ಯಾಯಮೂರ್ತಿ ನಿಟ್ಟೂರುರವರ ಭಾಷಣವನ್ನು ಕೇಳಿ ಎಂ.ಎಂ. ಥಾಮಸ್‌ರವರು ಪುಳಕಿತರಾಗಿದ್ದರು. ಸಭೆಯ ನಂತರ "ಯಾರು ಈ ನಿಟ್ಟೂರು ಶ್ರೀನಿವಾಸರಾವ್ ಅವರು, ಏನು ಅವರ ಹಿನ್ನೆಲೆ" ಎಂದು ನಮ್ಮಿಂದ ಮಾಹಿತಿಯನ್ನು ಪಡೆದಿದ್ದರು. ಯಾಕೆಂದರೆ ಇಂದಿಗೂ ತಮ್ಮ ಆರೋಗ್ಯಪೂರ್ಣ ಚಿಂತನೆಯ ನೆಲೆಗಟ್ಟನ್ನು ಕಳೆದುಕೊಂಡವರಲ್ಲ. ಕೆಲವು ಬಾರಿ ಇವರ ಜೊತೆ ಖಾಸಗಿಯಾಗಿ ಕೂತು ಮಾತಾಡುವಾಗ ಎಷ್ಟೊಂದು ಸಾಂಸ್ಕೃತಿಕ ಒಳನೋಟಗಳು ಬಂದು ಹೋಗಿರುತ್ತವೆ ಅನ್ನಿಸುತ್ತದೆ. ಇದರ ಜೊತೆಗೆ ತಮ್ಮ ಚಿಂತನೆಯ ಲವಲವಿಕೆಗೆ ಪೂರಕವಾದ ಹಾಸ್ಯಪ್ರಜ್ಞೆಯನ್ನು ಜೀವನದುದ್ದಕ್ಕೂ ಕಾಪಾಡಿಕೊಂಡು ಬಂದವರು. ಮೂರು ನಾಲ್ಕು ವರ್ಷಗಳ ಹಿಂದೆ ಪ್ರಸಿದ್ಧ ಕಲಾವಿದ ಆರ್.ಎಂ.

ಹಡಪದ್‌ರವರಿಗೆ ಪ್ರತಿಷ್ಠಿತ ವೆಂಕಟಪ್ಪ ಪ್ರಶಸ್ತಿ ಬಂದಾಗ ಅವರಿಗೆ ಆತ್ಮೀಯರಾದ ಹೆಚ್.ಆರ್. ದಾಸೇಗೌಡ ಮುಂತಾದವರು ಒಂದು ಔತಣ ಕೂಟವನ್ನು ಬೆಂಗಳೂರಿನ ಹೋಟೆಲ್ ಜನಾರ್ಧನದಲ್ಲಿ ಏರ್ಪಡಿಸಿದ್ದರು. ಅಂದು ಪ್ರೊ. ಜಿ.ಎಸ್. ಶಿವರುದ್ರಪ್ಪ, ಜಿ.ನಾರಾಯಣ, ನಿಟ್ಟೂರುರವರು ಮತ್ತು ನಾನು ಒಂದೇ ಟೇಬಲ್‌ನಲ್ಲಿ ಕೂತಿದ್ದೆವು. ೯೭ ವರ್ಷಗಳಿಗೂ ಮೇಲ್ಪಟ್ಟಿರುವ ನಿಟ್ಟೂರು ಶ್ರೀನಿವಾಸರಾವ್‌ರವರು ಒಂದೂವರೆ ಮಸಾಲೆದೋಸೆಯನ್ನು ತಿಂದರು. (ಅರ್ಧ ನನಗೆ ಕೊಟ್ಟಿದ್ದರು) ಜೊತೆಗೆ ಅನ್ನ ರಸ, ಮಜ್ಜಿಗೆ ಅನ್ನವನ್ನು ಆರಾಮವಾಗಿ ತಿಂದು ತಮ್ಮ ಆರೋಗ್ಯದ ಚೈತನ್ಯವನ್ನು ವ್ಯಕ್ತಪಡಿಸಿದ್ದರು. ಅವರು ಊಟ ಮಾಡುತ್ತಿದ್ದ ಕ್ರಮ ಕಂಡು ಮಾಸ್ತಿಯವರ ಜೊತೆ ಊಟಮಾಡಿದ ಘಟನೆ ನೆನಪಿಗೆ ಬಂತು. ಹಾಗೆಯೇ ಒಂದೆರಡು ವರ್ಷಗಳ ಹಿಂದೆ ಹಿರಿಯ ಸಾಹಿತಿ ಪ್ರೊ. ಎ.ಎನ್. ಮೂರ್ತಿರಾಯರ ಜೊತೆ ಬೆಳಗ್ಗೆ ವಾಕ್ ಮಾಡುತ್ತಿದ್ದಾಗ ಅವರ ಊಟದ ಬಗ್ಗೆ ಪ್ರಸ್ತಾಪಿಸಿದ್ದೆ. "ಆರಾಮವಾಗಿ ಅನ್ನಸಾರು ಊಟ ಮಾಡುವೆ" ಎಂದಿದ್ದರು. ಇದನ್ನು ನಿಟ್ಟೂರು ಅವರಿಗೆ ಊಟ ಮಾಡುವಾಗ ನೆನಪು ಮಾಡಿದಾಗ ನಗುತ್ತ ತಮ್ಮ ಕಾಲದ ಕೆಲವು ತಿಂಡಿಗಳ ಸ್ವಾರಸ್ಯವನ್ನು ಹೇಳಿದ್ದರು.

ನ್ಯಾಯಮೂರ್ತಿ ನಿಟ್ಟೂರುರವರ ಸೌಜನ್ಯ ಮತ್ತು ವಿನಯಶೀಲತೆ ನಮ್ಮ ಕಾಲ ಘಟ್ಟದ ಬಹುಪಾಲು ಮಂದಿಗೆ ಮಾದರಿಯಾಗಿರುವಂಥದ್ದು. ಕಳೆದ ವರ್ಷ 'ಶೂದ್ರ'ದ 'ಮಾನವ ಧರ್ಮ ಚಾವಡಿ' ಉದ್ಘಾಟನೆಯ ಕಾರ್ಯಕ್ರಮಕ್ಕೆ ಸಮಯಕ್ಕೆ ಸರಿಯಾಗಿ ಬಂದು ಮತ್ತೊಂದು ಕಾರ್ಯಕ್ರಮಕ್ಕೆ ಹೋಗಿ ಅರ್ಧ ಗಂಟೆಯೊಳಗೆ ಬರುವೆ ಎಂದು ಹೇಳಿ ಹೋದರು. ಅರ್ಧಗಂಟೆಯಲ್ಲಿ ಒಂದು ಭಾಗವಹಿಸಿದರು. ಹಾಗೆಯೇ ಇತ್ತೀಚೆಗೆ 'ನೆಲದ ಮಾತು' ಪತ್ರಿಕೆಯ ಬಿಡುಗಡೆಯ ಸಂದರ್ಭದಲ್ಲಿ ಬೆಂಗಳೂರಿನ ವೈ.ಎಂ.ಸಿ.ಎ.ಯ ಸಭಾಂಗಣದಲ್ಲಿ ತಮ್ಮ ನೂರು ವರ್ಷಗಳ ದೀರ್ಘಕಾಲದ ಏರುಪೇರುಗಳನ್ನು ಹೊತ್ತು ಬಂದ ಸಾಕ್ಷಿ ಪ್ರಜ್ಞೆಯಾಗಿ ನಮ್ಮ ಮುಂದೆ ಕೂತಿದ್ದರು. ಆಗ ಹಿರಿಯರಾದ ಡಿ.ಕೆ. ಚೌಟಾ ಅವರಲ್ಲಿ "ಸರ್, ನಿಟ್ಟೂರುರವರು ಇಂದು ಸಾಂಕೇತಿಕವಾಗಿ ಪುಷ್ಪಗುಚ್ಛ ನೀಡಿ ಗೌರವಿಸೋಣ ಎಂದು ಕೇಳಿದೆ. ಅದಕ್ಕೆ ಅವರು "ಅದು ನಾವು ಮಾಡಬೇಕಾದ ಕೆಲಸ" ಎಂದು ಹೇಳಿದಾಗ ನನ್ನ ಪ್ರಾಸ್ತಾವಿಕ ಭಾಷಣದಲ್ಲಿ ನಿಟ್ಟೂರು ಅವರ ದೀರ್ಘ ಬದುಕಿನ ಸಾಂಸ್ಕೃತಿಕ ಹಿರಿಮೆಯನ್ನು ಕುರಿತು ನಾಲ್ಕು ಮಾತಾಡಿದೆ ಮತ್ತು ಹಿರಿಯ ಗಾಂಧಿವಾದಿ, ಅರ್ಥಶಾಸ್ತ್ರಜ್ಞ ಮತ್ತು ದಕ್ಷಿಣ ಆಫ್ರಿಕಾದಲ್ಲಿ ಭಾರತದ ರಾಯಭಾರಿಯಾಗಿದ್ದ ಎಲ್.ಸಿ. ಜೈನ್‌ರವರ ಮೂಲಕ ಸಾಂಕೇತಿಕ ಗೌರವವನ್ನು ಅರ್ಪಿಸಿದೆವು. ಆಗ ಉಲ್ಲಾಸ್ ಕಾರಂತರು, ಸಿರಿಗೆರೆಯ ಪಂಡಿತಾರಾಧ್ಯ ಸ್ವಾಮಿಗಳು, ರಾಮಚಂದ್ರ ಗುಹಾರವರು ತಮ್ಮ ಗೌರವವನ್ನು

ಸೂಚಿಸಿದರು. ನನ್ನ ಬದುಕಿನಲ್ಲಿ ಇದೂ ಒಂದು ಶ್ರೀಮಂತ ಅನುಭವ ಎಂದು ಸದಾ ಭಾವಿಸುವೆ. ಯಾಕೆಂದರೆ ಈ ರೀತಿಯ 'ನೆಲದ ಮಾತು'ಗಳ ನಡುವೆ ಯಾರ್‍ಯಾರಿಗೊ, ಏನೇನೊ ಅನುಭವಗಳನ್ನು ತುಂಬುತ್ತ 'ನನ್ನ ಬದುಕಿನ ರೀತಿ ಈ ರೀತಿಯದ್ದು' ಎಂದು ಗೆರೆ ಎಳೆದು ಮತ್ತೆ ಮತ್ತೆ ನೋಡಿಕೊಳ್ಳುವ ರೀತಿಯಲ್ಲಿ ಇತಿಹಾಸಕ್ಕೆ ಕೊಟ್ಟಿದ್ದಾರೆ. ಈಗಲೂ ಮಹಾಭಾರತದ ಕೃಷ್ಣನ ಅಥವಾ ಗಾಂಧೀಜಿಯವರ ನಗುವಿನ ರೀತಿಯಲ್ಲಿ ತಮ್ಮ ನಡುವೆ ಹಸನ್ಮುಖಿಯಾಗಿ ಓಡಾಡಿಕೊಂಡಿದ್ದಾರೆಂಬುದು ಸಂತೋಷದ ವಿಷಯ.



## ವಿಕಾಸವಾದ, ನಿಟ್ಟೂರು ಹಾಗೂ ನೂರು

. . . . . . . . . . . . . . . . . . . . . ✍ *ಮಹಾಬಲಮೂರ್ತಿ ಕೊಡ್ಲೆಕೆರೆ**

ಪಾದರಸದಂತೆ ಸದಾ ಚುರುಕಾಗಿ ಓಡಾಡಿಕೊಂಡಿರುವ ಅನೇಕರು ನಮಗೆ ಗೊತ್ತು. ಇಂಥವರಲ್ಲಿ ಕೆಲವರು ತಮ್ಮ ಒಡನಾಟಕ್ಕೆ ದೊರಕಿದ ಗೆಳೆಯರನ್ನೂ ಪಾರಜವನ್ನಾಗಿ ಗುಣ ಪಡೆದಿರುತ್ತಾರೆ. ಇಲ್ಲಾ ಇವರನ್ನೂ ಪಾರಜವನ್ನಾಗಿಸುತ್ತೇನೆ ಎಂಬ ಹಂಬಲ ಹೊಂದಿರುತ್ತಾರೆ. ಈ ವರ್ಗಕ್ಕೆ ಸುಂದರ ಪ್ರಕಾಶನದ ಗೆಳೆಯ ಗೌರಿಸುಂದರ್ ಸೇರಿದ್ದಾರೆ ಎಂಬುದು ನನ್ನ ಗ್ರಹಿಕೆ.

ನಿಟ್ಟೂರು ಶ್ರೀನಿವಾಸರಾಯರ ಬಗೆಗೆ ಒಂದು ಲೇಖನ ಬರೆದುಕೊಡಿ ಎಂದು ಅವರು ಆಗ್ರಹಿಸಿದ್ದು ಸುಮಾರು ಆರು ತಿಂಗಳ ಹಿಂದೆ. ಆನಂತರ ಅವರು ಇನ್ನಿತರ ಅನೇಕ ಚಟುವಟಿಕೆ ಗಳಲ್ಲಿ ತೊಡಗಿಕೊಂಡಿದ್ದರು. ಅನೇಕ ಕಿರುತೆರೆಯ ಚಿತ್ರ ಚಟುವಟಿಕೆಗಳು, ಡಾಕ್ಯುಮೆಂಟರಿ ಚಿತ್ರಗಳಲ್ಲಿ ಅವರು ಮುಳುಗಿ ಹೋಗಿದ್ದರಿಂದ, ನಿಟ್ಟೂರರ ಬಗೆಗೆ ಲೇಖನ ಬರೆಯುವ ಕೆಲಸ ತಪ್ಪಿದಂತಾಯ್ತು ಎಂದು ಸನ್ಮಾನ್ಯ ನಿಟ್ಟೂರು ಶ್ರೀನಿವಾಸರಾಯರ ಅದೃಷ್ಟದ ಬಗೆಗೆ ನನಗೆ ಖುಷಿ ಪಡು ವಂತಾಗಿತ್ತು.

ಆದರೆ ಮತ್ತೆ ವಾರದ ಹಿಂದೆ ಗೌರಿಸುಂದರ್, "ಲೇಖನ ಬರೆದದ್ದು ಎಲ್ಲಿಟ್ಟಿದ್ದೀರಿ, ಸಂಜೆ ತಂದು ಕೊಡಿ" ಎಂದು ಹೇಳಿದಾಗ - "ಅರೆ, ಪುಸ್ತಕದ ಎಲ್ಲ ಕೆಲಸಗಳೂ ಮುಗಿದಿರ

---

* ೧೦೧೦/೧೧, ೧೨ನೇ ಮುಖ್ಯರಸ್ತೆ
ಹನುಮಂತನಗರ, ಬೆಂಗಳೂರು - ೫೬೦ ೦೧೯

ಬೇಕಲ್ಲವೆ'' ಎಂದು ಕೇಳಿದ್ದೆ. ಒಂದು ಪ್ರಶ್ನೆಗೆ ಸುಂದರ್ ಉತ್ತರ ಸಾಮಾನ್ಯವಾಗಿ ಇನ್ನೊಂದು ಪ್ರಶ್ನೆಯ ಬಾಣದೊಂದಿಗೆ ಹುಟ್ಟು ಪಡೆಯುತ್ತದೆ. ''ನಿಮ್ಮ ಲೇಖನದೊಂದಿಗೆ ಅದು ಮುಗಿಯುತ್ತದೆ'' ಎಂದು ಹೇಳಿದರು. ಅದು ಅವರ ಪ್ರೀತಿ. ಕೇವಲ ಕಥೆ, ಕವನ ಇನ್ನೂ ಓದುಗರನ್ನು ಕಾಡಲೇಬೇಕು ಎಂಬ ಉಮೇದಿ ಹತ್ತಿದರೆ ಅಪರೂಪಕ್ಕೆ ಕಾದಂಬರಿ ಬರೆದುಕೊಂಡು ನಿರುಪದ್ರವಿಯಾಗಿದ್ದ ನನ್ನನ್ನೀಗ ಎಡಬಿಡದೆ ಕಾಡಿ ಗೌರಿಸುಂದರ್ ಕೆಲವು ಲೇಖನಗಳನ್ನು ಬರೆಸಿದ್ದಾರೆ. ಈಗ ಇದು ಒಂದು.

ಇದರ ಅರ್ಥ ನಿಟ್ಟೂರು ಶ್ರೀನಿವಾಸರಾಯರು ಕುರಿತು ಬರೆಯಬಾರದು ಎಂಬುದು ನನ್ನ ನಿಲುವಲ್ಲ. ಆದರೆ, ನನ್ನ ಸಮಸ್ಯೆ ಇದ್ದದ್ದು ನಿಟ್ಟೂರರ ಕುರಿತು ಒಳ್ಳೆಯ ಒಂದು ಲೇಖನವನ್ನು ನನ್ನಿಂದ ಬರೆಯಲು ಸಾಧ್ಯವಾದೀತೆ ಎಂಬ ಅನುಮಾನದಲ್ಲಿ ನಾನು ಎಂದೂ ಅವರನ್ನು ಹತ್ತಿರದಿಂದ ಕಂಡಿದ್ದಿಲ್ಲ. ಅವರನ್ನು ಕಂಡಾಗ ಪ್ರಥಮವಾಗಿ ನನಗೆ ನೆನಪಾದದ್ದು ನನ್ನ ಅಜ್ಜ. ಇದು ಹತ್ತು ವರ್ಷಗಳ ಹಿಂದಿನ ಮಾತು ನನ್ನ ಅಜ್ಜ ಹಾಗೂ ನಿಟ್ಟೂರು ಶ್ರೀನಿವಾಸರಾಯರದು ಒಂದೇ ವಯಸ್ಸು. ನಮ್ಮಜ್ಜ ಬದುಕಿ ಇದ್ದಿದ್ದರೆ ಅವರಿಗೂ ಈಗ ನೂರಾಗಿರುತ್ತಿತ್ತು ವಯಸ್ಸು.

ಆದರೆ ನಾನು ನಿಟ್ಟೂರು ಅವರನ್ನು ಪ್ರಥಮವಾಗಿ ನೋಡಿದ ದಿನದಿಂದ ಸುಮಾರು ಆರೇಳು ತಿಂಗಳು ಹಿಂದೆ ನಮ್ಮಜ್ಜ ತೀರಿಕೊಂಡಿದ್ದರು. ನಮ್ಮಜ್ಜ ಕಣ್ಣುಗಳನ್ನು ಕಳಕೊಂಡಿದ್ದರು ಎಂಬುದನ್ನು ಬಿಟ್ಟರೆ ಬಣ್ಣ, ಎತ್ತರ, ಆಕಾರಗಳಲ್ಲಿ ಬಹಳಷ್ಟು ನಿಟ್ಟೂರು ಶ್ರೀನಿವಾಸರಾಯರನ್ನು ಹೋಲುತ್ತಿದ್ದರು. ರವೀಂದ್ರ ಕಲಾಕ್ಷೇತ್ರದ ಲಾಂಜಿನಲ್ಲಿ ಅಂದು ಶ್ರೀನಿವಾಸರಾಯರು ಕುಳಿತಿದ್ದರು. ಒಂದು ಕ್ಷಣ ಆಶ್ಚರ್ಯವಾಯ್ತು. ''ಅರೆ, ಅಜ್ಜ' ಎಂದು ಮನಸ್ಸಿನಲ್ಲಿ. ಮರುಕ್ಷಣ ಮತ್ತೆ ವಾಸ್ತವಕ್ಕೆ ಬಂದಿದ್ದೆ. ಕಾರ್ಯಕ್ರಮವೊಂದಕ್ಕೆ ಅವರು ಅಲ್ಲಿಗೆ ಬಂದಿದ್ದರು.

ಸುಮಾರು ನಾಲ್ಕು ವರ್ಷಗಳ ಹಿಂದೆ ಬೆಂಗಳೂರಿನ ಪ್ರಮುಖ ಪ್ರಕಾಶನ ಸಂಸ್ಥೆಯ ಕನ್ನಡ ವಿಭಾಗವನ್ನು ನೋಡಿಕೊಳ್ಳುತ್ತಿದ್ದ ಮಿತ್ರರೊಬ್ಬರು ನನ್ನನ್ನು ಕೇಳಿದ್ದರು ''ಮಹಾಬಲಮೂರ್ತಿ, ನಿಟ್ಟೂರು ಶ್ರೀನಿವಾಸರಾಯರ ಬಗೆಗೆ ಒಂದು ಪುಸ್ತಕವನ್ನು ಬರೆಯುವಿರಾ ನಮ್ಮ ಸಂಸ್ಥೆಗಾಗಿ'' ಎಂದು. ಈ ಸಂಸ್ಥೆಯವರು ಹೊರತರುವ ಪುಸ್ತಕಗಳಿಗೆ ಓದುಗ ವಲಯದಲ್ಲಿ ಬೇಡಿಕೆ ಇದೆ. ಹೊಸದೊಂದನ್ನು, ಹೊಸ ಪ್ರಕಾರ ಒಂದನ್ನು ನಿಭಾಯಿಸುವ, ನಿಭಾಯಿಸಿದ ಅಷ್ಟಿಷ್ಟು ಹೆಸರೂ ನನಗೆ ದೊರಕುತ್ತಿತ್ತು.

ಆದರೆ ಮುಖ್ಯವಾದ ವಿಷಯ ನನ್ನ ನಿಲುಕಿಗೆ ಸಿಗದಂತಿತ್ತು. ನಿಟ್ಟೂರರ ಜತೆಗೆ ಒಂದಿಷ್ಟಾದರೂ ಒಡನಾಟವಿರದೆಯೆ ನಾನು ಅದೆಂತು ಒಂದು ಪುಸ್ತಕವನ್ನು ತರಲು

ಸಾಧ್ಯ ಅವರ ಮೇಲೆ ಎಂಬುದು ನನ್ನ ದುಃಖ. ಪ್ರಕಾಶನ ಸಂಸ್ಥೆಯ ಮಿತ್ರರು "ಅದಕ್ಕೇನಂತೆ? ಒಂದಿಷ್ಟು ಹೊತ್ತು ಅವರ ಜತೆ ಕಳೆಯಿರಿ. ಅವರೊಡನೆ ಮಾತನಾಡಿ, ಮಾತುಗಳನ್ನೆಲ್ಲ ಟೇಪು ಮಾಡಿಕೊಡುವ ಜವಾಬ್ದಾರಿ ನನಗಿರಲಿ" ಎಂದು ಹೇಳಿದ್ದರು. ಅವರ ಮಾತಿನಲ್ಲೂ ಅರ್ಥವಿತ್ತು. ಆದರೆ "ಆದರೂ, ....." ಎಂಬುದು ನನ್ನ ಒಳಗಿನ ಕೊರಗು. ಆ ಸಮಯದಲ್ಲಿ ನಾವಿಬ್ಬರೂ ಅವರ ವಾಹನದಲ್ಲಿ ಮೆಜೆಸ್ಟಿಕ್ ಭಾಗದಿಂದ ಅರಳೆಪೇಟೆಯ ಕಡೆಗೆ ನುಗ್ಗಬೇಕಾದ ವೃತ್ತದಲ್ಲಿ-ಟ್ರಾಫಿಕ್ ಸಿಗ್ನಲ್ಸ್‌ನ ಹಸಿರು ದೀಪಕ್ಕಾಗಿ ಕಾಯುತ್ತಿದ್ದ ಹೊತ್ತು. ಕಾಕತಾಳೀಯವಾಗಿತ್ತು ಹಸಿರಿಗಾಗಿನ ಈ ನಮ್ಮ ಬೇಡಿಕೆ. ಅಲ್ಲಿ ಹಸಿರೆನೋ, ಬಂತು. ಆದರೆ ಪುಸ್ತಕ ಬರೆಯಲಿಕ್ಕಾಗಿ ಒಪ್ಪಿಕೊಳ್ಳಲು ನನ್ನೊಳಗಿನ್ನೂ ಹಸಿರು ಹೊತ್ತಿಕೊಂಡಿರಲೇ ಇಲ್ಲ. 'ನಾನು ಯೋಚಿಸಿ ಹೇಳುತ್ತೇನೆ' ಎಂದಷ್ಟೇ ಗೆಳೆಯರ ಬಳಿ ಹೇಳಿದೆ.

ಆ ದಿನಗಳಲ್ಲಿ ಲಂಕೇಶರನ್ನು ನಾನು ಕಾಣುತ್ತಿದ್ದೆ. ವಾರದಲ್ಲಿ ಮೂರ್‍ನಾಲ್ಕು ದಿನಗಳಾದರೂ ದಿನದ ಒಂದೆರಡು ತಾಸುಗಳ ಕಾಲ ಅವರೊಂದಿಗೆ ಹರಟೆ, ಅವರ ಜತೆ ಜಗಳ, ಅವರ ಬಳಿ ಬೈಸಿಕೊಳ್ಳುವುದು ಇತ್ಯಾದಿ ಇದ್ದಿದ್ದೇ, ಲಂಕೇಶ್ ಅವರ ವ್ಯಕ್ತಿತ್ವ ಅವರೊಬ್ಬ ಅಸಾಮಾನ್ಯ ಲೇಖಕ, ಪ್ರತಿಕೋದ್ಯಮಿ ಎಂಬ ಚೌಕಟ್ಟಿಗಷ್ಟೇ ಸೀಮಿತವಾದುದಲ್ಲ. ಅದರಾಚೆಗೆ ಅವರು ಹಬ್ಬಿದ್ದರು. ನನ್ನಂಥವನಿಂದ ಬರೆಸುತ್ತಿದ್ದರು. ವೈಚಾರಿಕ ವ್ಯಾಖ್ಯೆ ವಿಸ್ತರಿಸಬಲ್ಲವರಾಗಿದ್ದರು. ಹೊಸ ಬಗೆಯ ಚಿಂತನೆಗೆ ಬೇರು ಒದಗಿಸಿದವರೇ ಅವರು. ನಮ್ಮಲ್ಲಿ ಅಡಿಗರು ವೈಎನ್ಕೆ, ಅನಂತಮೂರ್ತಿ, ಶಿವರುದ್ರಪ್ಪ, ನಾಡಿಗ ಇವರ ಜತೆಗಿನ ಒಡನಾಟದಿಂದಾಗಿ ನಮ್ಮಂಥ ಅನೇಕ ಲೇಖಕರು ತಮ್ಮ ಬರೆಯುವ ಕೆಲಸದಲ್ಲಿ ಹೊಸ ಉತ್ಸಾಹ ಸಂಪಾದಿಸುವಲ್ಲಿ ಅದೃಷ್ಟಶಾಲಿಗಳಾಗಿದ್ದಾರೆ ಎನ್ನಬಹುದು.

ಲಂಕೇಶರ ಜತೆ ನನ್ನ ಗೆಳೆಯರು ಪ್ರಸ್ತಾಪಿಸಿದ ನಿಟ್ಟೂರರ ಬಗೆಗಿದ್ದ ಪುಸ್ತಕದ ವಿಚಾರ ತಿಳಿಸಿದೆ. ತಿಳಿಯದವರ ಬಗೆಗೆ ನಾನು ಏನು ಬರೆಯಲಿ ಎಂಬ ನನ್ನ ಕಷ್ಟವನ್ನು ಹೇಳಿಕೊಂಡೆ.

ಇದಕ್ಕಾಗಿ ಯೋಚಿಸುವುದು ಬೇಡ, ನಿಟ್ಟೂರರ ಜತೆಗಿನ ಮಾತುಕತೆಗಳನ್ನೆಲ್ಲ ಟೇಪು ಮಾಡಿಕೊಡುವ ಸಂಬಂಧ ಅದ್ಭುತ ಜವಾಬ್ದಾರಿ ಎಂದು ಒಪ್ಪಿಕೊಂಡ ಗೆಳೆಯರ ಮಾತನ್ನು ತಿಳಿಸಿದೆ.

ಲಂಕೇಶರು ನೀನು ಇದಕ್ಕೆ ಒಪ್ಪಿಕೊಳ್ಳಬಹುದು ಎಂದರು. ನಿಟ್ಟೂರು ಶ್ರೀನಿವಾಸ ರಾಯರ ಬಗೆಗೆ ಅವರಿಗೆ ಅಪಾರವಾದ ಗೌರವವಿತ್ತು. ಮುಖ್ಯವಾಗಿ ಸರಳತೆ, ಸಜ್ಜನಿಕೆಯ

ಕುರಿತು ಹೇಳಿದರು. ನೀನು ಉತ್ತರ ಕರ್ನಾಟಕದಿಂದ ಬಂದವನು. ಹೀಗಾಗಿ ನಿಟ್ಟೂರರ ಬಗೆಗೆ ತಿಳಿಯದೇ ಹೋದದ್ದು ಆಶ್ಚರ್ಯವೇನಲ್ಲ ಎಂದು ಸಹಜ ಎಂಬಂತೆ ಹೇಳಿದರು. ಮುಖ್ಯವಾಗಿ ಅಂದು ಲಂಕೇಶ್, ಜಿ.ಪಿ. ರಾಜರತ್ನಂ ಅವರ ಬಗೆಗೆ ಹೆಚ್ಚು ಹೇಳುತ್ತ ಹೋದಂತಿದ್ದರೂ, ನ್ಯಾಯಾಂಗದ ಗೌರವ ನಿಟ್ಟೂರು ಶ್ರೀನಿವಾಸರಾಯರಂಥ ಸರಳ ಹಾಗೂ ಸಜ್ಜನಿಕೆಯ ಜನರಿಂದ ಎಂದೂ ಹಾಳಾಗಿ ಹೋಗಲು ಸಾಧ್ಯವಿಲ್ಲ ಎಂಬುದನ್ನು ಮುಖ್ಯವಾಗಿ ತಿಳಿಸಿದರು. ಸೂಕ್ಷ್ಮ ಏರ್ಪಾಡುಗಳು ಸಂಭವಿಸಿ ಒಂದಿಷ್ಟು ಆಡಂಬರ, ಗತ್ತು ಎಲ್ಲವನ್ನೂ ಹೊರಲೇಬೇಕಾದುದು ಪ್ರಸ್ತುತ ಕಾಲ ಘಟ್ಟದಲ್ಲಿ ಅನಿವಾರ್ಯವಾದರೂ ಸರಳತೆ, ಸಜ್ಜನಿಕೆಯನ್ನು ಮೀರಿ ವ್ಯಕ್ತಿ ವಿಕೃತಗೊಂಡರೆ ವ್ಯವಸ್ಥೆಯ ತಳಪಾಯಕ್ಕೆ ಶಿಥಿಲತೆ ತಪ್ಪಿದ್ದಲ್ಲ ಎಂಬಂಥ ಅರ್ಥದಲ್ಲಿ ಅಂದು ಲಂಕೇಶ್ ಮಾತನಾಡಿದರು. ಅಂದಿನ ಅವರ ಮಾತು, ಆ ದಿನಕ್ಕೆ ಭವಿಷ್ಯವಾಗಿದ್ದ ಸದ್ಯದ ವರ್ತಮಾನದ ಜತೆ ಇಟ್ಟು ನೋಡಿದಾಗ ನಿಟ್ಟೂರು ಶ್ರೀನಿವಾಸರಾಯರಂಥವರ ಸರಳತೆ, ಸಜ್ಜನಿಕೆಯಿಂದ ನ್ಯಾಯಾಂಗದ ಗೌರವ ಹೇಗೆ ಉಳಿದುಕೊಳ್ಳಬಲ್ಲದು ಎಂಬುದು ತನ್ನಷ್ಟಕ್ಕೇ ತಾನು ವಿದಿತ ಎಂಬುದಂತೂ ಸತ್ಯ.

ಆ ಹೊಸತರಲ್ಲೇ ನನಗೆ ರೂರಲ್ ಏರಿಯಾ ಸರ್ವೀಸ್ ಕಡ್ಡಾಯ ಎಂಬ ವಿಧಿಯಡಿ ಹೊಸಕೋಟೆಯ ಬಳಿಯ ಗ್ರಾಮವೊಂದಕ್ಕೆ ನನ್ನ ಬ್ಯಾಂಕ್ ಶಾಖೆಗೆ ವ್ಯವಸ್ಥಾಪಕನಾಗಿ ಹೋಗಬೇಕಾದದ್ದು ಅನಿವಾರ್ಯವಾದಾಗ ನನ್ನ ವೈಯಕ್ತಿಕ ಕೆಲವು ವ್ಯವಸ್ಥೆಗಳಲ್ಲಿ ಏರುಪೇರಾಗಿ ನಿಟ್ಟೂರರ ಬಗೆಗಿನ ಪುಸ್ತಕ ಬರೆಯುವ ಕೆಲಸ ನಾನು ಒಪ್ಪಿಕೊಳ್ಳಲಿಲ್ಲ. ನಾವು ಬ್ಯಾಂಕಿನ ಜನ ಬಹುತೇಕವಾಗಿ ಸೃಜನಶೀಲ ಕೆಲಸ ಕಾರ್ಯಗಳಲ್ಲಿ ಮುಳುಗಿ ಕೊಂಡಿರುವುದು ಕಷ್ಟದ ಕೆಲಸವಾಗುತ್ತದೆ. ಸಾಲ ಮೇಳ, ರಿಕವರಿ, ಡೆಪಾಸಿಟ್ ಮೊಬಿಲೈಸೇಶನ್ನು, ಕೋರ್ಟ್ ವಹಿವಾಟು, ಡಿಕ್ರಿ, ಎಸೆಟ್ಟು, ಇಯರ್ ಎಂಡ್ ಇತ್ಯಾದಿ ಆವರಣಗಳಲ್ಲಿ ಸದಾ ಬೇಯಲು ಇಟ್ಟ ಮೊಟ್ಟೆಯಂತೆ ಬಿಸಿ ಹಚ್ಚಿಟ್ಟ ನೀರಿನ ಪಾತಳಿಯಲ್ಲಿ ಬೇಯುತ್ತ ಇರುತ್ತೇವೆ. ಹೀಗಾಗಿ ನಿಟ್ಟೂರರ ಬಗೆಗೆ ಬರೆಯಬೇಕಿದ್ದ ಉತ್ತಮ ಅವಕಾಶದಿಂದ ನಾನು ಆಗ ದೂರ ಸರಿದೆ.

ನನಗೇ ಆಶ್ಚರ್ಯವೆಂಬಂತೆ ಇದೀಗ ಗೌರಿ ಸುಂದರ್, ನಿಟ್ಟೂರರ ಕುರಿತು ಒಂದು ಲೇಖನ ಬರೆದು ಕೊಡಿ ಎಂದು ಕೇಳಿದ ಮಾತು ಆ ಕ್ಷಣದ ಮಟ್ಟಿಗೆ ಒಂದು ಹೊಸ ಸಂವೇದನೆಯನ್ನು ಹುಟ್ಟಿಸಿತು. ಇದೀಗ ನಾನು ಅನೇಕ ಬಾರಿ ಶ್ರೀನಿವಾಸರಾಯರನ್ನು ಕಂಡಿದ್ದು, ಮಾತನಾಡಿಸಿದ್ದು ಇದೆ - ಅವರನ್ನು ಕಂಡಾಗಲೆಲ್ಲಾ ಸರಳತೆಯಿಂದ ಈ ಪ್ರಪಂಚದ ಎಷ್ಟೆಲ್ಲ ಸಮಸ್ಯೆಗಳಿಗೆ ಪರಿಹಾರಗಳಿವೆ ಎಂಬ ಕೋಳಿಯ ಮೊಟ್ಟೆ ಒಡೆದು ಹೊಸ ಆಶಯವನ್ನು ಹೊರಗೆ ಮೆತ್ತಗೆ ತಂದಿಡುವ ದೃಷ್ಟಿಕೋನ ಸ್ವಯಂಭುವಾಗಿ

ರೂಪಗೊಳ್ಳುತ್ತದೆಯೇ ಹೊರತೂ ಅದು ಅಂದುಕೊಂಡಷ್ಟು ಸಾಧ್ಯವಿರದ ಮಾತಾಗಿ ಮತ್ತೆ ಕ್ರಮೇಣ ನಿಷ್ಕ್ರಿಯಗೊಳ್ಳುತ್ತದೆ. ಅಂದರೆ ಅನೇಕ ಅಸಾಧ್ಯತೆಗಳನ್ನು ನಿರಾಕರಿಸಿ, ಸಾಧ್ಯತೆಯ ಮಾರ್ಗವನ್ನು ನಿರೂಪಿಸುವ ಅಸಾಮಾನ್ಯ ಬೋಧನೆ ನೀಡಲೆಂಬಂತೆ ನಿಟ್ಟೂರರಂಥವರು ಮುಖ್ಯವಾದ ಸ್ವರೂಪದಿಂದ ಸಾಮಾಜಿಕತೆಗೆ ಬದ್ಧರಾಗುತ್ತಾರೆ.

ಮುಖ್ಯವಾಗಿ ಪ್ರಪಂಚ ಇದೀಗ ಅನೇಕ ಸೀನಿಯರ್ ಸಿಟಿಝನ್‌ಗಳನ್ನು ತನ್ನ ಒಡಲಲ್ಲಿ ಭರಿಸಿಕೊಂಡಿದೆ. ಬಯಾಲಜಿಕಲ್ ಅಧ್ಯಯನದ ವ್ಯಾಪ್ತಿ ವಿಸ್ತೃತಗೊಂಡಂತೆ, ಮನುಷ್ಯನ ಹೊಸ ಸಂಶೋಧನೆಗಳು ಬದುಕಿನ ಅನೇಕ ವ್ಯಾಖ್ಯೆಗಳನ್ನು ಈಗ ಬದಲಿಸುತ್ತ ಹೊರಟದೆ. ಕಾಲದ ನಿರಂತರತೆಯಲ್ಲಿ ಮನುಷ್ಯ ತನ್ನ ಆಯುಷ್ಯದ ಮಿತಿಯನ್ನು ವೃದ್ಧಿಸಿಕೊಳ್ಳುತ್ತಿರುವ ಈ ಹಂತದಲ್ಲಿ ಅವನು ಹಿಂದೆ ಇದ್ದಿರದ ಹೊಸಹೊಸ ಜವಾಬ್ದಾರಿಯನ್ನು ಈಗ ನಿಭಾಯಿಸಬೇಕಾಗಿದೆ. ಈ ಘಟ್ಟದಲ್ಲಿ ಹಿಂದಿನ ತನ್ನ ಅನೇಕ ಜವಾಬ್ದಾರಿಗಳನ್ನು ಕೊಡವಿ ಹಾಕುವಂತೆಯೂ ಇಲ್ಲ. ಹಿಂದಿನ, ಇಂದಿನ ಅನೇಕ ಬಿಂದುಗಳನ್ನು ರೂಢಿಸುವ ಕೊಂಡಿಗಳು ಸದ್ಯ ಹೊಸ, ಹೊಸ ಆವರಣಗಳನ್ನು ಇರುವ ನಮ್ಮ ಸಂಸ್ಕೃತಿಗೆ ಒದಗಿಸಲು ನೆರವಾಗುತ್ತಿವೆಯೊ, ಅಥವಾ ಹಿಂದನದ್ದನ್ನೆಲ್ಲ ನಿರಾಕರಿಸಿ ಹೊಸದೇ ಸಂಸ್ಕೃತಿಯನ್ನು ಕಟ್ಟುತ್ತಿದೆಯೋ ಥಕ್ಕನೆ ಅರ್ಥವಾಗುತ್ತಿಲ್ಲ.

ಸುಮಾರು ಮೂರು ವರ್ಷಗಳ ಹಿಂದೆ ಅಮೇರಿಕಾಕ್ಕೆ ಹೋಗಿದ್ದಾಗ ಫ್ಲೋರಿಡಾ ಪ್ರಾಂತ್ಯದ ಟ್ಯಾಂಪಾ ನಗರಕ್ಕೆ ಹೋಗಿದ್ದೆ. ಮೊದಲೊಂದು ಕಾಲಕ್ಕೆ ಸಿಗಾರ್ ಉತ್ಪಾದನೆಯಿಂದಾಗಿಯೇ ಪ್ರಸಿದ್ಧವಾದ ಪಟ್ಟಣ. ಇದೀಗ ಕ್ಷಿಪ್ರವಾಗಿ ಬೆಳೆಯುತ್ತಿರುವ ನಗರಗಳ ಪೈಕಿ ಇದೂ ಒಂದು.

ಈ ಪಟ್ಟಣದಲ್ಲಿ ಒಂದು ಸ್ವಾರಸ್ಯಕರ ವಿಷಯವೆಂದರೆ ಪ್ರೀತಿಪ್ರೇಮಗಳೊ, ಉತ್ಕಟ ವಿಶ್ವಾಸವೋ ಬೆಸೆದುಕೊಳ್ಳದೆ ಅನುಕೂಲಕ್ಕಾಗಿ ಮದುವೆಯಾಗಿ ಜೀವನ ಸಾಗಿಸಬೇಕಾಗಿ ಬರುವ ಹೆಣ್ಣುಗಂಡುಗಳನ್ನು ಒಗ್ಗೂಡಿಸುವ ತಾಣ ಒಂದಿದೆ. ಒಣ ಆಡಂಬರ, ಮದುವೆಯ ರೀತಿ ರಿವಾಜುಗಳೇ ಇರದೆ 'ಸ್ಟೋ ಎಂಡ್ ಗೋ' ಎಂಬ ಹೆಸರಿನ ಗ್ಯಾಸ್ ಸ್ಟೇಶನ್ ಒಂದೆಡೆ (ಪೆಟ್ರೋಲ್ ಬಂಕುಗಳನ್ನು ಇಲ್ಲಿ ಗ್ಯಾಸ್ ಸ್ಟೇಶನ್ ಎಂದು ಕರೆಯುವುದು ವಾಡಿಕೆ.) ಕೇವಲ ಐವತ್ತು ಡಾಲರ್ ನೀಡಿದರೆ ಸಾಕು ಮದುವೆ ಆಗಿದೆ ಎಂಬುದಕ್ಕೆ ದಂಪತಿಗಳಿಗೆ ಕಾಗದ ಪತ್ರ ಒದಗಿಸುತ್ತಾರೆ. ಅಕ್ಷರಶಃ ಕಾರಿನಿಂದ ಇಳಿದು ಬರಬೇಕಾಗಿಯೂ ಇಲ್ಲ. ಕುಂತಲ್ಲಿಯೇ ಸತಿಪತಿಗಳಾಗಿದ್ದುದಕ್ಕೆ ಅವಕಾಶ. ಹೇಗಿದೆ ಸ್ವಾರಸ್ಯ? ಬದಲಾಗುವ ಸಂಸ್ಕೃತಿ ಎಂಬುದಕ್ಕೆ ಈ ಸ್ವಾರಸ್ಯ ಒಂದು ಉದಾಹರಣೆ ಎಂಬುದಕ್ಕಾಗಿ ಇಲ್ಲಿ ಇದನ್ನು ವಿವರಿಸಬೇಕಾಗಿ ಬಂತು.

ಇದೇ ನಗರದಲ್ಲಿ ನಾವು ವಾಸಕ್ಕಿದ್ದ ಮನೆಯ ಸುತ್ತಮುತ್ತ ಇರುವ ಬಹುತೇಕ ಪ್ರತಿ ಮನೆಗಳಲ್ಲೂ ಅವರವರ ಸ್ವಂತ ಉಪಯೋಗದ ಚಿಕ್ಕ ವಿಮಾನಗಳು ಇದ್ದವು. ಟೂ ಸೀಟರ್, ಥ್ರೀ ಸೀಟರ್ ಪುಟಾಣಿ ವಿಮಾನಗಳು. ನಾವು ನೀಲಿ, ಕೆಂಪು, ಹಸಿರು, ಹಳದಿ ಬಣ್ಣದ ಕಾರುಗಳನ್ನು ಇಟ್ಟುಕೊಂಡಂತೆ ಅವರು ಈ ವಿಮಾನಗಳನ್ನು ತಮ್ಮ ಬಳಕೆಗಾಗಿ ಮನೆಯ ಆವರಣದಲ್ಲಿ ನಿಲ್ಲಿಸಿಕೊಂಡಿದ್ದರು. ನಮ್ಮ ಕಾರ್ ಶೆಡ್ಡಿನ ಹಾಗೆ, ಆ ಮಂದಿಯ ಮನೆಯ ಆವರಣದಲ್ಲಿ ವಿಮಾನದ ಶೆಡ್ಡುಗಳು. ನೋಡಲು ಒಂದು ತೆರನಾದ ಮಜ. ಶ್ರೀಮಂತಿಕೆಯ ರೀತಿ ನೋಡಿ ದಂಗಾಗಬೇಕು. ಬಡತನದ ಹಾಗೆ ಶ್ರೀಮಂತಿಕೆಯೂ ವಿಶಿಷ್ಟ ಅನುಭವಗಳನ್ನು ಒದಗಿಸುತ್ತಿರುತ್ತದೆ. ಕೊನೆಗೂ ನೋವು ಕೇವಲ ಬಡವರ ಸೊತ್ತಂತೂ ಅಲ್ಲ. ಅದು ಶ್ರೀಮಂತರನ್ನು ಕಾಡುವ ರೀತಿ ಬೇರೆಯ ರೀತಿಯಲ್ಲಿರಬಹುದು.

ನಾವು ವಾಸವಾಗಿದ್ದ ಮನೆಯಲ್ಲಿ ಗಂಡ ಹೆಂಡತಿ ಇಬ್ಬರೂ ಚ್ಯಾಂಪಾ ಪಟ್ಟಣದ ಪ್ರಸಿದ್ಧ ವೈದ್ಯರುಗಳು. ಅವರದೇ ಒಂದು ನರ್ಸಿಂಗ್ ಹೋಮ್ ಕೂಡ ಅಲ್ಲಿದೆ. ಜತೆಗೆ ಇತರ ಕಡೆ ವಿಸಿಟಿಂಗ್ ಕೂಡ ಅವರು ಕೈಕೊಳ್ಳುತ್ತಾರೆ. ನಾನು ಒಂದು ದಿನ ಇವರ ಜತೆ ಆ ಊರಿನ ಒಂದು ದೊಡ್ಡ ನರ್ಸಿಂಗ್ ಹೋಮಿಗೆ ಹೋದಾಗ ಕುತೂಹಲ ತಾಳದೆ ನಿಮ್ಮ ಜತೆ ರೋಗಿಗಳಿರುವ ಕಡೆ ನಾನೂ ಬರಬಹುದೆ ಎಂದು ಕೇಳಿದ್ದೆ. 'ಓಹ್, ಏನಂತೆ' ಎಂಬುದು ಅವರ ಉತ್ತರವಾಗಿದ್ದರಿಂದ ರೋಗಿಗಳಿದ್ದ ವಾರ್ಡುಗಳಿಗೆ, ರೂಮುಗಳಿಗೆ ನಾನೂ ಅವರನ್ನು ಹಿಂಬಾಲಿಸಿದ್ದೆ.

ಕಟ್ಟಕಡೆಗೆ ನಾನು ಪ್ರವೇಶಿಸಿದ ಆ ಜಗತ್ತು ಬೇರೆಯದೇ ಆಗಿತ್ತು ಎಂಬುದು - ಕೇವಲ ಸೀನಿಯರ್ ಸಿಟಿಝನ್‌ಗಳು ಮಾತ್ರ ದಾಖಲಾಗಿದ್ದ ಒಂದು ವಾರ್ಡು. ನೂರಾರು ವೃದ್ಧರು ಅಲ್ಲಿ. ಶ್ವೇತ ವರ್ಣೀಯ ಸವಕಲು ದೇಹಗಳು ಅಲ್ಲಿ. ಮುಖ ತಗ್ಗಿಸಿ ಕುಳಿತವರು, ಮಲಗಿದವರು, ವಯಸ್ಸಿನ ಬಾಧೆಗೆ ದೇಹದೊಳಗೆ ವಿರಾಟ ನೋವನ್ನು ಅನುಭವಿಸುತ್ತ ಉಬ್ಬಸ, ನಿಟ್ಟುಸಿರು ಇತ್ಯಾದಿ ಹೊತ್ತುಕೊಂಡವರು. ಅಲ್ಲಿ ಅವರೆಲ್ಲ ಸುಮಾರು ಎಂಬತ್ತು, ತೊಂಬತ್ತು, ನೂರು ಮೀರಿದ ವಯಸ್ಸಿನ ಭೀಷ್ಮರು, ಭೀಷ್ಮಿಣಿಯರು (ಕ್ಷಮಿಸಿ, ಈ ಪದ ಪ್ರಯೋಗ ಸರಿ ಅಲ್ಲ). ಆ ಎಲ್ಲರಿಗೂ ಅದ್ಭುತವಾದ ಚಿಕಿತ್ಸೆ, ಆರೈಕೆ, ಪ್ರೀತಿ, ಕಕ್ಕುಲತೆಗಳನ್ನು ತೋರಲು ಅಲ್ಲಿನ ವೈದ್ಯ ಸಿಬ್ಬಂದಿ ಎಂದೂ ಹಿಂದೆ ಬೀಳುವುದಿಲ್ಲ. ಅಮೇರಿಕಾದಲ್ಲಿ ವೈದ್ಯರ ನಿರ್ಲಕ್ಷ್ಯ ಸುಮಾರು ನೂರಕ್ಕೆ ತೊಂಭತ್ತೊಂಬತ್ತು ಸಾಧ್ಯವೇ ಇಲ್ಲದ ಮಾತು.

ಆದರೆ ಚಿಕಿತ್ಸೆ, ಆರೈಕೆಗಳನ್ನು ಅವರು ಒದಗಿಸಬಹುದೇ ವಿನಾ ಆ ಎಲ್ಲ ವೃದ್ಧ ಜೀವಿಗಳ ನೋವನ್ನು, ರುಜಿನಗಳನ್ನು ಭರಿಸುವುದು, ಹಂಚಿಕೊಳ್ಳುವುದು ಹೇಗೆ ಸಾಧ್ಯ?

ತಂತಮ್ಮ ಯೌವ್ವನದ ದಿನಗಳಲ್ಲಿ ಅದೆಂಥ ಮಾದರಿಯ ರೂಪ, ಮಾದಕತೆ, ಪ್ರಣಯ, ಸುಖ, ಆರಾಮ, ಸಮೃದ್ಧಿಗಳನ್ನು ಆನಂದಿಸಿದವರೋ ಅವರು. ಪ್ರತಿ ಜೀವದ ಒಂದೊಂದೂ ಕತೆಯ ರಂಗೇ ಬೇರೆ. ಅವರೆಲ್ಲ ಶ್ರೀಮಂತಿಕೆಯ ವಿನಾ ಬಡತನವನ್ನು ಅನುಭವಿಸಿದವರೇ ಅಲ್ಲ ಹೆಚ್ಚಾಗಿ.

ನನ್ನನ್ನು ಆ ಆಸ್ಪತ್ರೆಗೆ ಒಯ್ದಿದ್ದ host, ವೈದ್ಯ ಪತ್ನಿ, ನಂತರ ಒಂದು ಸ್ವಾರಸ್ಯಕರ ವಿಷಯ ತಿಳಿಸಿದರು. ನಾನು ಅದೇ ಆಗ ಕಂಡ ಆ ವೃದ್ಧ ಲೋಕದ ಪ್ರಜೆಗಳಲ್ಲಿ ಸುಮಾರು ಶೇಕಡಾ ಇಪ್ಪತ್ತೈದಕ್ಕೂ ಮಿಕ್ಕಿದ ಜನ ಸರಕಾರದ ಮುಂದೆ ತಂತಮ್ಮ ದಯಾಮರಣವನ್ನು ಕೋರಿ ಅರ್ಜಿ ಸಲ್ಲಿಸಿದವರಂತೆ. ನಿಜಕ್ಕೂ ನನಗೆ ಆ ವಿಷಯ ಶಾಕ್ ನೀಡಿತ್ತು. ಪತ್ರಿಕೆಗಳಲ್ಲಿ ದಯಾಮರಣದ ಸುದ್ದಿ, ಇಂಥ ಈ ಮರಣಕ್ಕಾಗಿ ಕಾತರಿಸಿದ ಮಂದಿಗಳ ಕುರಿತು ಕೇಳಿದ್ದೆನೇ ವಿನಾ ಆ ವ್ಯಕ್ತಿಗಳನ್ನು ನೋಡಿರಲಿಲ್ಲ. "ಅರೆ, ಓ ಬದುಕೇ" ಎಂಬ ಉದ್ಗಾರ ಬಂತು ಎಂಬುದೆಲ್ಲ ಕೃತ್ರಿಮವಾದೀತು. ಇಂತಹ ಈ ಉದ್ಗಾರಗಳು ಮನುಷ್ಯನ ಸೂಕ್ಷ್ಮ ಸಮಸ್ಯೆಗಳನ್ನೆಲ್ಲ ತುಂಬಾ ಸರಳಗೊಳಿಸಿ ಬಿಡಬಹುದೇನೊ? ಆದರೆ ನನ್ನಲ್ಲಿ ಅದೊಂದು ವಿಚಿತ್ರವಾದ ತಳಮಳವನ್ನಂತೂ ಎಬ್ಬಿಸಿತ್ತು.

ಅಲ್ಲೇ ಆ ಪಕ್ಕದ ಸಿಟಿಂಗ್ ರೂಮಿನಲ್ಲಿ ಇನ್ನೊಂದು ಲೋಕ. ಸೀನಿಯರ್ ಸಿಟಿಝನ್‌ಗಳನ್ನು ನೋಡಿದೆ ಎಂದೆನಲ್ಲ ಅವರ ಮಕ್ಕಳು ಅಲ್ಲಿ ಕಾತರದಿಂದ ವೈದ್ಯೆಗಾಗಿ ಕಾತರಿಸಿ ಕುಳಿತುಕೊಂಡವರು. ಈ ಸೀನಿಯರ್ ಸಿಟಿಝನ್‌ಗಳ ಮಕ್ಕಳು ಎಂದ ಮಾತ್ರಕ್ಕೆ ಯೌವ್ವನವನ್ನು ಅಲ್ಲಿ ನಿರೀಕ್ಷಿಸಬೇಕಾಗಿರಲಿಲ್ಲ. ಆ ಎಲ್ಲರ ವಯಸ್ಸು ಸರಾಸರಿ ನೋಡಿದಲ್ಲಿ ಅವರೆಲ್ಲ ಸುಮಾರು ಅರುವತ್ತು, ಎಪ್ಪತ್ತು ಮಿಕ್ಕಿದ ಪ್ರಾಯದವರು. ತಂತಮ್ಮ ತಂದೆ, ತಾಯಿಗಳ ಯೋಗಕ್ಷೇಮವನ್ನು ವಿಚಾರಿಸಿ ಮುಂದಿನದೇನು ಎಂಬುದನ್ನರಿಯಲು ಕಾತರಿಸಿದ ಜನ. ಇವರೂ ಸೀನಿಯರ್ ಸಿಟಿಝನ್‌ಗಳೆ. ಆದರೆ ಇವರ ಸೀನಿಯಾರಿಟಿಗೆ ಗಮನ ಹರಿಸಲು ಕಾರಣವಾಗದೇ ಉಳಿದದ್ದು ಅವರನ್ನು ಮೀರಿದ ತೊಂಬತ್ತು, ನೂರು ವರ್ಷಗಳ ತಾಯ್ತಂದೆಯರ ಸೀನಿಯಾರಿಟಿಯಿಂದ.

ಮನುಷ್ಯನ ವೃದ್ಧಿಸಿದ ಆಯುಷ್ಯದ ಪ್ರಮಾಣ ನಿಜಕ್ಕೂ ಅದ್ಭುತವಾದ ವಿಷಯ. ಆದರೆ ಇದೇ ವಯಸ್ಸಿನ ಅಂಶ ವಿಶಿಷ್ಟ ಸುಖ, ದುಃಖಗಳಿಗೆ ಕಾರಣವಾಗಿ ಬದಲಾಗುತ್ತಿರುವ ಸಮಾಜದ ಪರಿಸ್ಥಿತಿಯನ್ನು ಅಮೇರಿಕಾದ ಟ್ಯಾಂಪಾ ಪಟ್ಟಣದಲ್ಲಿ ಅಂದು ಅನಿರೀಕ್ಷಿತವಾಗಿ ನಾನು ನೋಡುವಂತಾಯ್ತು. ಬದಲಾದ ಅಂಶಗಳು - ಒಂದರ್ಥದಲ್ಲಿ ಒಂದು ಸಂಸ್ಕೃತಿಯನ್ನು ಬದಲಾಯಿಸಲು ಕಾರಣವಾಗಿ ನಿಲ್ಲುವ ದ್ರವವನ್ನು ಗರ್ಭದಲ್ಲಿ ಹೊಂದಿರಬಹುದು ಎಂದು ಈ ಮುಂಚೆಯೇ ನಾನು ಅಭಿಪ್ರಾಯ ಪಟ್ಟಿದ್ದು ಇದೇ ಕಾರಣಕ್ಕಾಗಿ. ಬದುಕ

ಬಯಸಿದಷ್ಟೂ ಜೀವನ ಸಾಧ್ಯವಾಗುವಂಥಾದ್ದರೆ, ಯೋಚಿಸಬಲ್ಲಷ್ಟು ಮೆಚ್ಯಾರಿಟಿಗೆ ಬಂದಾಗಲೇ ಮನುಷ್ಯ ತನ್ನ ಸಾವಿನ ದಿನವನ್ನೂ ನಿರ್ದಿಷ್ಟ ಕಛೇರಿಯೊಂದರಲ್ಲಿ ಇಷ್ಟು ವರ್ಷಗಳ ನಂತರ, ಹೀಗಾಗಿ ಹೋದಲ್ಲಿ, ಈ ಕಾರಣಕ್ಕಾಗಿ ಈ ದಿನವೇ ನನ್ನ ಸಾವಿನ ದಿನವಾಗಿ ರೂಪುಗೊಳ್ಳಲಿ ಎಂದು ನಮೂದಿಸಿ ಬರುವುದು ಅನಿವಾರ್ಯವಾದೀತೇನೊ? ಅಂತೆಯೇ ಎಂತೆಂಥದೋ ಕಾರಣಗಳಿಗಾಗಿ ಈ ದಿನವನ್ನು ಹಿಂದೂಡುವ ಅಥವಾ ಮುಂದೂಡುವ ಅವಕಾಶವೂ ಒದಗಿ ಬಿಡಬಹುದು. ಆಗ ಆ ವ್ಯಕ್ತಿಯ ಹಾಗೂ ಅವನನ್ನು ಸುತ್ತರಿದ ಮಕ್ಕಳು, ಕುಟುಂಬ, ಸಂಬಂಧಿಗಳ ಕಾತರ, ಆತುರಗಳನ್ನು ಗಮನಿಸಿ.

ಗೀತೆಯಲ್ಲಿ ಪಾರ್ಥನಿಗೆ ಕೃಷ್ಣ ಬೋಧಿಸಿದ ಜೀವ, ಜೀವಾತ್ಮ, ಜನ್ಮ ಜನ್ಮಾಂತರಗಳ ಸಂಬಂಧಗಳನ್ನು ಇಲ್ಲೀಗ ನೆನಪಿಸಿಕೊಳ್ಳಬಹುದು. ಹಳೆ ಅಂಗಿಯನ್ನು ಬದಲಿಸಿ ಹೊಸ ಅಂಗಿಯನ್ನು ಧರಿಸಿದಂತೆ ಎಂಬ ಮಾತು. ಹೊಸ ಅಂಗಿ ಯಾವುದೊ? ಈ ಹಳೆಯ ಅಂಗಿಯನ್ನಂತೂ ವಿಸರ್ಜಿಸುತ್ತಿದ್ದೇನೆ ಎಂಬ ವ್ಯಕ್ತಿಯ ಮಾನಸಿಕ ಕ್ರಿಯೆ ಹೇಗಿರಬಹುದು? ಸಮಸ್ಯೆ ಇನ್ನೂ ಇಂಥದೊಂದು ಪರಿಸ್ಥಿತಿ ಬಂದಿಲ್ಲ ಎಂಬುದು ಸಂತಸದ ವಿಷಯ.

ಸಂತೋಷದ ವಿಷಯವನ್ನಾಗಿ ವೃದ್ಧಾಪ್ಯವನ್ನು ಸ್ವೀಕರಿಸುವಾಗ ನೂರನ್ನು ತಲುಪಿದ ನಿಟ್ಟೂರರು ನಮ್ಮ ಪ್ರಮುಖವಾದ ಆಸ್ತಿಯಾಗುತ್ತಾರೆ. ಅವರಿಗೆ ವಯಸ್ಸು ನೂರಾಗಿದೆ ಎಂದು ತಿಳಿದಾಗ ಮಾತ್ರವೇ ಅವರ ವಯಸ್ಸು ನಮ್ಮನ್ನು ಆಶ್ಚರ್ಯಕ್ಕೆ ತಳ್ಳಬಹುದೇ ವಿನಾ, ನಿಟ್ಟೂರರು ಹೊಂದಿರುವ, ಜೀವನೋತ್ಸಾಹ, ಲವಲವಿಕೆ, ಸಾಂಸ್ಕೃತಿಕ ಬದ್ಧತೆ ನಿಜಕ್ಕೂ ಅದ್ಭುತವಾದದ್ದು. ವಯಸ್ಸು ಅವರನ್ನು ಎಂದೂ ತನ್ನ ನಿಯಂತ್ರಣಕ್ಕೆ ಪಡೆದುಕೊಂಡಿಲ್ಲ. ಅವರ ದೃಷ್ಟಿ, ಕಿವಿ, ಕೈ, ಕಾಲುಗಳು ಇನ್ನೂ ಚುರುಕಾಗಿವೆ. ಇದು ಅವರು ನಡೆಸಿದ ಶಿಸ್ತಿನ ಬದುಕಿನ ಫಲದಿಂದ ಎಂದು ಅನುಮಾನವಿರದೆ ಹೇಳಬಹುದು.

ಸಾಂಸ್ಕೃತಿಕ ಕಾರ್ಯಕ್ರಮವೊಂದರ ಪ್ರಧಾನ ಅತಿಥಿಯಾಗಿಯೇ ಅವರನ್ನು ನಾವು ನಿರೀಕ್ಷಿಸಬೇಕಾಗಿಲ್ಲ. ಸಹಜವಾದ ಕುತೂಹಲದಿಂದ ಅವರು ಕಾರ್ಯಕ್ರಮಕ್ಕೆ ಬರುತ್ತಾರೆ. ಜನರ ನಡುವೆ ಇದ್ದು ಅವರಂಥ ಪ್ರಾಂಜಲ ಮನಸ್ಸಿನ ಜನ ವೃದ್ಧಾಪ್ಯವನ್ನು ಮೀರಿ ನಿಲ್ಲುತ್ತಾರೆ. ಅವರು ಬಂದ ಮೇಲೆ ಬಂದ ಸಂದರ್ಭದಲ್ಲಿ ಆ ಕಾರ್ಯಕ್ರಮದಲ್ಲಿ ಪ್ರಧಾನ ಅತಿಥಿಯೇ ಆಗಿಬಿಡುತ್ತಾರೆ. ನಿಟ್ಟೂರು ಕೂಡ ಬಂದಿದ್ದಾರೆ ಎಂಬುದು ಕಾರ್ಯಕ್ರಮವನ್ನು ನಿಯೋಜಿಸಿದ ಮಂದಿಗೆ ಹೆಮ್ಮೆಯ ವಿಷಯವಾಗುತ್ತದೆ.

ಜನರ ನಡುವೆ ಬೆರೆತು, ಮಾತನಾಡಿ, ಸುತ್ತಮುತ್ತಲೂ ಏನು ನಡೆಯುತ್ತಿದೆ ಎಂಬುದನ್ನು ಅರಿಯಲು ಕಾತರಿಸುವ ನಿಟ್ಟೂರರಂಥ ಜನ, ಜೀವನೋತ್ಸಾಹ ಪ್ರತಿ ಯೊಬ್ಬನಿಗೂ ಏನು ಪ್ರಯೋಜನವನ್ನು ಒದಗಿಸಬಹುದು ಎನ್ನುವ ಕಲ್ಪನೆಯ

ಮೂಲಕವನ್ನೇ ಬದಲಿಸಬಲ್ಲಂಥವರು. ಪೊಳ್ಳು ಆದರ್ಶತನಗಳನ್ನು ಹೊಂದಿರುವ ಮಂದಿ ತಂತಮ್ಮ ವಯಸ್ಸಿನ ಅರುವತ್ತು, ಎಪ್ಪತ್ತಕ್ಕೇ ಬಸವಳಿದು ಬಿಡುವ ಸಾಧ್ಯತೆಗಳಿವೆ. ಆದರೆ ಶ್ರೀನಿವಾಸರಾಯರಂಥವರ ಆದರ್ಶ ಎಂದೂ ಪೊಳ್ಳೆನಿಸುವುಂಥದಲ್ಲ. ಅವರು ಎಲ್ಲರೊಡನೆ ಬೆರೆತು ಬದುಕಿನ ಹೊಸ ಅವಸ್ಥೆಗೆ ನಾವು ಬಂದು ತಲುಪಲಿರುವ ಘಟ್ಟಕ್ಕೆ ಮುಂಚಿನ ಅವಶ್ಯವಾದ ತಯಾರಿಯೊಂದನ್ನು ಒದಗಿಸುತ್ತಿರುತ್ತಾರೆ. ಈ ಕಾರಣಕ್ಕಾಗಿ ಎಂಥದೇ ವೃದ್ಧಾಪ್ಯವನ್ನೂ ತಮ್ಮ ಚೈತನ್ಯದ ಮೂಲಕ ಗೆಲ್ಲಬಲ್ಲಂಥವರು ನಿಟ್ಟೂರು ಅವರಂಥವರು ಮಾತ್ರ. ಹೀಗಾಗಿ ಈ ಸಂದರ್ಭದಲ್ಲಿ ಕುವೆಂಪು ಅವರ ಶ್ರೀರಾಮಾಯಣ ದರ್ಶನಂ ಕೃತಿಯಲ್ಲಿ ಅವರು ಗೋದಾವರಿ ನದಿಯನ್ನು ವರ್ಣಿಸುವ ಭಾಗ ನೆನಪಾಗುತ್ತಿದೆ.

> ಆ ರಮಣೀಯ ಗೋದಾವರಿಯ ಪುಳಿಸಮಯ ಶುಭ್ರ ತಟ

ಎಂಬ ವಿವರಣೆ ಕವಿ ಕೃತಿಯಲ್ಲಿ ಒದಗಿಸುತ್ತಾನೆ.

ಶ್ರೀನಿವಾಸರಾಯರ ಬದುಕಿನ ಎಲ್ಲ ಘಟ್ಟಗಳೂ ರಮಣೀಯ. ಹೀಗಾಗಿ ವೃದ್ಧಾಪ್ಯವೂ ಅವರ ಪಾಲಿಗೆ ರಮಣೀಯ. ಅವರ ಬದುಕಿನ ರಮಣೀಯತೆ ಇನ್ನಷ್ಟು ವಿಸ್ತರಿಸುವ ವಯಸ್ಸು ಅವರಿಗೊದಗಲಿ, ವೃದ್ಧಿಸಲಿ ಎಂಬುದು ನನ್ನ ಆಶಯ. ವೃದ್ಧರಿದ್ದಷ್ಟೂ ನಾವು ತರುಣರೇ ಎಂಬ ಚೈತನ್ಯ ನನ್ನಂಥವರಿಗೆ ಒದಗುತ್ತದೆ ಎಂಬುದು ನನ್ನ ಸ್ವಾರ್ಥ ಇಲ್ಲಿ. ನಿಟ್ಟೂರು ಶ್ರೀನಿವಾಸರಾಯರು ನಮ್ಮನ್ನೆಲ್ಲ ಹರಸಲಿ ಎಂದು ನನ್ನ ಪ್ರಾರ್ಥನೆ.






# ಶತಮಾನ ದಾಟಿದ ನಿಟ್ಟೂರರು


.......................... ✍ ಕೆ. ಉಷಾ ಪಿ. ರೈ*


ಶತಮಾನ ದಾಟಿ ಮುನ್ನಡೆದ ನಿಟ್ಟೂರರೇ
ನಿಮಗಿದೋ ನನ್ನ ನಮನ
ನೂರಾ ಒಂದನೆಯ ಹುಟ್ಟು ಹಬ್ಬಕೆ
ಮನ ತುಂಬಿದ ಶುಭ ನಮನ !
ಅಜೇಯ ಶತಕ ದಾಟಿ ಮುಂದುವರೆದಿರಿ
ನೂರಾ ಒಂದು ದಾಟಿದಿರಿ ನೀವು
ಇನ್ನೂ ಹಾಕಿರಿ ಹೆಜ್ಜೆ, ಉರುಳಲಿ ವರುಷಗಳು
ನಿಮ್ಮಂಥವರಿರಬೇಕು ಕನ್ನಡದ ನೆಲದಲ್ಲಿ
ಕರ್ನಾಟಕದ ಆಸ್ತಿ ನೀವು ಲವಲವಿಕೆಯ ಮೂರ್ತಿ.

ಬಾಳಬೇಕು ನೀವು ಇನ್ನೂ ಕೆಲವು ವರುಷ
ನಮಗೆಲ್ಲ ಆದರ್ಶವಾಗಿ
ಜೀವನದ ಸೊಬಗಿನ ನಿದರ್ಶನವಾಗಿ.
ತೆಂಡೂಲ್ಕರನ ಶಕ್ತಿ, ಗಂಗೂಲಿಯ ಯುಕ್ತಿ
ಸೆಹವಾಗನ ಉಲ್ಲಾಸ ಎಲ್ಲವೂ ಸಾಕಾರ ನಿಮ್ಮಲ್ಲಿ
ಶತಕ ದಾಟಿಯೂ ಉಲ್ಲಾಸ ಕುಂದಿಲ್ಲ
ಇನ್ನೂ ಆಡಲು ತಯಾರು. ಉತ್ತಮ ಆಟಗಾರರು ನೀವು
ಜೀವನದ ಬಯಲು ನಿಮಗೆ ಆಟದ ಮೈದಾನು.

ಸಾಹಿತ್ಯ ಪ್ರಿಯರು, ಸದಾ ಉಲ್ಲಾಸದ ಮನಸ್ಸು
ಎಲ್ಲಿ ನೋಡಿದರೂ ಇದ್ದೀರಿ ನೀವು

---


* ೩೪೫, ಸಮೃದ್ಧ, ಲಕ್ಷ್ಮಿ ರಸ್ತೆ, ೭ನೇ ಅಡ್ಡರಸ್ತೆ
ಶಾಂತಿನಗರ, ಬೆಂಗಳೂರು - ೫೬೦೦೨೭

ಮೊದಲ ಸಾಲಿನಲಿ ನೀವಿದ್ದರೆ ಸಮಾರಂಭಕ್ಕೊಂದು ಕಳೆ
ಇಲ್ಲದಿದ್ದರೆ ಏನೋ ಇಲ್ಲದಂತೆ ಖಾಲಿ ಖಾಲಿ
ಒಬ್ಬ ನಿಟ್ಟೂರರು ನೂರು ಜನಕೆ ಸಾಟಿ!

ನೂರ ಒಂದರ ತಾತ
ಬಚ್ಚ ಬಾಯಿ ತೆರೆದು ನಗುವ ಮುತ್ತಾತ.
ನೆನಪುಗಳು ನಿಮ್ಮ ಕೋಟಿ ರುಪಾಯಿಯ ಆಸ್ತಿ
ಸ್ವಲ್ಪ ಕೆದಕಿದರೆ ಹೊರಚೆಲ್ಲುವವು
ಮುತ್ತು ರತ್ನಗಳಂತೆ ನಿಮ್ಮ ಅನುಭವ ಸಾರ.
ಸಾಹಿತಿ, ಸಾಹಿತ್ಯ ಪ್ರಿಯ, ನ್ಯಾಯವಾದಿ
ನೆನಪಿನ ಖಜಾನೆ ತುಂಬ ನೆನಪುಗಳು!
ನೂರೊಂದಾದರೂ ಮರೆಯಾಗಿಲ್ಲ.

ಹೇಗೆ ಸಾಧ್ಯವಾಗಿದೆ ನಿಮಗೆ
ಎಲ್ಲ ನೆನಪುಗಳ ಕಾಪಿಟ್ಟುಕೊಳ್ಳಲು?
ನಮಗೆ ನಾಚಿಗೆ ನಮ್ಮ ಮರವೆಗೆ.
ಅರ್ಧ ಶತಮಾನ ದಾಟುವಾಗಲೇ ನಮಗೆ ಮರೆವು
ನಿನ್ನೆಯ ನೆನಪು ಇಂದಿಗಿಲ್ಲ.
ನಿಮ್ಮಂತೆ ಯಾರು ಇಲ್ಲ.

ಶತಮಾನ ದಾಟಿ ಮುನ್ನಡೆದ ನಿಟ್ಟೂರರೇ
ನಿಮಗಿದೋ ನನ್ನ ನಮನ
ನೂರಾ ಒಂದನೆಯ ಹುಟ್ಟು ಹಬ್ಬಕೆ
ಮನ ತುಂಬಿದ ಶುಭ ನಮನ!
ಬಾಳಬೇಕು ನೀವು ಇನ್ನೂ ಕೆಲವು ವರುಷ
ನಮಗೆಲ್ಲ ಆದರ್ಶವಾಗಿ
ಜೀವನದ ಸೊಬಗಿನ ನಿದರ್ಶನವಾಗಿ.



# ನ್ಯಾಯಮೂರ್ತಿ ಶ್ರೀ ನಿಟ್ಟೂರು ಶ್ರೀನಿವಾಸರಾವ್

. . . . . . . . . . . . . . . . . . . . . ✍ ವಿ.ಎಸ್. ಕೃಷ್ಣ ಅಯ್ಯರ್*

ನಾನು ನ್ಯಾಯಮೂರ್ತಿ ಶ್ರೀ ನಿಟ್ಟೂರು ಶ್ರೀನಿವಾಸರಾವ್ ರವರನ್ನು ಕಳೆದ ಆರು ದಶಕಗಳಿಂದಲ್ಲೂ ಬಲ್ಲೆ. ಅವರು ಒಬ್ಬ ಮಹಾನ್ ವ್ಯಕ್ತಿ. ಆದರ್ಶ ಪುರುಷರು. ಸರಳತೆಗೆ, ಸಜ್ಜನತೆಗೆ ಪ್ರತೀಕ. ಮಹಾಮೇಧಾವಿಗಳು, ಕಾರ್ಯಚತುರರು, ಸ್ನೇಹ ಪರರು ಹಾಗೂ ನಿಗರ್ವಿಗಳು.

ನಾನು ಅವರನ್ನು ಮೊದಲು ಕಂಡದ್ದು ಸಿಟಿ ಮಾರ್ಕೆಟ್ ಬಳಿ ಇದ್ದ ದೊಡ್ಡಣ್ಣ ಹಾಲ್ ಆವರಣದಲ್ಲಿ ಅವರ ವಕೀಲಿ ಆಫೀಸಿನಲ್ಲಿ. ಅಂದು ಸ್ವತಂತ್ರ ಸಂಗ್ರಾಮ ನಡೆಯುತ್ತಿದ್ದ (ಕ್ವಿಟ್ ಇಂಡಿಯಾ ಚಳವಳಿ) ಕಾಲ. ಆಗ ಶ್ರೀ ನಿಟ್ಟೂರುರವರು ಕಛೇರಿ ಸ್ವಾತಂತ್ರ್ಯ ಸಂಗ್ರಾಮದ ಕಛೇರಿಯಾಗಿತ್ತೆಂದರೆ ಉತ್ಪ್ರೇಕ್ಷೆಯಲ್ಲ, ಕಾಂಗ್ರೆಸ್ಸಿನ ಅಂದಿನ ಎಲ್ಲಾ ಹಿರಿಯ ಕಿರಿಯ ನಾಯಕರು ಅಲ್ಲಿ ಬಂದು ಸೇರುತ್ತಿದ್ದರು. ಎಲ್ಲರೂ ನಿಟ್ಟೂರರ ಮಾರ್ಗದರ್ಶನ ಪಡೆಯುತ್ತಿದ್ದರು. ಸಂಗ್ರಾಮದ ಕಾರ್ಯ ಸೂಚಿಯ ಬಗ್ಗೆ ವಿಚಾರ ವಿನಿಮಯ ಚರ್ಚೆ ನಡೆಯುತ್ತಿತ್ತು. ನಿಟ್ಟೂರರು ಎಲ್ಲರಿಗೂ ಮಾರ್ಗದರ್ಶನ ನೀಡುತ್ತಿದ್ದರು. ಅವರ ಮಾತನ್ನು ಎಲ್ಲಾ ಸ್ವಾತಂತ್ರ್ಯ ಹೋರಾಟಗಾರರೂ ಕೇಳಿ ಅದರಂತೆ ನಡೆಯುತ್ತಿದ್ದರು.

ನ್ಯಾಯವಾದಿ ಶ್ರೀ ನಿಟ್ಟೂರು ಶ್ರೀನಿವಾಸರಾಯರು ಕಟ್ಟಾ ಗಾಂಧೀವಾದಿಗಳು. ಸದಾ ಖಾದಿಧಾರಿಗಳು. ಗಾಂಧಿ ತತ್ವದಂತೆ

---

* ಸಿ-೨೩, ಶಂಕರಪಾರ್ಕ್, ಶಂಕರಪುರಂ
ಬೆಂಗಳೂರು - ೫೬೦೦೦೪

ತಮ್ಮ ಜೀವನವನ್ನು ರೂಪಿಸಿಕೊಂಡವರು. ಗಾಂಧೀಜಿಯರ ಬಗ್ಗೆ - ಗಾಂಧೀ ತತ್ವಗಳ ಬಗ್ಗೆ ಅನೇಕ ಪುಸ್ತಕಗಳನ್ನು ಬರೆದಿದ್ದಾರೆ. ಮತ್ತು ಇತರ ಭಾಷೆಗಳಿಂದಲೂ ಅನುವಾದ ಮಾಡಿದ್ದಾರೆ. ಗಾಂಧಿ ತತ್ವವನ್ನು ಅನುಷ್ಠಾನಕ್ಕೆ ತಂದವರು. ಗಾಂಧಿತತ್ವ ಪ್ರಚಾರ ಅವರ ಸಾಹಿತ್ಯ ಕೃತಿಯ ಉದ್ದೇಶ್ಯವಾಗಿತ್ತು. ಒಳ್ಳೆಯ ಬರವಣಿಗೆಗಾರರೆಂದೂ ಹೆಸರು ಪಡೆದರು.

ಶ್ರೀಮಾನ್ ನಿಟ್ಟೂರುರವರು ಸುಪ್ರಸಿದ್ದ ನ್ಯಾಯವಾದಿಗಳಾಗಿದ್ದರೂ, ಅವರು ಕೋರ್ಟಿಗೆ ಹೆಚ್ಚಿಗೆ ಹೋಗದೆ, ತಮ್ಮ ಕಿರಿಯ ಸಹೋದ್ಯೋಗಿಗಳ ಮೂಲಕ ಪ್ರತಿಯೊಂದು ಮೊಕದ್ದಮೆಯ ಬಗ್ಗೆ ಸಲಹೆ ಕೊಟ್ಟು ತಮ್ಮ ಕಕ್ಷಿಗಾರನಿಗೆ ಅನುಕೂಲ ವಾಗುವ ರೀತಿಯಲ್ಲಿ ಮಾರ್ಗದರ್ಶನ ನೀಡುತ್ತಿದ್ದರು. ಅವರು ನ್ಯಾಯವಾದಿಗಳಾಗಿ ಸತ್ಯವನ್ನೇ ಆಧಾರವಾಗಿಟ್ಟುಕೊಂಡು ತಮ್ಮ ವಕೀಲಿ ವೃತ್ತಿಯನ್ನು ಯಶಸ್ವಿಯಾಗಿ ನಡೆಸಿಕೊಂಡು ಬಂದರು. ಅವರು ಎಂದೂ ಹಣದಾಸೆಗಾಗಿ ತಮ್ಮ ವೃತ್ತಿಯನ್ನು ನಡೆಸಿದ ವರಲ್ಲ. ತಮ್ಮ ಕಕ್ಷಿದಾರರಿಗೆ ನ್ಯಾಯ ದೊರಕಿಸಿ ಕೊಡುವುದೇ ಅವರ ಮುಖ್ಯ ಉದ್ದೇಶ್ಯವಾಗಿತ್ತು.

ಅವರ ಪ್ರಾಮಾಣಿಕತೆ ಮತ್ತು ದಕ್ಷತೆಯನ್ನು ಗಮನಿಸಿದ ಕರ್ನಾಟಕ ಸರ್ಕಾರ (ಅಂದಿನ ಮೈಸೂರು ಸರ್ಕಾರ) ೧೯೫೦ರ ದಶಕದಲ್ಲಿ ಕರ್ನಾಟಕದ ಉಚ್ಚ ನ್ಯಾಯಾಲಯದ ನ್ಯಾಯಾಧೀಶರನ್ನಾಗಿ ನೇಮಕ ಮಾಡಿತು. ಅವರು ಅತ್ಯಂತ ಮೇಧಾವಿ ನ್ಯಾಯಮೂರ್ತಿ ಗಳೆನ್ನಿಸಿಕೊಂಡರು. ನಂತರ (ಅಂದಿನ ಮೈಸೂರು) ಹೈಕೋರ್ಟಿನ ಮುಖ್ಯ ನ್ಯಾಯಾಧೀಶರೂ ಆದರು. ನಿಟ್ಟೂರುರವರು ಮುಖ್ಯ ನ್ಯಾಯಾಧೀಶರಾಗಿ ಕೊಟ್ಟ ಕೆಲವು ತೀರ್ಪುಗಳು ಇಂದೂ ಜನ ಮನದಲ್ಲಿ ಉಳಿದಿವೆ. ಅವರು ಮುಖ್ಯ ನ್ಯಾಯಾಧೀಶರಾಗಿ ಕೆಲವು ಕಾಲ ಹಂಗಾಮಿ ರಾಜ್ಯಪಾಲರಾಗಿಯೂ ಸೇವೆ ಸಲ್ಲಿಸಿದರು. ಇದು ಅವರ ಯೋಗ್ಯತೆ, ದಕ್ಷತೆಗಳಿಗೆ ಸಿಕ್ಕ ದೊಡ್ಡ ಗೌರವ. ನಿಟ್ಟೂರುರವರು ನ್ಯಾಯಾಲಯದಿಂದ ನಿವೃತ್ತಿ ಹೊಂದಿದ್ದರೂ ಅವರಿಗೆ ಬೇರೆ ರೀತಿಗಳಲ್ಲಿ ಸೇವೆ ಸಲ್ಲಿಸುವ ಅವಕಾಶಗಳು ಕಾದಿದ್ದವು. ಗಾಂಧೀಜಿ, ಪಂಡಿತ್ ನೆಹರೂ, ಲಾಲ್‌ಬಹುದ್ದೂರ್ ಶಾಸ್ತ್ರೀ, ಗೋವಿಂದ ವಲ್ಲಭ ಪಂತ್, ಸರದಾರ್ ವಲ್ಲಭಬಾಯಿ ಪಟೇಲ್, ಗುಲ್ಜಾರಿಲಾಲ್ ನಂದ ಇತ್ಯಾದಿ ರಾಷ್ಟ್ರದ ಪ್ರಮುಖ ನಾಯಕರೊಂದಿಗೆ ಸಂಪರ್ಕ ಹೊಂದಿದ್ದರು. ಅಂದಿನ ಕಾಂಗ್ರೆಸ್ ನಾಯಕರುಗಳು ನಿಟ್ಟೂರರವನ್ನು ಚೆನ್ನಾಗಿ ಅರ್ಥಮಾಡಿಕೊಂಡಿದ್ದರು. ಆ ನಾಯಕರೂ ನಿಟ್ಟೂರುರವರನ್ನು ಮರೆಯಲಿಲ್ಲ. ಕರ್ನಾಟಕದಲ್ಲೂ ಅವರಿಗೆ ಎಲ್ಲಾ ರಾಜಕೀಯ ನಾಯಕರುಗಳು, ಸಾಹಿತಿಗಳು, ವಿದ್ಯಾರ್ಥಿಗಳು ಮತ್ತು ವಿವಿಧ ಕ್ಷೇತ್ರದಲ್ಲಿ ಸೇವೆ ಸಲ್ಲಿಸುತ್ತಿದ್ದ ಮತ್ತು ಸೇವೆ ಸಲ್ಲಿಸುತ್ತಿರುವ ಗಣ್ಯ ವ್ಯಕ್ತಿಗಳು ಅವರ ಅಚ್ಚು-ಮೆಚ್ಚಿನ ಸ್ನೇಹಿತರಾಗಿದ್ದರು.

ಅಂದಿನ ನಾಯಕರುಗಳು ನಿಟ್ಟೂರರ ಪ್ರತಿಭೆಯನ್ನು ಗುರುತಿಸಿ ಅವರನ್ನು ಭಾರತ ಸರಕಾರದ ಅತ್ಯಂತ ಘನತೆಯಿಂದ ಕೂಡಿದ ಸ್ಥಾನ ಮೊದಲನೆ ವಿಜಿಲೆನ್ಸ್ ಕಮೀಶನರನ್ನಾಗಿ ನೇಮಕ ಮಾಡಿದರು. ನಿಟ್ಟೂರುರವರು ತುಂಬಾ ವಿಚಕ್ಷಣತೆಯಿಂದ ಕೆಲಸಮಾಡಿ ಎಲ್ಲರ ಮೆಚ್ಚಿಗೆಗೆ ಪಾತ್ರರಾದರು.

ವಿಜಿಲೆನ್ಸ್ ಕಮೀಶನರ್ ಹುದ್ದೆಯ ನಂತರವೂ ನಿಟ್ಟೂರರಿಗೆ ವಿಶ್ರಾಂತಿ ದೊರೆಯಲಿಲ್ಲ. ಅನೇಕ ಸಾರ್ವಜನಿಕ ಸಂಘ-ಸಂಸ್ಥೆಗಳ ನೇತಾರರಾಗಿ ಈಗಲೂ ಸೇವೆ ಸಲ್ಲಿಸುತ್ತಿದ್ದಾರೆ. ಅವರು ಈ ಶತಮಾನ ಪೂರ್ತಿಗೊಳಿಸುವ ಮಟ್ಟದಲ್ಲಿದ್ದಾಗಲೂ ಈ ರೀತಿ ಸೇವೆ ಸಲ್ಲಿಸುತ್ತಾ ಚಟುವಟಿಕೆಯಿಂದಿರುವುದು ಕನ್ನಡಿಗರ ಭಾಗ್ಯ. ನಿಟ್ಟೂರುರವರು ಪ್ರತಿಭಾವಂತರಾಗಿ, ಬುದ್ಧಿಚತುರರಾಗಿ ಕಾರ್ಯವಿಚಕ್ಷಣರಾಗಿ ಸೇವಾದುರಂಧರರಾಗಿ ಕರ್ನಾಟಕದ ಜನಪ್ರಿಯ ವ್ಯಕ್ತಿಗಳೆನಿಸಿಕೊಂಡಿದ್ದಾರೆ. ಎಲ್ಲಾ ಕ್ಷೇತ್ರದ ಗಣ್ಯ ವ್ಯಕ್ತಿಗಳೆನಿಸಿಕೊಂಡಿದ್ದಾರೆ. ಎಲ್ಲಾ ಕ್ಷೇತ್ರದ ಗಣ್ಯ ವ್ಯಕ್ತಿಗಳ ಪರಿಚಯದಿಂದಾಗಿ ಎಲ್ಲರ ಮೆಚ್ಚುಗೆಗೆ ಪಾತ್ರರಾಗಿದ್ದಾರೆ.

ಬೆಂಗಳೂರು ನಗರದಲ್ಲಂತೂ ನಿಟ್ಟೂರರು ಮನೆಮಾತಾಗಿದ್ದಾರೆ. ಇವರಿಲ್ಲದೆ ಯಾವುದೇ ಸಭೆ - ಸಮಾರಂಭ ನಡೆಯುವುದು ದುರ್ಲಭ, ಅವರು ಪ್ರತಿ ಸಮಾರಂಭಕ್ಕೂ ಸಕಾಲದಲ್ಲಿ ಬಂದು ಸಮಯೋಚಿತವಾಗಿ ತಮ್ಮ ಹಿತ ನುಡಿಗಳನ್ನು ನೀಡಿ ಎಲ್ಲರನ್ನೂ ತೃಪ್ತಿಗೊಳಿಸುತ್ತಾರೆ. ಸಾರ್ವಜನಿಕ ಸಮಾರಂಭಗಳಲ್ಲದೆ ಇತರೆ ಇನ್ನೂ ಅನೇಕ ಮದುವೆ-ಮುಂಜಿ ಇತ್ಯಾದಿ ಸಮಾರಂಭಗಳಿಗೂ ಸಹ ಜನರು ಅವರನ್ನು ಆಹ್ವಾನಿಸಿ ಅವರಿಂದ ಆಶೀರ್ವಾದ ಪಡೆಯುತ್ತಾರೆ. ಅವರು ಯಾರ ಸಹಾಯವೂ ಇಲ್ಲದೆ ವಾಕರ್ (Walker) ಹಿಡಿದುಕೊಂಡು ಬಂದು ಎಲ್ಲರನ್ನೂ ಆನಂದತುಂದಿಲರನ್ನಾಗಿ ಮಾಡುತ್ತಾರೆ. ಎಲ್ಲರೂ ಎದ್ದು ನಿಂತು ಅವರನ್ನು ಗೌರವಿಸುತ್ತಾರೆ. ಅವರು ಶತಾಯುಷಿಗಳಾಗಿದ್ದೂ ಯಾವ ರೀತಿಯಿಂದಲೂ ಅನಾರೋಗ್ಯಕ್ಕೆ ಈಡಾಗಿಲ್ಲ. ಭಗವಂತನು ಅವರಿಗೆ ಇನ್ನೂ ಹೆಚ್ಚು ಕಾಲ ಆರೋಗ್ಯ, ದೀರ್ಘಾಯುಷ್ಯವನ್ನು ಕರುಣಿಸಲೆಂದು ಪ್ರಾರ್ಥಿಸೋಣ!



# ನಿಟ್ಟೂರು ಶ್ರೀನಿವಾಸರಾಯರು = ಸಾಂಸ್ಕೃತಿಕ ಪ್ರಾಣವಾಯು

.................... ✍ ಪ್ರೊ|| ಜಿ.ಎಸ್. ಸಿದ್ಧಲಿಂಗಯ್ಯ*

ಡಿ.ವಿ.ಜಿ. ಅವರ ಶತಮಾನೋತ್ಸವದ ಆಚರಣೆಯ ಸಂದರ್ಭದಲ್ಲಿ ಉತ್ಸವ ಸಮಿತಿಯವರೊಡನೆ ಸಾಹಿತ್ಯಕ ಕಾರ್ಯಕ್ರಮಗಳಲ್ಲಿ ಪಾಲ್ಗೊಳ್ಳುವ ಭಾಗ್ಯ ನನ್ನದಾಗಿತ್ತು. ಆ ಕಾರ್ಯಕ್ರಮಗಳು ಇಡೀ ಕರ್ನಾಟಕದ ತುಂಬ ನಡೆದವು; ಕೇರಳದ ಕಾಸರಗೋಡಿನಲ್ಲೂ ನಡೆದವು. ಅಂಥ ಕಾರ್ಯಕ್ರಮಗಳಲ್ಲಿ ಪಾಲ್ಗೊಳ್ಳುವಾಗ ಜೊತೆಗಿದ್ದವರು ಜಿ.ನಾರಾಯಣ ಹಾಗೂ ನಿಟ್ಟೂರು ಶ್ರೀನಿವಾಸರಾಯರು. ಜಿ. ನಾರಾಯಣ ಅವರು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದವರು. ಹೆಸರಾದ ಪತ್ರಿಕೆಯ ಸಂಪಾದಕರು, ಜೊತೆಗೆ ಕಲಾಪರಿಷತ್ತಿನ ಅಧ್ಯಕ್ಷರು, ನಿಟ್ಟೂರು ಶ್ರೀನಿವಾಸರಾಯರೋ ಕರ್ನಾಟಕ ರಾಜ್ಯದ ಉಚ್ಚ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರಾಗಿದ್ದವರು, ಕೇಂದ್ರ ಸರ್ಕಾರದ ಪ್ರಥಮ ವಿಜಿಲೆನ್ಸ್ ಕಮೀಶನರ್ ಆಗಿ ನಾಲ್ಕು ವರ್ಷಗಳ ದೀರ್ಘಕಾಲ ಕಾರ್ಯನಿರ್ವಹಿಸಿದ್ದರು. ಜೊತೆಗೆ ಭ್ರಷ್ಟಾಚಾರ ನಿರ್ಮೂಲನ ಸಮಿತಿಯ ಆಯುಕ್ತರಾಗಿ ಕೂಡ ಸೇವೆ ಸಲ್ಲಿಸುತ್ತಿದ್ದರು. ಇಷ್ಟಾದರೂ ಅವರದು ಸರಳ ಸಾತ್ವಿಕ ಸ್ವಭಾವ. ತಾನು ಅಖಿಲ ಭಾರತ ಅಧಿಕಾರಿಯಾಗಿದ್ದೇನೆ ಎಂಬ ಧೋರಣೆಯಾಗಲಿ, ಕರ್ನಾಟಕದ ಉಚ್ಚನ್ಯಾಯಾಲಯದ ಸರ್ವೋಚ್ಚ ನ್ಯಾಯಾಮೂರ್ತಿಯಾಗಿದ್ದೆ ಎಂದು ಹೆಮ್ಮೆಯಾಗಲಿ ಎಂದೂ ತೋರದ ಸಾತ್ವಿಕರಾಗಿದ್ದರು. ಇಂಥವ

* ೨೦೩, ಲಲಿತ ಕೃಪ, ೭ನೇ 'ಎ' ಕ್ರಾಸ್, ವಿಜಯನಗರ ಪೂರ್ವ ಆರ್.ಪಿ.ಸಿ. ಲೇಔಟ್, ಬೆಂಗಳೂರು - ೫೬೦ ೦೪೦

ರೊಬ್ಬರ ಜೊತೆ ಡಿವಿಜಿ ಸಾಹಿತ್ಯೋತ್ಸವದಲ್ಲಿ ಪಾಲ್ಗೊಂಡು ಭಾಷಣ ಮಾಡುವ ಹೆಮ್ಮೆ ಮಾತ್ರ ನನ್ನದಾಗಿತ್ತು. ಆ ಪ್ರವಾಸ ಸಮಯದಲ್ಲಿ ಜಿ. ನಾರಾಯಣ ಅವರು ಒಂದು ರೀತಿಯ ಬ್ಲಾಟಿಂಗ್ ಪೇಪರ್ ಇದ್ದ ಹಾಗೆ. ನಾನೇ ಕಂಡ ಕನ್ನಡದ ಹಿರಿಯರನ್ನು ಕುರಿತ ನಮ್ಮ ಅಭಿಪ್ರಾಯ ಹಾಗೂ ಇರಾದೆಗಳನ್ನವರು ಅತ್ಯಂತ ಆಸಕ್ತಿಯಿಂದ ಕ್ರೋಢೀಕರಿಸುತ್ತಾ ಇದ್ದರು. ಆಗೋ ನಿಟ್ಟೂರು ಶ್ರೀನಿವಾಸರಾಯರು ಮೂಕ ಪ್ರೇಕ್ಷಕರು. ಆದರೆ ಒಂದೊಂದು ಊರು ಮುಟ್ಟಿದಾಗಲೂ ಆ ಊರಿಗೆ ಸಂಬಂಧಿಸಿದಂತೆ ವ್ಯಕ್ತಿಗಳನ್ನು ಹಾಗೂ ವಿಷಯ ಗಳನ್ನು ಮೆಲ್ಲನೆ ಮೆಲುಕು ಹಾಕುತ್ತಿದ್ದರು. ಆ ಮೆಲುಕು ಹಾಕುವ ಕ್ರಿಯೆಯೂ ಒಂದು ಆತ್ಮೀಯತೆಯ ಕ್ರಿಯೆಯೇ. ಅಲ್ಲಿ ಮಾತುಗಾರಿಕೆಯ ಮೋಡಿ ಇರುತ್ತಿರಲಿಲ್ಲ. ತಾನು ಆಡುವ ಮಾತು ಕೇಳುವವರಿಗೆ ರುಚಿಕಟ್ಟಾಗಿರಬೇಕು ಎಂದು ಮೋಹ ಇರುತ್ತಿರಲಿಲ್ಲ. ಆದರೆ ನಿಟ್ಟೂರರ ಸ್ಮೃತಿಶಕ್ತಿ ಸಂಪನ್ನತೆ ಎಷ್ಟು ಅಗಾಧವಾಗಿರುತ್ತಿತ್ತು ಎಂದರೆ ಕೇಳುವವರು ಮಾತ್ರ ಮುಗ್ಧರಾಗಿ ಬಿಡುತ್ತಿದ್ದರು. ಅದಕ್ಕೆ ಕಾರಣ ಅವರಿಗೆ ನಾಡಿನ ಸಂಸ್ಕೃತಿಯಲ್ಲಿದ್ದ ಆಸಕ್ತಿ ಹಾಗೂ ಕುತೂಹಲಗಳು .

ಅವರ ನೆನಪುಗಳು ಒಂದೆರಡು ರೀತಿಯವಲ್ಲ; ನೂರಾರು ರೀತಿಯವು, ಸಹಸ್ರಾರು ಬಗೆಯವು ಆ ನೆನಪುಗಳಲ್ಲಿ ವ್ಯಕ್ತಿಗಳಿದ್ದರು -ಮೌಲ್ಯಗಳಿಗಾಗಿ ಬದುಕಿದವರು. ಅಂಥವ ರಲ್ಲಿ ಅವರ ವಿದ್ಯಾಗುರುಗಳಲ್ಲಿ ಒಬ್ಬರಾಗಿದ್ದ ಎಂ.ಆರ್.ಶ್ರೀ.ಯವರು ಒಬ್ಬರು -ಕನ್ನಡದ ಅಶ್ವಿನೀ ದೇವತೆಗಳೆಂದು ಖ್ಯಾತರಾಗಿದ್ದ ಟಿ.ಎಸ್.ವೆಂಕಣ್ಣಯ್ಯ ಮತ್ತು ಎ.ಆರ್. ಕೃಷ್ಣಶಾಸ್ತ್ರಿಗಳು ಅವರಿಗೆ ತೀರ ಹತ್ತಿರದವರಾಗಿ ಕನ್ನಡದ ದೀಕ್ಷೆಯನ್ನಿತ್ತ ಗುರುಗಳಾಗಿ ದ್ದರು. ಅಂಥವರ ಬಗೆಗಿನ ನೆನಪಿನ ಬುತ್ತಿಯನ್ನು ಅವರು ನಿಸ್ಸಂಕೋಚವಾಗಿ ಉಣಬಡಿಸು ತ್ತಿದ್ದರು ಸಾಂಸ್ಕೃತಿಕ ಹಬ್ಬದ ಅಡುಗೆಯನ್ನು. ಕನ್ನಡ ಸಾಹಿತ್ಯ ಪರಿಷತ್ತನ್ನು ಕುರಿತಂತೆ ಅಂತು ಅವರ ನೆನಪಿನ ಉಗ್ರಾಣ ಬಹು ಶ್ರೀಮಂತವಾದುದು. ಡಿವಿಜಿ ವಸಂತ ಸಾಹಿತ್ಯೋತ್ಸವ ಆರಂಭಿಸಿದ್ದು; ಸಾಹಿತ್ಯ ಸಮ್ಮೇಳನಗಳ ಕತೆ ಇವುಗಳಲ್ಲಿ ನಮಗೆ ಒಂದು ರೀತಿಯ ಹಬ್ಬದ ತುಣುಕು.

ನನಗೆ ಸರಿಯಾಗಿ ನೆನಪಾಗುತ್ತಿಲ್ಲ- ನಾನಾಗ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷನಾಗಿ ಆಯ್ಕೆಯಾಗಿದ್ದೆ. ನನ್ನ ಗೃಹಿಣಿಯೊಂದಿಗೆ ಬಹುಶಃ ಚಿಕ್ಕಮಗಳೂರುನಿಂದ ಬೆಂಗಳೂರಿಗೆ ಹೊರಟಿದ್ದೆ- ನಮ್ಮ ಹಳೆಯ ಫಿಯಟ್ ಕಾರಿನಲ್ಲಿ, ನಮ್ಮ ಜೊತೆಗೆ ನಿಟ್ಟೂರು ಶ್ರೀನಿವಾಸ ರಾಯರು ಇದ್ದರು. ನಾನೇ ಕಾರಿನ ಚಾಲಕ ಆಗಿದ್ದೆ. ನಿಟ್ಟೂರರು ತಮಾಷೆಯಾಗಿಯೇ ಪ್ರಶ್ನಿಸಿದರು “ನೀವು ಡ್ರೈವರ್ ಇಟ್ಟುಕೊಂಡಿದ್ದೀರಾ?” ನಾನು ಉತ್ತರಿಸಿದ್ದೆ ನಾನು- “ಇಟ್ಟುಕೊಳ್ಳಬೇಕೆಂದಿದ್ದೆ ಆದರೆ ಅವನಿಗೆ ಸಂಬಳ ಕೊಟ್ಟ ಮೇಲೆ ಊಟಕ್ಕೆ ಅವನ ಮನೆಗೇ

ಹೋಗಬೇಕಾಗುತ್ತದಲ್ಲ!" ಹೊಟ್ಟೆ ತುಂಬ ನಕ್ಕ ನಿಟ್ಟೂರರು ನನ್ನ ಜೊತೆಯಲ್ಲಿದ್ದ ಶ್ರೀಮತಿಯವರಿಗೆ ವಿನೋದವಾಗಿಯೇ ಪ್ರಶ್ನಿಸಿದ್ದರು. "ಇವರು ಸುರಕ್ಷಿತವಾಗಿ ವಾಹನ ನಡೆಸುತ್ತಾರಾ?" ಗೃಹಿಣಿ ನಗುತ್ತಾ ಈವರೆಗೆ ಸುರಕ್ಷಿತವಾಗಿಯೇ ನಡೆಸಿದ್ದಾರೆ ಎಂದು ಶಿಫಾರಸು ಮಾಡಿದ್ದರು. ಇಷ್ಟು ನೆನಪು ಮಾಡಿಕೊಳ್ಳಲು ಕಾರಣ ಅವರ ಸರಳತೆ ಸ್ನೇಹಮಯತೆ ಹಾಗೂ ವಿನೋದಪ್ರಿಯತೆಯನ್ನು ಸೂಚಿಸುವುದು.

ನಮ್ಮ ವಾಹನ ಹಾಸನದ ಸಮೀಪವಾದಾಗ ನಿಟ್ಟೂರು ತಟ್ಟನೆ ಕಾರನ್ನು ನಿಲ್ಲಿಸಲು ಹೇಳಿದರು, ಒಂದು ನಿಮಿಷ ಪಕ್ಕದಲ್ಲಿ ಕಾಲುದಾರಿಯಲ್ಲಿ ಹೋಗುತ್ತಿದ್ದ ವ್ಯಕ್ತಿಯನ್ನು ಕರೆದು, ಇಲ್ಲಿ ವೇಣುಗೋಪಾಲಸ್ವಾಮಿ ದೇವಾಲಯ ಇದೆಯಲ್ಲ - ದಯವಿಟ್ಟು ತಿಳಿಸುವಿರಾ ಎಂದು ಕೇಳಿದರು ಒಂದು ಕ್ಷಣ ತಬ್ಬಿಬ್ಬಾದ ಆತ ನೆನಪು ಮಾಡಿಕೊಂಡು ಇಲ್ಲಿಂದ ಎಡಕ್ಕೆ ತಿರುಗಿದರೆ ಒಂದು ಕಿಲೋಮೀಟರ್ ದೂರದಲ್ಲೇ ಆ ದೇವಾಲಯ ಇದೆ ಎಂದು ತಿಳಿಸಿದ್ದು; ಅದರಂತೆ ಸಾವು ಅಲ್ಲಿ ಹೋದಾಗ ಆ ವೇಣುಗೋಪಾಲ ದೇವಾಲಯದ ಎದುರು ಮತ್ತೊಂದು ಕೃಷ್ಣದೇವಾಲಯ ಇದ್ದದ್ದು ಇದನ್ನೆಲ್ಲ ಗಮನಿಸಿದ ನನಗೆ ಮತ್ತು ನನ್ನ ಗೃಹಿಣಿಗೆ ಆಶ್ಚರ್ಯದ ಮೇಲೆ ಆಶ್ಚರ್ಯ -ನಿಟ್ಟೂರರ ನೆನಪಿನ ಶಕ್ತಿಯನ್ನು ಕುರಿತು.

ಅದ್ಭುತವಾದ ಆಯಾಮಗಳ ದೇವಾಲಯಗಳ ಶಿಲ್ಪವನ್ನು ಮನದಣಿಯೆ ನೋಡಿ ಆನಂದಿಸಿ ಮಧ್ಯಾಹ್ನದ ಊಟಕ್ಕೆ ಹಾಸನದ ಹೋಟೆಲೊಂದನ್ನು ಹೊಕ್ಕೆವು. ನಾವಂತೂ ಊಟ ಮಾಡಿದೆವು. ಆದರೆ ನಿಟ್ಟೂರರ ಊಟ ಎಂದರೆ ಎರಡು ಮಿಳ್ಳೆ ಮೊಸರು. ಬಹುಶಃ ಅದನ್ನೊಂದಿಷ್ಟು ಒಂದು ಚಮಚೆ ಸಕ್ಕರೆ ಸೇರಿಸಿಕೊಳ್ಳಬೇಕು ಅವರು. ದಾರಿಯುದ್ದಕ್ಕೂ ಅವರು ಆ ದೇವಾಲಯಗಳ ಕತೆಯನ್ನು ವಿಸ್ತಾರವಾಗಿ ನಿರೂಪಿಸಿದರು. ಬೆಂಗಳೂರನ್ನು ತಲುಪಿ ಅವರನ್ನು ಅವರ ಮನೆಯ ಬಾಗಿಲಿಗೆ ಕರೆದೊಯ್ದಾಗ ಅತ್ಯಂತ ಅಕ್ಕರೆಯಿಂದ ನಮ್ಮನ್ನ ಬೀಳ್ಕೊಟ್ಟರು. ನಿನ್ನ ಜೊತೆಯ ಪ್ರಯಾಣ ತುಂಬ ಆನಂದದಾಯಕವಾಗಿತ್ತು ಎಂದು ಕೃತಜ್ಞತೆ ಸೂಚಿಸುತ್ತ ನನ್ನ ಗೃಹಿಣಿ ಕಡೆ ತಿರುಗಿ, ನಮ್ಮ ಅಧ್ಯಕ್ಷರನ್ನು ಚೆನ್ನಾಗಿ ನೋಡಿಕೊಳ್ಳಿ, ಎಂದವರು ಮರುಕ್ಷಣವೇ ಎಚ್ಚರಗೊಂಡವರಂತೆ, ಈಗ ನೀವು ಚೆನ್ನಾಗಿ ನೋಡಿಕೊಳ್ಳುತ್ತಿಲ್ಲ ಎಂದಲ್ಲ, ಅಂಥ ಟೀಕೆ ನಾನು ಮಾಡಲಾರೆ- ಇವರು ನಮ್ಮ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರು ಅಂದ ಮೇಲೆ ನಮ್ಮೆಲ್ಲರ ಅಧ್ಯಕ್ಷರಲ್ಲವೆ? ಅದಕ್ಕಾಗಿ ಹೀಗೆ ಹೇಳಿದೆ ಎಂದು ಹೆಮ್ಮೆಯಿಂದ ನುಡಿದರು. ಅಷ್ಟೇ ಅಲ್ಲ ಮತ್ತೆ ಸಂದರ್ಭ ಒದಗಿದರೆ ಖಂಡಿತ ನಿಮ್ಮ ಸಹವಾಸ ಕಳೆದುಕೊಳ್ಳುವುದಿಲ್ಲವೆಂದು ಸಂತೋಷ ವೃತ್ತಿಗಳನ್ನು ವ್ಯಕ್ತಪಡಿಸಿದರು-ಅವರ ಆತ್ಮೀಯತೆ ಹಾಗೂ ಕನ್ನಡಾಭಿಮಾನಗಳು ನಿಜವಾಗಿಯೂ ನಮ್ಮ

ಕರುಳನ್ನು ತಬ್ಬಿದವು. ನಿಟ್ಟೂರರಿಗೆ ಸಂಬಂಧಿಸಿದ ನೆನಪುಗಳು ಒಂದೆರಡಲ್ಲ. ಅವುಗಳಲ್ಲಿ ಒಂದು ೧೯೬೭ರಲ್ಲಿ ಗುಬ್ಬಿಯಲ್ಲಿ ನಡೆದ ತುಮಕೂರು ಜಿಲ್ಲಾ ಸಾಹಿತ್ಯ ಸಮ್ಮೇಳನ. ಅದರ ಅಧ್ಯಕ್ಷರಾಗಿ ನಿಯೋಜಿತರಾಗಿದ್ದರು. ಶ್ರೀಯುತ ನಿಟ್ಟೂರು ಶ್ರೀನಿವಾಸರಾಯರು ಅಪ್ಪಟ ಗಾಂಧಿವಾದಿಯೂ ಅಚ್ಚಗನ್ನಡ ಅಭಿಮಾನಿಯಾಗಿಯೂ, ಸಾಹಿತ್ಯ ಪೋಷಕರೂ ಆಗಿದ್ದ ನಿಟ್ಟೂರರಿಗೆ ಅಧಿಕಾರ ಹಸ್ತಾಂತರ ಮಾಡಲು ನಾನು ಗುಲ್ಬರ್ಗಾದಿಂದ ಗುಬ್ಬಿಗೆ ಹೋಗಿದ್ದೆ. ಅದಕ್ಕೆ ಕಾರಣಗಳೇ ಎರಡು. ಒಂದು, ನಾನಾಗ ಗುಲ್ಬರ್ಗಾ ವಿಶ್ವವಿದ್ಯಾಲಯದ ಆಹ್ವಾನದ ಮೇಲೆ ಅಲ್ಲಿನ ಬಸವಾದಿ ಶರಣ ಸಾಹಿತ್ಯ ಕೇಂದ್ರದ ನಿರ್ದೇಶಕನಾಗಿದ್ದೆ. ಎರಡನೆಯದು ನಿಟ್ಟೂರರು ತುಮಕೂರು ಜಿಲ್ಲೆಯ ಐದನೆಯ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರೆ ನಾನು ೧೯೬೬ರಲ್ಲಿ ಮಧುಗಿರಿಯಲ್ಲಿ ನಡೆದ ನಾಲ್ಕನೆಯ ಜಿಲ್ಲಾ ಸಾಹಿತ್ಯ ಸಮ್ಮೇಳನದ ಅಧ್ಯಕ್ಷನಾಗಿದ್ದೆ, ಹೀಗಾಗಿ ಗುಬ್ಬಿಗೆ ನಾನು ಹೋಗಬೇಕಾದ ಅನಿವಾರ್ಯತೆ ಒದಗಿತ್ತು.

ನಿಟ್ಟೂರರಿಗೂ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆಗೂ ಏನು ಸಂಬಂಧ ಎಂದು ನಿಮಗೆ ಬೆರಗಾಗಬಹುದು. ಅವರ ಕನ್ನಡದ ಪ್ರೇಮ ಹಾಗೂ ಪರಿಷತ್ತಿನೊಂದಿಗೆ ಅವರಿಗಿದ್ದ ಬಾಂಧವ್ಯವನ್ನು ಗಮನಿಸಿದ್ದವರಿಗೆ ಅಂಥ ಪ್ರಶ್ನೆ ತಮಾಷೆಯಾಗಿ ಕಾಣುತ್ತಿತ್ತು. ಏಕೆಂದರೆ ನಿಟ್ಟೂರರು ಕನ್ನಡಕ್ಕಾಗಿ ನನ್ನ ರಕ್ತವನ್ನೆ ಸುರಿಸೇನು ಎನ್ನುವ ಆರ್ಭಟ ಮಾಡಿದವರಲ್ಲ. ಅಷ್ಟೇ ಅಲ್ಲ, ಕನ್ನಡಕ್ಕಾಗಿ ಪ್ರಾಣತ್ಯಾಗಕ್ಕೂ ಸಿದ್ಧ ಎಂಬ ಆವೇಶವೂ ಅವರಲ್ಲಿರಲಿಲ್ಲ. ಆದರೆ ಅವರ ಕನ್ನಡಾಭಿಮಾನ ಎನ್ನುವುದು ಮೌಲ್ಯಾಧಾರಿತವಾದದ್ದು.

ಕನ್ನಡ ಕನ್ನಡ ಎಂದು ಘೋಷಣೆ ಕೂಗುವ ಬದಲು ಅವಕಾಶ ದೊರೆತಾಗ ಕನ್ನಡವನ್ನು ನಿರಾತಂಕವಾಗಿ ಬಳಸಿದವರು, ಬೆಳೆಸಿದವರು ಅವರು. ಸತ್ಯ ಶೋಧನ ಪುಸ್ತಕ ಭಂಡಾರ ಮತ್ತು ಪ್ರಕಾಶನ ಮಂದಿರದ ಮೂಲಕ ಕನ್ನಡದ ಉದಯೋನ್ಮುಖರ ಕೃತಿಗಳನ್ನವರು ಪ್ರಕಟಿಸಿದ್ದರು. ಟಿ.ಎಸ್. ವೆಂಕಣ್ಣಯ್ಯ ಹಾಗೂ ಎ.ಆರ್. ಕೃಷ್ಣಶಾಸ್ತ್ರಿಗಳು ನಡೆಸುತ್ತಿದ್ದ ಪ್ರಬುದ್ಧ ಕರ್ಣಾಟಕ ಸಾಹಿತ್ಯ ಸಂಚಿಕೆಯ ಪ್ರಸಂಗ ಕಾರ್ಯವನ್ನು ನೆರವೇರಿಸಿದ್ದರು. ಕರ್ನಾಟಕ ಸಂಘದ ಕಾರ್ಯಕ್ರಮಗಳಿಗೆ ಸಂಬಂಧಿಸಿದಂತೆ ತಮ್ಮ ಗುರುಗಳ ಜೊತೆಗೆ ತ್ರಿಕರಣಪೂರ್ವಕ ದುಡಿಯುತ್ತಿದ್ದರು. ಇಂಥ ನಿಟ್ಟೂರರು ಅಧ್ಯಕ್ಷರಾಗಿ ಅಂದಿನ ಸಮ್ಮೇಳನವನ್ನು ಅತ್ಯಂತ ಯಶಸ್ವಿಯಾಗಿ ನಡೆಸಿಕೊಟ್ಟರು. ಅವರ ಭಾಷಣದಲ್ಲಿ ಅಚ್ಚಗನ್ನಡ ಪ್ರೇಮ ಹಾಗೂ ಸಾಂಸ್ಕೃತಿಕ ಹಿರಿಮೆಗಳು ತುಳುಕದೆ ಅಲ್ಲಿನ ಜನರ ಮನಸ್ಸನ್ನು ಗೆದ್ದಿದ್ದವು. ಒಂದಿಷ್ಟು ಬೀಗದ, ಬಾಗದ ವ್ಯಕ್ತಿತ್ವದ ನಿಟ್ಟೂರರು ಕನ್ನಡಿಗರ ಹೃದಯವನ್ನು ಸೂರೆ ಹೊಡೆದಿದ್ದರು, ತಮ್ಮ ಸರಳ ಸಜ್ಜನಿಕೆ ಹಾಗೂ ವ್ಯಕ್ತಿತ್ವದ ಪರಿಶುಭ್ರತೆಯಿಂದ

ಅಂದು ಅವರು ವೇದಿಕೆಯಲ್ಲಿ ನಿಂತಾಗ ತಟ್ಟನೆ ನೆನಪಾದುದು ಅವರ ಕನ್ನಡ ಪ್ರೇಮಕ್ಕೆ ಸಂಬಂಧಿಸಿದ ಒಂದು ಘಟನೆ.

ನಿಟ್ಟೂರರು ಆಗ ಅಂದಿನ ವಿಶಾಲ ಮೈಸೂರಿನ ಸರ್ವೋಚ್ಚ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರಾಗಿದ್ದರು. ಪದನಿಮಿತ್ತ ರಾಜ್ಯಪಾಲರೂ ಆಗಿದ್ದರು. ಸ್ವಾತಂತ್ರ್ಯೋತ್ಸವದಲ್ಲಿ ಪಾಲ್ಗೊಳ್ಳುವ ಅವಕಾಶ ಅವರದು. ಕನ್ನಡ ಎಂದರೆ ಅನೇಕರಿಗೆ ಅದೊಂದು ಆವೇಶ ತರಿಸುವ ಶಕ್ತಿ, ಕೆಲವರಿಗೆ ತಮ್ಮ ಆವೇಶಗಳಿಗೆಲ್ಲ ಅಭಿವ್ಯಕ್ತಿ ನೀಡಬಹುದಾದ ಒಂದು ಪ್ರಚಾರ ಅವಕಾಶ. ಆಶ್ಚರ್ಯ ಎಂದರೆ ನಿಟ್ಟೂರು ಶ್ರೀನಿವಾಸರಾಯರು ಸ್ವಾತಂತ್ರ್ಯೋತ್ಸವ ಸಮಾರಂಭದಲ್ಲಿ ಪಾಲ್ಗೊಂಡು ಅಪೂರ್ವವಾದುದನ್ನು ಸಾಧಿಸಿ ತೋರಿಸಿದರು. ತಮ್ಮ ಸಂದೇಶವನ್ನು ಅವರು ಅಚ್ಚಗನ್ನಡದಲ್ಲಿ ಚೊಕ್ಕವಾಗಿ ನೀಡಿದರು. ಅವರ ಕನ್ನಡದ ಪ್ರೇಮ ಸಹಜವಾಗಿತ್ತು ಹಾಗೂ ಸರಳವಾಗಿತ್ತು. ಅಂಥ ಭಾಷಣದ ವರದಿಯನ್ನು ಓದಿದ ಶ್ರೀ ಕುವೆಂಪು ಅವರು ಕಾವ್ಯರೂಪದಲ್ಲಿಯೇ ತಮ್ಮ ತೃಪ್ತಿ ಹಾಗೂ ಅಭಿಮಾನಗಳನ್ನು ಅಭಿವ್ಯಕ್ತಗೊಳಿಸಿದ್ದು ಹೀಗೆ:

> **"ನನ್ನ ಹೊಟ್ಟೆಗೆ ಹಂಡೆ ಹಾಲು ಹೊಯ್ದಂತಾಯ್ತು**
> **ಕನ್ನಡದಿ ಸ್ವಾತಂತ್ರ್ಯ ಸಂದೇಶವನ್ನು ನೀವು**
> **ಕೊಟ್ಟಿರೆಂಬುದನೋದಿ ಪತ್ರಿಕೆಯೊಳಿಂದು!"....**

ಇಂಥ ಹೆಮ್ಮೆಗೆ ಕಾರಣರಾದ ನಿಟ್ಟೂರರು ಎರಡು ಶತಮಾನಗಳಲ್ಲಿ ಕಾಲೂರಿ ನಿಂತವರು. ಕೇವಲ ಆ ಕಾಲದಲ್ಲಿ ಮಾತ್ರವಲ್ಲ- ವ್ಯಕ್ತಿತ್ವದಲ್ಲೂ ತುಂಬಾ ಎತ್ತರದ ವ್ಯಕ್ತಿ, ನಿಗರ್ವಿಯಾದ ಅವರು ಇಂದೂ ಕನ್ನಡ ಸಾಹಿತ್ಯ ಪರಿಷತ್ತು ಅಥವಾ ಇನ್ನಾವುದೇ ಸಂಸ್ಥೆಯ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಅತ್ಯಂತ ಶ್ರದ್ಧೆಯಿಂದ ಪಾಲ್ಗೊಳ್ಳುತ್ತಾರೆ. ಸಕಾಲಕ್ಕೆ ಸಭೆಗೆ ಆಗಮಿಸಿ ವಿಳಂಬ ಮಾಡಿಬರುವ ಅತಿಥಿ, ಮುಖ್ಯ ಅತಿಥಿ ಹಾಗೂ ಮಂತ್ರಿ ಮಹೋದಯರಿಗಾಗಿ ಸದ್ದಿಲ್ಲದೆ ಕಾದು ಕುಳಿತಿರುತ್ತಾರೆ. ತಡವಾಯಿತು, ಇನ್ನೂ ಬರಲಿಲ್ಲವೆ ಎಂದು ಗೊಣಗಾಡುವುದಿಲ್ಲ. ಕಾರ್ಯಕ್ರಮದ ಉದ್ದಕ್ಕೂ ಕುಳಿತು ನಿಜವಾದ ಅರ್ಥದಲ್ಲಿ ಅದಕ್ಕೆ ಶೋಭೆಯನ್ನು ತರುತ್ತಾರೆ. ಜೊತೆಗೆ ಬಂದ ಬಂಧುಮಿತ್ರರ ಯೋಗಕ್ಷೇಮ ವಿಚಾರಿಸಿ ಆತ್ಮೀಯರಾಗಿ ಬಿಡುತ್ತಾರೆ.

ಅವರು ನಮ್ಮ ಮಧ್ಯೆ ಇರುವುದು ತಂಗಾಳಿ ಇದ್ದಂತೆ. ಗಾಳಿ ನಾನಿದ್ದೇನೆಂದು ಎಂದೂ ಘೋಷಣೆ ಮಾಡುವುದಿಲ್ಲ. ಆದರೆ ಪ್ರಾಣವಾಯುವಾಗಿ ಇರುತ್ತದೆ, ನಮ್ಮೆಲ್ಲರಿಗೂ ಅಂಥ ಸಾಂಸ್ಕೃತಿಕ ಪ್ರಾಣವಾಯು ಆಗಿರುವ ನಿಟ್ಟೂರರು ಒಂದು ರೀತಿಯಲ್ಲಿ ತೃಪ್ತರು. ಇನ್ನೊಂದು ರೀತಿಯಲ್ಲಿ ಅತೃಪ್ತರು. ಇಂದು ಜನರಲ್ಲಿ ಪ್ರಾಮಾಣಿಕತೆ ಮಾಯವಾಗು

ತ್ತಿರುವುದು ಅವರನ್ನು ಖಿನ್ನತೆಗೆ ತಳ್ಳುತ್ತದೆ. ಆದರೂ ಅವರು ನಿರಾಶೆಗೊಳ್ಳುವುದಿಲ್ಲ. ಒಳ್ಳೆಯ ಬದುಕನ್ನು ಕಂಡೇನೆನ್ನುವ ಭರವಸೆ ಅವರದು. ಆ ಭರವಸೆಯೇ ಅವರ ಜೀವನೋತ್ಸಾಹದ ಸ್ಫೂರ್ತಿಶಕ್ತಿಯಾಗಿದೆ. ಅವರು ಇನ್ನಷ್ಟು ಕಾಲ ನಮ್ಮೊಂದಿಗಿದ್ದು ಮೌಲ್ಯಗಳ ಸ್ತಂಭವಾಗಿರಲಿ, ಕನ್ನಡಿಗರ ಬದುಕು ಸಾತ್ವಿಕ ಶಕ್ತಿ ಸಂಪನ್ನವಾಗಲಿ ಎಂದು ಹೃತ್ಪೂರ್ವಕವಾಗಿ ಹಾರೈಸೋಣ.



# ನಾ ಕಂಡ ಅಪರೂಪದ ಪುರುಷೋತ್ತಮ ನಿಟ್ಟೂರು ಶ್ರೀನಿವಾಸರಾಯರು

. . . . . . . . . . . . . . . . . . . . . . . . . ✍ *ಡಿ. ಎಸ್. ವೀರಯ್ಯ**

ಉಚ್ಚ ನ್ಯಾಯಾಲಯದ ನ್ಯಾಯಾಧೀಶರ ನಿವೃತ್ತಿ ವಯಸ್ಸು ೬೦. ಯಾವುದೇ ಮನುಷ್ಯ ನಿವೃತ್ತಿಯಾದ ೧೫-೨೦ ವರ್ಷಗಳು ಬದುಕಿದ್ದರೆ ಅದು ದಾಖಲೆ. ಅದೆಷ್ಟೋ ಮಂದಿ ಉಚ್ಚ ನ್ಯಾಯಾಲಯದ ನ್ಯಾಯಾಧೀಶರು ನಿವೃತ್ತಿ ಆಗಿದ್ದಾರೆ. ಅವರಲ್ಲಿ ಬಹುಪಾಲು ಮರಣ ಹೊಂದಿದ್ದಾರೆ. ಯಾರಾದರೂ ಒಬ್ಬ ನ್ಯಾಯಾಧೀಶರು ತಾನು ನಿವೃತ್ತಿಹೊಂದಿದ ಮೇಲೆ ೪೦ ವರ್ಷಗಳು ಬದುಕಿದ್ದರೆ ಅದರಲ್ಲೂ ಇಂದಿಗೂ ಹದಿಹರೆಯದ ಯುವಕರಂತೆ ಗಟ್ಟಿಮುಟ್ಟಾಗಿ ಇದ್ದು ತನ್ನ ೧೦೦ ವರ್ಷಗಳ ದಾಖಲೆ ನಿರ್ಮಿಸುವ ಹಂತದಲ್ಲಿ ಲವಲವಿಕೆಯಿಂದ ಸಕ್ರಿಯ ವಾಗಿ ಭಾಗವಹಿಸಿ ಇಂದಿಗೂ ಬದುಕಿದ್ದಾರೆಂದರೆ ಮತ್ತಾರೂ ಅಲ್ಲ. ಅವರೇ ನಿಟ್ಟೂರು ಶ್ರೀನಿವಾಸರಾಯರು.

ನಿಟ್ಟೂರು ಶ್ರೀನಿವಾಸರಾಯರು ಗಾಂಧಿಯುಗದವರು. ಗಾಂಧಿವಾದಿಗಳ, ಸರಳತೆ, ಸಜ್ಜನಿಕೆ, ಪ್ರಾಮಾಣಿಕತೆ, ಪರಿಶ್ರಮಕ್ಕೆ ಮತ್ತೊಂದು ಹೆಸರು ನಿಟ್ಟೂರು ಶ್ರೀನಿವಾಸರಾಯರು. ಅದೇ ಪ್ರಸನ್ನತೆ, ಹಸನ್ಮುಖಿ, ಪ್ರೀತ್ಯಾದರಗಳಿಂದ ತುಂಬಿದ ಮಾತುಕತೆ. ಅವರ ಬದುಕಿನುದ್ದಕ್ಕೂ ಅಂಟಿಕೊಂಡು ಬಂದ ಅಸಾಧಾರಣ ಗುಣಗಳು.

---

* ೭೩, ಬನಶಂಕರಿ ೩ನೇ ಹಂತ, ೮ನೇ ಮುಖ್ಯರಸ್ತೆ
ಬಿ.ಡಿ.ಎ. ಬಡಾವಣೆ (ಆವಲಹಳ್ಳಿ)
ಗಿರಿನಗರ, ಬೆಂಗಳೂರು - ೫೬೦ ೦೮೫

ಅವರನ್ನು ನಾನು ಮೊಟ್ಟಮೊದಲು ನೋಡಿದ್ದು ೧೯೭೮ರಲ್ಲಿ ವಿಧಾನಸೌಧದ ಮುಂದೆ. ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಒಕ್ಕೂಟ ಹಮ್ಮಿಕೊಂಡಿದ್ದ ಮದ್ಯಪಾನ ವಿರೋಧಿ ಕಾರ್ಯಕ್ರಮ. ಸಹಸ್ರಾರು ಸಂಖ್ಯೆಗಳಷ್ಟು ನೆರೆದಿದ್ದ ಜನಸ್ತೋಮ ಮಾನವ ಸರಪಳಿ ನಿರ್ಮಿಸಿ ವಿಧಾನಸೌಧದ ಮುಂದಿನ ಡಬ್ಬಲ್ ರೋಡಿನ ಇಕ್ಕೆಲಗಳಲ್ಲೂ ನಿಂತು ಸರ್ಕಾರದ ವಿರುದ್ಧ ಘೋಷಣೆ ಕೂಗುತ್ತಿದ್ದರು. ಆ ಪ್ರತಿಭಟನಾ ಕಾರ್ಯಕ್ರಮದ ಉದ್ಘಾಟನೆಯನ್ನು ನಿಟ್ಟೂರು ಶ್ರೀನಿವಾಸರಾಯರು ನೆರವೇರಿಸಿದ್ದರು. ಅವರ ಉದ್ಘಾಟನಾ ಭಾಷಣದಲ್ಲಿ ಸರ್ಕಾರದ ವಿರುದ್ಧ ವಾಗ್ದಾಳಿ ನಡೆಸಿದ್ದರು. ಮದ್ಯಪಾನವನ್ನು ಸರ್ಕಾರ ನಿಷೇಧಿಸದಿದ್ದರೆ ಈ ದೇಶದ ಬಡಜನತೆ ಉದ್ಧಾರವಾಗಲು ಸಾಧ್ಯವೇ ಇಲ್ಲ. ಸರ್ಕಾರ ತನ್ನ ಗಲ್ಲದ ಪೆಟ್ಟಿಗೆ ತುಂಬಲು ಜನತೆಗೆ ಮದ್ಯಪಾನ ನೀಡಿ ಮತ್ತೇರಿಸಲೆತ್ನಿಸಿದ್ದಾರೆ. ಅದೊಂದು ಜನವಿರೋಧಿ ಸರ್ಕಾರವೆಂದು ಸರ್ಕಾರದ ಮದ್ಯಪಾನ ಪರವಾದ ನೀತಿಯನ್ನು ಖಂಡಿಸಿದ್ದರು.

ಮಾತುಮಾತಿನಲ್ಲಿ ತೀಕ್ಷ್ಣತೆ ಇತ್ತು. ರಾಷ್ಟ್ರ ಪ್ರೇಮವಿತ್ತು. ಜನತೆಯ ಬದುಕಿನ ಕಾಳಜಿ ಇತ್ತು. ಎಷ್ಟೇ ಆದರೂ ಗಾಂಧಿಯನ್ನು ಕಂಡವರು. ಅವರೊಡನೆ ಒಡನಾಟ ಇಟ್ಟು ಕೊಂಡಿದ್ದವರು, ಗಾಂಧೀವಾದವನ್ನು ಪ್ರತಿಪಾದಿಸುತ್ತಿದ್ದವರು. ಗಾಂಧಿವಾದವನ್ನು ಮೈ ಗೂಡಿಸಿಕೊಂಡಿದ್ದರು. ಮಹಾತ್ಮ ಗಾಂಧಿಯವರ ಆತ್ಮ ಕಥನವನ್ನು ಹಿಂದಿಯಿಂದ ಕನ್ನಡಕ್ಕೆ ಭಾಷಾಂತರಿಸಿದ್ದವರು. ಗಾಂಧಿಯವರ ಜೀವನ ಚರಿತ್ರೆಯನ್ನು ಕನ್ನಡಿಗರಿಗೆ ಪರಿಚಯಿಸಿ ದವರು.

ಅವರ ಜನನ ೧೯೦೩. ತನ್ನ ಇಪ್ಪತ್ನಾಲ್ಕನೇ ವಯಸ್ಸಿನಲ್ಲೇ ಬಿ.ಎಸ್‌ಸಿ. ಪದವಿ ಮುಗಿಸಿ ಕಾನೂನು ಪದವೀಧರರೂ ಆಗಿ ೧೯೨೭ರಲ್ಲೆ ನ್ಯಾಯವಾದಿಗಳಾಗಿ ಕಪ್ಪು ಕೋಟ್ ಧರಿಸಿ ಕೋರ್ಟಿನ ಮುಂದೆ ನಿಂತು ವಾದ ಮಾಡಿದವರು. ಅವರ ಶ್ರದ್ಧೆ, ಪರಿಶ್ರಮ, ಪಾಂಡಿತ್ಯ ಅವರನ್ನು ೧೯೪೭ರಲ್ಲೆ ಅಟಾರ್ನಿ ಜನರಲ್ ಆಗಿ ನೇಮಕಗೊಳ್ಳುವಂತೆ ಮಾಡಿತು. ೧೯೪೯ರಲ್ಲೆ ಕರ್ನಾಟಕ ಉಚ್ಚನ್ಯಾಯಾಲಯದ ನ್ಯಾಯಾಧೀಶರಾಗಿ ನೇಮಕಗೊಳ್ಳುವಂತಾಯಿತು. ೧೯೬೧ನೇ ಇಸವಿಯಲ್ಲಿ ರಾಜ್ಯ ಉಚ್ಚನ್ಯಾಯಾಲಯದ ಮುಖ್ಯ ನ್ಯಾಯಾಧೀಶರನ್ನಾಗಿ ಮಾಡಿತು. ಆ ಅವಧಿಯಲ್ಲಿ ಮೈಸೂರು ಸಂಸ್ಥಾನದ ಗೌರ್ನರ್ ಕೂಡ ಆಗಿ ನಿವೃತ್ತರಾದರೆಂಬುದು ಇಂದಿನ ಪೀಳಿಗೆ ಅಚ್ಚರಿ ಪಡಬೇಕಾಗುತ್ತದೆ.

ಇವರ ಸೇವೆಯನ್ನು ಗುರುತಿಸಿದ ಭಾರತ ಸರ್ಕಾರ ಇವರನ್ನು ೧೯೬೪ರಲ್ಲಿ ಕೇಂದ್ರ ವಿಜಿಲೆನ್ಸ್ ಕಮೀಶನರನ್ನಾಗಿ ನೇಮಿಸಿತು ಎಂದರೆ ಈ ಹುದ್ದೆ ಅವರ ದಕ್ಷತೆಗೆ, ಕಾರ್ಯ ಚಟುವಟಿಕೆಗೆ ಸಿಕ್ಕ ಫಲ ಹಾಗೂ ಸಂದ ಗೌರವ.

**ನಿಟ್ಟೂರು ಶ್ರೀನಿವಾಸರಾಯರು ಹಾಗೂ ರಾಜಕೀಯ ಚಳವಳಿ**

ಇವರ ಸೇವೆ ಕೇವಲ ನ್ಯಾಯಾಕ್ಕೇ ಸೀಮಿತವಾಗದೆ ಸಾಮಾಜಿಕ ಸಾಂಸ್ಕೃತಿಕ ಹಾಗೂ ರಾಜಕೀಯ ರಂಗಕ್ಕೂ ವಿಸ್ತರಿಸಿ ಅವರನ್ನು ರಾಷ್ಟ್ರ ಕಂಡ ಸ್ವಾತಂತ್ರ್ಯ ಚಳವಳಿಗೂ ಕೊಂಡೊಯ್ದಿತು. ರಾಜ್ಯದಲ್ಲಿ ಮೈಸೂರು ಸಂಸ್ಥಾನ ಸ್ಥಾಪನೆಗಾಗಿ ನಡೆದ ೧೯೩೦, ೧೯೩೭ ಮತ್ತು ೧೯೪೨ರ ಚಳವಳಿಯಲ್ಲೂ ಅವರು ತಮ್ಮನ್ನು ಸಕ್ರಿಯವಾಗಿ ತೊಡಗಿಸಿ ಕೊಂಡರೆಂದು ಅವರ ದೇಶಪ್ರೇಮ ಎಷ್ಟೆಂಬುದು ಅಳತೆಗೂ ನಿಲುಕದ ವಿಚಾರ.

**ಕನ್ನಡ ಪ್ರೇಮ**

ಆಗತಾನೇ ಜನರಲ್ಲಿ ಮೂಡುತ್ತಿದ್ದ ಕನ್ನಡ ಪ್ರೇಮವನ್ನು ಹಾಗು ಅಂದಿನ ಮೈಸೂರು ಸಂಸ್ಥಾನವನ್ನು ಕನ್ನಡೀಕರಿಸಲು ಹಾಗು ಜನರ ಮನಸ್ಸನ್ನು ಕನ್ನಡಮಯ ಮಾಡುವ ನಿಟ್ಟಿನಲ್ಲಿ ಅವರು 'ಸತ್ಯ ಶೋಧನ ಪ್ರಕಾಶನ' ಎಂಬ ಪ್ರಕಾಶನವನ್ನು ಹುಟ್ಟು ಹಾಕಿ ಅದರ ಮುಖಾಂತರ ಕನ್ನಡದ ಸಾಹಿತಿಗಳ, ಲೇಖಕರ, ಕವಿಗಳ ಪುಸ್ತಕಗಳನ್ನು ಪ್ರಕಟಿಸಿ ಕನ್ನಡಿಗ ಓದುಗರಿಗೊಂದು ಅಧ್ಯಯನ ಮಾಡುವ ಅವಕಾಶ ಮಾಡಿಕೊಟ್ಟ ಶ್ರೀನಿವಾಸ ರಾಯರದು ಎಂತಹ ಕನ್ನಡ ಪ್ರೇಮವೆಂಬುದು ಇದರಿಂದ ಅರ್ಥವಾಗುತ್ತದೆ. ಖ್ಯಾತ ಲೇಖಕರಾದ ಎಂ.ಆರ್. ಶ್ರೀನಿವಾಸಮೂರ್ತಿ, ಶಿವರಾಮ ಕಾರಂತ, ವಿ. ಸೀತಾರಾಮಯ್ಯ, ಗೊರೂರು ರಾಮಸ್ವಾಮಿ ಅಯ್ಯಂಗಾರ್, ಎಲ್. ಗುಂಡಪ್ಪ, ಸಂಸ, ಆನಂದ, ಎಂ. ರಾಮರಾವ್, ಕೈವಾರ ರಾಜಾರಾವ್ ಇವರ ಕೃತಿಗಳನ್ನು ತಮ್ಮ ಪ್ರಕಾಶನದಿಂದ ಪ್ರಕಟಿಸಿದ ಕೀರ್ತಿ ನಿಟ್ಟೂರುರವರದು. ಕನ್ನಡದ ಅಭಿವೃದ್ಧಿಗೆ, ಅವರು ತೆರೆದ ಪ್ರಕಾಶನದ ಸೇವೆ ಬಹಳ ಅಮೂಲ್ಯವಾದದ್ದು. ಎಲ್ಲಾ ಕನ್ನಡ ಪುಸ್ತಕಗಳೂ ಒಂದೆಡೆ ಓದುಗರಿಗೆ ದೊರಕುವಂತೆ ಮಾಡಿದ ಮೊಟ್ಟಮೊದಲ ಪ್ರಕಾಶಕರು ನಿಟ್ಟೂರು ಶ್ರೀನಿವಾಸರಾಯರು. ಮುಂದೆ ಅವರು ನಿರಂತರವಾಗಿ ಕನ್ನಡ ಸಾಹಿತ್ಯ ಪರಿಷತ್ತಿನೊಡನೆ ಸಂಪರ್ಕವಿಟ್ಟುಕೊಂಡು ಪರಿಷತ್ತಿನ ಅಭಿವೃದ್ಧಿಗೆ ದುಡಿದವರು. ನಿಟ್ಟೂರು ಶ್ರೀನಿವಾಸರಾಯರು ನಮ್ಮ ಕಣ್ಣುಂದೆ ಇರುವುದೇ ಕನ್ನಡಿಗರಿಗೊಂದು ವರದಾನ. ಡಿ.ವಿ. ಗುಂಡಪ್ಪನವರು ಸ್ಥಾಪಿಸಿದ ಗೋಖಲೆ ಇನ್‌ಸ್ಟಿಟ್ಯೂಟ್ ಆಫ್ ಪಬ್ಲಿಕ್ ಅಫೈರ್ಸ್‌ನ ಅಧ್ಯಕ್ಷರು, ಗಾಂಧಿ ಸ್ಮಾರಕ ನಿಧಿಯ ಕರ್ನಾಟಕ ಶಾಖೆಯ ಅಧ್ಯಕ್ಷರಾಗಿಯೂ ಅವರು ಕಾರ್ಯನಿರ್ವಹಿಸಿದ್ದಾರೆಂದರೆ ಅವರ ಕ್ರಿಯಾಶೀಲತೆಗೆ ಹಿಡಿದ ಕನ್ನಡಿ ಇದಾಗಿದೆ.

ರಾಷ್ಟ್ರೀಯ ಹಾಗೂ ಅಂತರಾಷ್ಟ್ರೀಯ ಮಟ್ಟದ ಸಂಘಸಂಸ್ಥೆಗಳೊಂದಿಗೆ ಒಡನಾಟ ವಿಟ್ಟುಕೊಂಡು, ಸರ್ಕಾರದ ಅತ್ಯುನ್ನತ ಹುದ್ದೆಗಳನ್ನು ನಿರ್ವಹಿಸಿ ಸಮಾಜಸೇವೆಯಲ್ಲೂ ಅವರು ತಮ್ಮನ್ನು ತಾವು ತೊಡಗಿಸಿಕೊಂಡು ಇಂದಿಗೂ ಸಕ್ರೀಯವಾಗಿ ಯಾರಾದರೂ

ಶತಾಯು ಈ ರಾಜ್ಯದಲ್ಲಿದ್ದರೆ ಅವರೇ ನಿಟ್ಟೂರು ಶ್ರೀನಿವಾಸರಾಯರು ಎಂಬುದರಲ್ಲಿ, ಎರಡು ಮಾತಿಲ್ಲ.

ರಾಷ್ಟ್ರದ ಕಾನೂನುಗಳ ತಿದ್ದುಪಡಿಯಲ್ಲಿ, ಸಂಸದೀಯ ವ್ಯವಹಾರಗಳ ಸಮಿತಿಯಲ್ಲಿ, ಅಂತಾರಾಷ್ಟ್ರೀಯ ಕಾನೂನು ಸಂಸ್ಥೆಯಲ್ಲಿ ಪ್ರತಿನಿಧಿಸಿ ಆಯಾ ರಂಗಗಳಲ್ಲಿ ಸೂಕ್ತವಾದ ಮಾರ್ಗದರ್ಶನ ನೀಡಿ ಛಾಪು ಮೂಡಿಸಿದವರು ನಿಟ್ಟೂರುರವರು.

ಇವರು ಬಹುಮುಖಿ ಸೇವೆಯನ್ನು ಗುರ್ತಿಸಿ, ದಕ್ಷಿಣ ಭಾರತ ಹಿಂದಿ ಪ್ರಚಾರ ಸಭಾರವರು ೧೯೯೬ರಲ್ಲಿ ಡಾಕ್ಟರೇಟ್ ನೀಡಿದ್ದು ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿಯನ್ನು ೧೯೯೭ರಲ್ಲಿ ನೀಡಿದ್ದು ಇವರಿಗೆ ತಡವಾಗಿ ಸಂದ ಪ್ರಶಸ್ತಿಗಳು ಹಾಗೂ ಗೌರವಗಳು ಎಂದೇ ಹೇಳಬೇಕು.

ನೂರು ವರ್ಷಗಳನ್ನು ಸಕ್ರಿಯವಾಗಿ, ಒಂದು ಕಪ್ಪು ಮಚ್ಚೆಯೂ ಇಲ್ಲದ ಸಾರ್ವಜನಿಕ ಬದುಕನ್ನು ಕ್ರಮಿಸಿದ ಶ್ರೀನಿವಾಸರಾಯರಿಗೆ ೧೦೦ ವರ್ಷಗಳಾಗಿವೆ ಎಂದನಿಸದು. ಇತ್ತೀಚೆಗೆ ಈ ದೀರ್ಘಾಯುವಿನ ಸೇವೆಯನ್ನು ಗುರ್ತಿಸಿ, ಇವರ ಕ್ರಿಯಾತ್ಮಕ ಚಟುವಟಿಕೆಗಳನ್ನು ಗುರ್ತಿಸಿ ರಾಜ್ಯದ ಬಹುತೇಕ ಸಂಘಸಂಸ್ಥೆಗಳು ಇವರನ್ನು ಅಧ್ಯಕ್ಷ ರನ್ನಾಗಿ, ಉದ್ಘಾಟಕರನ್ನಾಗಿ ಆಹ್ವಾನಿಸುತ್ತಿರುವುದು ಹಾಗೂ ಹಾಗೆ ಕರೆದ ಎಲ್ಲಾ ಸಭೆ ಸಮಾರಂಭಗಳಲ್ಲೂ ಭಾಗವಹಿಸುವುದನ್ನು ನೋಡಿ ಎಷ್ಟೋ ಹರೆಯ ವಯಸ್ಸಿನವರು ನಿಬ್ಬೆರಗಾಗುತ್ತಾರೆ.

**ಸಂಘಟನೆಗಳೊಡನೆ ಸಹಭಾಗಿತ್ವ**

ಗೌರಿಸುಂದರ್ ಪ್ರಕಾಶನದ ವತಿಯಿಂದ ಬಿಡುಗಡೆಯಾದ "ಜಿ.ವಿ. ಅಯ್ಯರ್ ಅವರ ದೃಷ್ಟಿಯಲ್ಲಿ ರಾಮಾಯಣ" ಪುಸ್ತಕ ಬಿಡುಗಡೆ ಸಮಾರಂಭದಲ್ಲಿ ಮುಖ್ಯಮಂತ್ರಿ ಕೃಷ್ಣರವರು ಹೇಳಿದ ಮಾತು ಶ್ಲಾಘನೀಯ. "ಬೆಳಿಗ್ಗೆ ನಿಟ್ಟೂರುರವರು ಭಾಗವಹಿಸಿದ್ದ ಸಭೆಯಲ್ಲಿ ನಾನೂ ಭಾಗವಹಿಸಿದ್ದೆ. ಇದು ಎರಡನೆಯ ಸಭೆ ಅವರೂ ಭಾಗವಹಿಸಿದ್ದಾರೆ, ನಾನು ಭಾಗವಹಿಸಿದ್ದೇನೆ, ಅವರ ಈ ವಯಸ್ಸಿನ ತಣಿಯದ ಉತ್ಸಾಹಕ್ಕೆ ನಾನು ಆಭಾರಿಯಾಗಿದ್ದೇನೆ" ಎಂದ ಕೃಷ್ಣ ಅವರನ್ನು ವೇದಿಕೆಯ ಮೇಲೆ ಕರೆದು ಸನ್ಮಾನಿಸಿದ್ದರು.

ನಿಟ್ಟೂರುರವರು ದಲಿತ ಸಂಘಟನೆಗಳು ಹಮ್ಮಿಕೊಂಡ ಅನೇಕ ಸಭೆಗಳಲ್ಲೂ, ಪ್ರತಿಭಟನಾ ಸಭೆಗಳಲ್ಲೂ ಭಾಗವಹಿಸಿ ಆ ಸಮಾರಂಭದ ಉದ್ಘಾಟನೆಯನ್ನು ಮಾಡಿದ್ದಾರೆ. ಆ ವರ್ಗದ ಪರವಾಗಿ ನಿಂತು ಸರ್ಕಾರದ ವಿರುದ್ಧ ದನಿ ಎತ್ತಿದ್ದಾರೆ. ಜನಪರ ನಿಲುವು ಅವರದು. ಸಮಗ್ರ ಅಭಿವೃದ್ಧಿ ಅವರ ಕನಸು. ಯುವಕರಲ್ಲಿ ರಾಷ್ಟ್ರಪ್ರೇಮ ಮೂಡಬೇಕು.

ಶಿಸ್ತು, ಪ್ರಾಮಾಣಿಕತೆ, ಪರಿಶ್ರಮ ಮೈದಳೆಯಬೇಕು. ಆಗ ಮಾತ್ರ ಬಲಿಷ್ಠ ರಾಷ್ಟ್ರ ಕಟ್ಟಲು ಸಾಧ್ಯ ಎಂದು ತಿಳಿಹೇಳಿದ್ದಾರೆ.

ಈಗ ಕನ್ನಡದ ಬಗ್ಗೆ ದುಡಿದವರಲ್ಲಿ, ಉತ್ತಮ ಆಡಳಿತ ಮಾಡಿದವರಲ್ಲಿ ತಮ್ಮ ಬದುಕಿನುದ್ದಕ್ಕೂ ವಿವಿಧ ಕ್ಷೇತ್ರಗಳಲ್ಲಿ ಕೆಲಸ ಮಾಡಿದವರಲ್ಲಿ, ಸಾಹಿತ್ಯ, ಸಾಂಸ್ಕೃತಿಕ, ಸಮಾಜ ಸೇವೆ ಜೊತೆಗೆ ಹೋರಾಟ ಇತ್ಯಾದಿ ಎಲ್ಲಾ ಗುಣಗಳನ್ನು ಹೊಂದಿರುವ ನಿಟ್ಟೂರು ಶ್ರೀನಿವಾಸರಾಯರ ಬದುಕೊಂದು ಐತಿಹಾಸಿಕ ದಾಖಲೆ. ಅವರ ಆದರ್ಶಗಳು ಇಂದಿನ ಹಾಗೂ ಮುಂದಿನ ಪೀಳಿಗೆಗೆ ದಾರಿದೀಪವಾಗಲಿ.



# ‘ನ್ಯಾಯಮೂರ್ತಿ - ನಿಟ್ಟೂರು’ - ಕೃತಿ ಅವಲೋಕನ

. . . . . . . . . . . . . . . . . . . . . . . . ✍ ಡಾ|| ಸುರೇಶ ಪಾಟೀಲ*

ಶತಮಾನದ ಗಡಿ ದಾಟಿಯೂ ಮೈ-ಮನಗಳ ಆರೋಗ್ಯವನ್ನು ಕಾಯ್ದುಕೊಂಡು ಬಂದಿರುವ ನ್ಯಾಯಮೂರ್ತಿ ನಿಟ್ಟೂರರನ್ನು ನೋಡುವುದೇ, ಕುರಿತು ಮಾತನಾಡುವುದೇ ಒಂದು ಸ್ವಾರಸ್ಯದ ಪ್ರಸಂಗ. ಬಹಿರಂಗದಂತೆ ಅವರಂತರಂಗವೂ ಸರಳ! ನೋಡಿದರೆ ಇವರು ಉಚ್ಚನ್ಯಾಯಾಲಯದ ನ್ಯಾಯಮೂರ್ತಿ ಆಗಿದ್ದರಂತೆ, ರಾಜ್ಯಪಾಲರಾಗಿದ್ದರಂತೆ, ಕೇಂದ್ರ ವಿಜಿಲೆನ್ಸ್ ಕಮೀಶನರ್ ಆಗಿದ್ದರಂತೆ ಅನ್ನಿಸುವುದೇ ಇಲ್ಲ. ಅಂದರೆ ಅಂಥ ‘ಹುದ್ದೆ’ಗಳಲ್ಲಿದ್ದೂ ಅವುಗಳಿಗಿದ್ದಿರಬಹುದಾದ ಗತ್ತು-ಗಮ್ಮತ್ತುಗಳನ್ನು ಅಳವಡಿಸಿಕೊಳ್ಳದೆ ಸರಳತೆಯನ್ನು ರೂಢಿಸಿಕೊಂಡದ್ದು ಅವರ ದೊಡ್ಡ ಸಾಧನೆ.

ಸಾಮಾನ್ಯವಾಗಿ ವಯಸ್ಸು, ಅಧಿಕಾರ ಅಂತಸ್ತು-ಬೌದ್ಧಿಕತೆಗಳು ‘ವ್ಯಕ್ತಿ’ಯನ್ನು ‘ಜನವಿದೂರ’ನನ್ನಾಗಿಸುತ್ತವೆ. ಇಂಥ ಯಾವುದೆ ಒಂದು ಕ್ಷೇತ್ರದ ಸಾಧನೆ - ಉಪಾಧಿ ಮನುಷ್ಯನನ್ನು ‘ಅಹಂಕಾರಿ’ ಇಲ್ಲವೆ ‘ಆತ್ಮತಲ್ಲೀನ’ ಆಗಿಸುತ್ತದೆ. ಶ್ರೀನಿವಾಸರಾಯರದೊ ಇದಕ್ಕೆ ವ್ಯತಿರಿಕ್ತ ವ್ಯಕ್ತಿತ್ವ. ಅಂತೆಯೆ ಅವರು ದೊಡ್ಡವರಾದುದು ಸ್ವಾತಂತ್ರ್ಯ ಹೋರಾಟಗಾರರಾಗಿ ಗಾಂಧೀಜಿಯಂಥವರ ಒಡನಾಟದಲ್ಲಿದ್ದುದರಿಂದಲ್ಲ (ಅವರು ಸ್ವಾತಂತ್ರ್ಯ ಹೋರಾಟದಲ್ಲಿ ಪ್ರತ್ಯಕ್ಷ ಪಾಲ್ಗೊಂಡವರಲ್ಲದಿದ್ದರೂ ಪರೋಕ್ಷವಾಗಿ ನೆರವಾಗಿದ್ದರು) ನ್ಯಾಯಮೂರ್ತಿ, ರಾಜ್ಯಪಾಲರಾದುದರಿಂದಲ್ಲ. ಅವರೇನು ಮಹಾನ್ ಲೇಖಕರಾಗಲಿಲ್ಲ

---

* ನಂ. ೫೪, ಮಹಡಿ, ೨ನೇ ಮುಖ್ಯರಸ್ತೆ
ಗವಿಪುರಂ ಬಡಾವಣೆ, ಬೆಂಗಳೂರು - ೫೬೦ ೦೧೯

(ಉದಯೋನ್ಮುಖರಿಗೆ ಪ್ರೇರಣೆ-ಪ್ರೋತ್ಸಾಹವನ್ನಂತೂ ನೀಡಿದರು) ಏನಿದ್ದರೂ ಅವರದು ತೆರೆಮರೆಯ ಸಾಧನೆ. ಅದಕ್ಕೆ ಪೂರಕವಾದದ್ದು ಸರಳತೆ.

ಸಮಕಾಲೀನ ಕರ್ನಾಟಕದ ಅಪೂರ್ವ ವ್ಯಕ್ತಿಗಳಲ್ಲೊಬ್ಬರಾದ ಶ್ರೀಯುತರು 'ನೂರ್ಕಾಲ' ಬದುಕಿದ್ದಾರೆನ್ನುವುದು ಒಂದು ಹೆಗ್ಗಳಿಕೆಯಾದರೂ ಅದರಲ್ಲಿ ವಿಶೇಷವಾದು ದೆಂದರೆ ಆ ಶತಮಾನದ ಸಾತ್ವಿಕ-ಸಾರ್ಥಕ ಬದುಕು ರೂಪುಗೊಳ್ಳುತ್ತ, ಹೆಜ್ಜೆಗುರುತುಗಳನ್ನು ಮೂಡಿಸುತ್ತಾ ನಡೆದ ರೀತಿ. ನಿಟ್ಟೂರರ ಈ ಸಾಧನೆಯದೊಂದು ಗುಣವೆಂದರೆ 'ವೈಯಕ್ತಿಕತೆ'ಯಿಂದ 'ಸಾಮಾಜಿಕ'ವಾಗುತ್ತ ನಡೆದುದು. ಇಂಥ 'ಸಾಮಾಜಿಕ'ವಾಗುವ ಬದುಕಿಗೆ ಸಾಮಾಜಿಕ ಬದ್ಧತೆ ಅಥವಾ ಜವಾಬ್ದಾರಿಯಿರುತ್ತದೆ. ನಿಟ್ಟೂರರು ಆ ಜವಾಬ್ದಾರಿಯನ್ನು ಹೇಗೆ ನಿರ್ವಹಿಸಿದರೆಂಬುದನ್ನು ಈ ಗ್ರಂಥದ ಹಲವಾರು ಲೇಖನಗಳು ತಿಳಿಯಪಡಿಸುತ್ತವೆ.

'ನೂರ್ಕಾಲ' ಬಾಳುವವರನ್ನು ಸಹಜವಾಗಿಯೆ ನಮ್ಮ ಸಮಾಜ ತಕ್ಕಂತೆ ಗೌರವಿಸುತ್ತ ಬಂದಿದೆ. ಶತಾಯುಷಿಗಳು ನಮ್ಮಲ್ಲಿ ಅನೇಕರಿದ್ದಾರೆ. ಅವರವರ ಕುಟುಂಬ, ಗ್ರಾಮ ಅಥವಾ ಸಮಾಜದ ಮಟ್ಟದಲ್ಲಿ ಅವರ ಹಿರಿಮೆ - ಮನ್ನಣೆ ಇದ್ದೇ ಇರುತ್ತದೆ. ಆದರೆ ನಿಟ್ಟೂರರಂಥವರು ರಾಜ್ಯ ಅಥವಾ ರಾಷ್ಟ್ರಮಟ್ಟದ ಮನ್ನಣೆಗೆ ಪಾತ್ರರಾದ ಹಿರಿಯರು. ಅವರ ಹಿರಿತನವನ್ನು ವಿಶೇಷ ರೀತಿ ಗುರುತಿಸಿ ಗೌರವಿಸುವ ಕೆಲಸವನ್ನು ಶ್ರೀಯುತರಾದ ಗೌರಿಸುಂದರ ಅವರು ಈ ಕೃತಿಯ ಮೂಲಕ ಮಾಡಿದ್ದಾರೆ.

ಹಿರಿಯರ ಬಗ್ಗೆ, ಸಾಹಿತಿ-ಸಂಸ್ಕೃತಿ ಹರಿಕಾರರ ಬಗ್ಗೆ ತಮ್ಮದೆ ರೀತಿಯಲ್ಲಿ ಗೌರವ ವನ್ನು ಹೊಂದಿರುವ ಶ್ರೀಮಾನ್ ಗೌರಿಸುಂದರ ಅವರದೂ ನಿಟ್ಟೂರರಂತೆಯೆ 'ಜನಸಂಪರ್ಕ'ದ ಮೂಲಕವೆ ಬೆಳೆದ ಕಾರ್ಯವೈಖರಿ. ಬಹುಶಃ ಇದಕ್ಕೆ ಕಾರಣ ಅಂದಿನ ಯದುವಂಶದ ಅರಮನೆಯ ರಾಜಪುರೋಹಿತರಾದ ಶ್ರೀ ಜಿ.ಎಸ್.ಸ್ವಾಮಿಯವರು ನಡೆದು ಬಂದ ದಾರಿ ಇಂಥದ್ದೇ ಆಗಿದ್ದು, ಅವರ ಮಕ್ಕಳಾದ ಗೌರಿಸುಂದರ್ ಇದನ್ನು ಮುಂದುವರಿಸಿದ್ದಾರೆ. ಜೊತೆಗೆ ಇವರ ಸಿನಿಮಾ ಸಂಪರ್ಕವಿರುವವರು ಬೇರೆ. ಹೀಗಾಗಿ ಇದಕ್ಕೆ ಸಂಬಂಧಿಸಿದಂತೆ ಯಾವುದೆ ಚಟುವಟಿಕೆಯನ್ನು ಮಾಡಿದರೂ ಅದರಲ್ಲಿ ಅವರದೆ ಒಂದು ಉತ್ಸಾಹ, ಅದ್ದೂರಿ, ಅಚ್ಚುಕಟ್ಟುತನಗಳು ಎದ್ದು ಕಾಣುತ್ತವೆ. ಮಾಡುವ ಕಾರ್ಯ-ಮೂಡುವ ಕೃತಿ ಹೆಚ್ಚು ಜನಕ್ಕೆ ತಲುಪಬೇಕಾದರೆ ಇಂಥದ್ದೆಲ್ಲ ಅನಿವಾರ್ಯವೆನ್ನುವ ಭಾವನೆ ಅವರದು. ಡಾ. ಭೈರಪ್ಪನವರ ಕೃತಿ ವಿಮರ್ಶೆಯ ಗ್ರಂಥ ಪ್ರಕಟಣೆ - ಬಿಡುಗಡೆ, ಜಿ.ವಿ. ಅಯ್ಯರ್ ಅವರ ಚಲನಚಿತ್ರಕತೆ 'ರಾಮಾಯಣ : ಅಯ್ಯರ್ ದೃಷ್ಟಿಯಲ್ಲಿ'

ಕುರಿತು ಅವರು ನಡೆಸಿದ ಕಾರ್ಯಕ್ರಮ ಈ ಬಗೆಯದು. ಇಲ್ಲೆಲ್ಲ ಸುಂದರ ಪ್ರಕಾಶನದ್ದೆ ಒಂದು ವೈಶಿಷ್ಟ್ಯ ಎದ್ದು ಕಾಣುತ್ತದೆ.

ಇಂಥ ಒಂದು ಪರಂಪರೆಯ ಮತ್ತು ಹಿರಿಯರ ಬಗ್ಗೆ ಪೂಜ್ಯಭಾವನೆ ಹೊಂದಿರುವ ಗೌರಿಸುಂದರ್ ಅವರು 'ಫೋಟೋಗ್ರಾಫರ್' ಬೇರೆ ಬೇರೆ ಕೋನಗಳಿಂದ, ಬೇರೆ ಬೇರೆ ಹಿನ್ನೆಲೆಯಲ್ಲಿ ವ್ಯಕ್ತಿಯ ಚಿತ್ರವನ್ನು ಹಿಡಿದಿಡುವ ರೀತಿಯಲ್ಲಿ ಈ ಗ್ರಂಥದಲ್ಲಿ ಬೇರೆ ಬೇರೆ ವ್ಯಕ್ತಿಗಳು, ವೃತ್ತಿ-ಮನೋಭಾವದವರು ನಿಟ್ಟೂರರನ್ನು ಕಾಣುವಂತೆ ಮಾಡಿದ್ದಾರೆ! ಈ ಗ್ರಂಥದ ಲೇಖಕರಲ್ಲಿ ಕೆಲವರು ಸಾಹಿತಿಗಳಾದರೆ, ಕೆಲವರು ಸಾಹಿತ್ಯಾಸಕ್ತರು, ಕಲಾವಿದರು ಅಥವಾ ಸಂಗೀತಾಸಕ್ತರು, ಕೆಲವರು ನಿಟ್ಟೂರರನ್ನು ಹತ್ತಿರದಿಂದ ಬಲ್ಲವರಾದರೆ ಕೆಲವರು ದೂರದಿಂದ ಕಂಡವರು, ಅವರ ಬಗ್ಗೆ ಕೇಳಿಯೆ ಪ್ರತಿಕ್ರಿಯಿಸಿ ದವರೂ ಉಂಟು. ಇಲ್ಲಿನ ಬಹುತೇಕ ಲೇಖನಗಳು ವೈಯಕ್ತಿಕ - ಅನಿಸಿಕೆ, ಅಭಿಪ್ರಾಯಗಳೆ ಆಗಿವೆ. ನಿಟ್ಟೂರರ ಬಗ್ಗೆ ಮಾತನಾಡುತ್ತ ಪ್ರಾಸಂಗಿಕವಾಗಿ ಇನ್ನೇನನ್ನೊ ಹೇಳುವ ಲೇಖನಗಳೂ ಉಂಟು. ಆದಾಗ್ಯು ನಿಟ್ಟೂರರದು ಒಂದು ಸಾಂಸ್ಕೃತಿಕ ವ್ಯಕ್ತಿತ್ವವಾದ್ದರಿಂದ ಆ ವ್ಯಕ್ತಿತ್ವದ ಮೂಲಕ ನಾವು ಒಂದು 'ಯುಗಮೌಲ್ಯ'ವನ್ನು ತಿಳಿದುಕೊಳ್ಳಬಹು ದಾದ್ದರಿಂದ ಇಂಥ ಲೇಖನಗಳು ನಮಗೆ ನಿಟ್ಟೂರರ ಮೂಲಕ ಒಂದು ಮೌಖಿಕ ಪ್ರಜ್ಞೆ - ಬದುಕಿನ ವಿಧಾನಗಳನ್ನು ಪರಿಚಯಿಸುತ್ತವೆ, ದಾಖಲಿಸುತ್ತವೆ. ಹಿರಿಯರಾದ ಡಾ|| ಯು.ಆರ್. ಅನಂತಮೂರ್ತಿಯವರು ಸರಿಯಾಗಿಯೇ ಗುರುತಿಸಿರುವಂತೆ ನಿಟ್ಟೂರರು ೨೧ನೇ ಶತಮಾನದಲ್ಲಿರುವ ಇಪ್ಪತ್ತನೇ ಶತಮಾನವೆ ಆಗಿದ್ದಾರೆ. ಶೂದ್ರ ಶ್ರೀನಿವಾಸ ರೆನ್ನುವಂತೆ 'ನಿಟ್ಟೂರರೆಂದರೆ ಶತಮಾನದ ಸಾಕ್ಷಿ ಪ್ರಜ್ಞೆಯೆ ಸರಿ!'

ನೂರ್ಕಾಲ ಬದುಕಿದ ನಿಟ್ಟೂರರೇನೊ ಅದೃಷ್ಟವಂತರೆ. ಆದರೆ ಇಂತಹ ಅದೃಷ್ಟ ಎಲ್ಲರಿಗೂ ಇರುವುದಿಲ್ಲ. ಇಂದು ವೃದ್ಧರು ಮತ್ತು ವೃದ್ಧಾಪ್ಯ ಅನೇಕ ಸಮಸ್ಯೆಗಳನ್ನೆ ದುರಿಸುವ ಪರಿಸ್ಥಿತಿ ಇದ್ದೆ. ನಿಟ್ಟೂರರ ಮೂಲಕ ಇಂಥ ವಿಶ್ವವ್ಯಾಪಿ ಸಮಸ್ಯೆಯನ್ನು ಕೊಡ್ಲೆಕೆರೆಯವರು ತಾತ್ವಿಕವಾಗಿ ಸ್ವಾರಸ್ಯಕರವಾಗಿಯೇ ಚರ್ಚೆ ಮಾಡಿದ್ದಾರೆ. ಹೀಗೆ 'ನಿಟ್ಟೂರ'ರಿಗೆ ಗೌರವವನ್ನು ಸಮರ್ಪಿಸುವುದರ ಮೂಲಕವೆ ಈ ಗ್ರಂಥದಲ್ಲಿ ಸಂಸ್ಕೃತಿ - ಮತ್ತು ಬದುಕಿನ ಚಿಂತನೆ ಹಾಗೂ ಮಾನವ ಸಂಬಂಧ ಮತ್ತು ಮೌಲ್ಯಗಳನ್ನು ಕುರಿತಂತೆ ಓದುಗರಲ್ಲಿ ಒಂದು ಚರ್ಚೆ - ಸಂವೇದನೆ ಮಾಡುವಂತೆ ಮಾಡಬಲ್ಲದೆನ್ನಿಸುತ್ತದೆ.

ನಿಟ್ಟೂರರಿಗೆ ಎಲ್ಲರಿಗೂ ಮೆಚ್ಚುಗೆಯಾಗುವ ಮತ್ತು ತಮ್ಮ ಜೀವನದ ಮಹತ್ಸಾಧನೆ ಯನ್ನಾಗಿಸಿಕೊಂಡ 'ಸರಳತೆ'ಯನ್ನು ರೂಪಿಸಿಕೊಳ್ಳುವುದು ಹೇಗೆ ಸಾಧ್ಯವಾಯಿತು? ಇದರ ಮೂಲ ಬೀಜ ಅವರ ವ್ಯಕ್ತಿತ್ವದಲ್ಲಿದೆಯೊ, ಅವರು ಬೆಳೆದ ಕಾಲ-ಪರಿಸರಗಳು ಇದಕ್ಕೆಂತು

ಪ್ರಚೋದನೆಯನ್ನು ಒದಗಿಸಿದವು? ಆ ಕಾಲದಲ್ಲಿ ಹೀಗೆಯೆ ಬೆಳೆದ ಮಹಾನ್ ವ್ಯಕ್ತಿಗಳಾದ ಗಾಂಧೀಜಿ, ಲಾಲಬಹೂದ್ದೂರ ಶಾಸ್ತ್ರಿ, ಗುಲ್ಜಾರಿಲಾಲ ನಂದಾರಂಥವರ ವ್ಯಕ್ತಿತ್ವ; ನಮ್ಮದೆ ಕರ್ನಾಟಕದ ಡಿ.ವಿ.ಜಿ., ನವರತ್ನ ರಾಮರಾಯ ಮತ್ತು ಎಂ.ಆರ್.ಶ್ರೀ., ಅ.ನ. ಸುಬ್ಬರಾಯರು ಮುಂತಾದವರ ವ್ಯಕ್ತಿತ್ವ - ಒಡನಾಟಗಳೂ ಅವರ ಈ ವ್ಯಕ್ತಿತ್ವ ರೂಪುಗೊಳ್ಳುವಲ್ಲಿ ನೆರವಾಗಿರಬಹುದು ಮತ್ತು ಇಷ್ಟೇ ಮುಖ್ಯವಾಗಿ, ಪರಿಣಾಮಕಾರಿಯಾಗಿ ಅವರ ಕೌಟುಂಬಿಕ ಸ್ಥಿತಿಗತಿ - ಹಿನ್ನೆಲೆ - ಜೀವನವೂ ಇದಕ್ಕೆ ನೆರವಾಗಿರಬಹುದು. ಪ್ರಸ್ತುತ ಗ್ರಂಥದಲ್ಲಿ ಈ ಒಂದು ಕೊನೆಯ ಅಂಶದ ಮೇಲೆ 'ಬೆಳಕು' ಚೆಲ್ಲುವ ಲೇಖನ ಮಾತ್ರ ಕಂಡುಬರುತ್ತಿಲ್ಲ; ಆದಾಗ್ಯೂ ಇಂದಿಗೂ ಅಂದಿನ ಮಾದರಿಯಾದ 'ನಿಟ್ಟೂರ'ರ ಸಾಮಾಜಿಕ ವ್ಯಕ್ತಿತ್ವ - ಮುಖಗಳನ್ನು ಇಲ್ಲಿನ ಲೇಖನಗಳು ಸಮರ್ಥವಾಗಿಯೆ ಪರಿಚಯಿಸುತ್ತವೆ.



# ಶತಮಾನದ ಚೇತನ

. . . . . . . . . . . . . . . . . . . . ✍ *ಸಿ. ಸೋಮಶೇಖರ, ಕೆ.ಎ.ಎಸ್.**

ಜಯ ಭಾರತ ಜನನಿಯ ತನುಜಾತೆ
ಜಯಹೇ ಕರ್ನಾಟಕ ಮಾತೆ

ಎಂಬ ರಾಷ್ಟ್ರಕವಿ ಕುವೆಂಪು ಅವರ ಅಭಿಮಾನದ ವಾಣಿಯಂತೆ, ಭಾರತ ಮಾತೆಯ ಹೆಮ್ಮೆಯ ಪುತ್ರಿ ಕರ್ನಾಟಕ ಮಾತೆ. ಭರತ ಖಂಡದ ಸಂಸ್ಕೃತಿಯ ವ್ಯಾಪ್ತಿಯಲ್ಲಿ ಅರಳಿರುವ ಕುಸುಮ ಗಳಲ್ಲಿ ಅತ್ಯಂತ ಸುಂದರ ಹಾಗೂ ಸುವಾಸನಾಯುಕ್ತವಾದ ಕುಸುಮ ಕರ್ನಾಟಕ. ಸಮ್ರಾಜ್ಯಾಡಳಿತದ ಜನಪರ ಶೈಲಿ ಯಲ್ಲಿ, ಸಾಹಿತ್ಯೋಪಾಸನೆಯ ರಸಕ್ಷೇತ್ರದಲ್ಲಿ, ಧಾರ್ಮಿಕ ದರ್ಶನದ ದಿವ್ಯತೆಯ ಸಾಕ್ಷಾತ್ಕಾರದಲ್ಲಿ, ಕಲೆ, ಸಂಗೀತ, ನೃತ್ಯಗಳ ಕಲೋಪಾಸನೆಯಲ್ಲಿ, ಕರುಣೆ, ಸಹನೆ, ದಯೆ, ಅನುಕಂಪಗಳ ಮಾನವೀಯ ಮೌಲ್ಯಗಳ ಆವಿಷ್ಕಾರದಲ್ಲಿ ಕರ್ನಾಟಕದ ಸಾಧನೆ ಅದ್ವಿತೀಯ, ಅನನ್ಯ.

'ಕರ್ನಾಟಕದ ದಾರ್ಶನಿಕರ, ಸಾಧಕರ, ಸಂತರ, ವಿಭೂತಿ ಪುರುಷರ ಪುಣ್ಯದ ಬೀಡು, ತಪಸ್ವಿಗಳ ತವರೂರು.

ಕರ್ನಾಟಕದ ದಿವ್ಯಶಕ್ತಿ ಸಂವರ್ಧನೆಯ ಕಾಯಕದಲ್ಲಿ ಸೇವೆ ಸಲ್ಲಿಸಿದ ಮಹಾನುಭಾವರು ಹಲವರು. ಸಮಕಾಲೀನ ಸಮಾಜದಲ್ಲಿ ಕನ್ನಡದ ಸಾಂಸ್ಕೃತಿಕ, ಸಾರ್ವಜನಿಕ ಬದುಕಿನ ಪರಿಶುದ್ಧತೆಗಾಗಿ ಶ್ರಮಿಸಿದ ಮಹಾನ್ ಚೇತನಗಳಲ್ಲಿ ಅತ್ಯಂತ ದೊಡ್ಡ ಹೆಸರು ಶ್ರೀ ನಿಟ್ಟೂರು ಶ್ರೀನಿವಾಸರಾವ್‌ರವರು.

---

* ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ
ಕನ್ನಡ ಭವನ, ಜೆ.ಸಿ. ರಸ್ತೆ, ಬೆಂಗಳೂರು - ೫೬೦ ೦೦೨

1903ರ ಆಗಸ್ಟ್ 24ರಂದು ಬೆಂಗಳೂರಿನಲ್ಲಿ ತಾಯಿ ಶ್ರೀಮತಿ ಸೀತಮ್ಮ ಹಾಗೂ ನಿಟ್ಟೂರು ಶ್ರೀ ಶಾಮಣ್ಣನವರ ಪುತ್ರರಾಗಿ ಜನಿಸಿದರು. ತಂದೆ-ತಾಯಿ ಅಧ್ಯಯನದಲ್ಲಿ ಅಪಾರ ಆಸಕ್ತಿ. ಕಠಿಣ ಪರಿಶ್ರಮದಿಂದ ಉನ್ನತ ಶ್ರೇಣಿಯಲ್ಲಿ ಮೈಸೂರು ವಿಶ್ವವಿದ್ಯಾಲಯದಿಂದ ಕಾನೂನು ಪದವಿಯ ಪ್ರಾಪ್ತಿ. 1927ರಲ್ಲಿ ವಕೀಲ ವೃತ್ತಿಯ ಕಾಯಕ ಪ್ರಾರಂಭ. ವೃತ್ತಿಯಲ್ಲಿನ ಜನಪ್ರಿಯತೆಯಿಂದ ಹಳೇ ಮೈಸೂರು ಪ್ರಾಂತ್ಯದ ವಕೀಲಿ ಸಮುದಾಯದಲ್ಲಿ ಹಿರಿಯ ಸ್ಥಾನ.

1953ರಲ್ಲಿ ಮೈಸೂರು ರಾಜ್ಯದಲ್ಲಿ ಅಡ್ವೊಕೇಟ್ ಜನರಲ್ ಹುದ್ದೆಗೆ ಆಹ್ವಾನ ಸ್ವೀಕಾರ 1955ರಲ್ಲಿ ಮೈಸೂರು ಉಚ್ಚನ್ಯಾಯಾಲಯದಲ್ಲಿ ನ್ಯಾಯಮೂರ್ತಿಯಾಗಿ ನೇಮಕ. ಕರ್ನಾಟಕ ಏಕೀಕರಣದ ನಂತರವೂ ಹೊಸ ರಾಜ್ಯ ಉದಯವಾದಾಗ ಉಚ್ಚ ನ್ಯಾಯಾಲಯದಲ್ಲಿ ನ್ಯಾಯಮೂರ್ತಿಯಾಗಿ ಮುಂದುವರಿಕೆ. 1961ರಲ್ಲಿ ಮೈಸೂರು ಉಚ್ಚ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರಾಗಿ ನೇಮಕಗೊಂಡು 1963 ಅಕ್ಟೋಬರ್‌ನಲ್ಲಿ ನಿವೃತ್ತಿ ಆಗುವವರೆಗೆ ದಕ್ಷ ಹಾಗೂ ಪ್ರಾಮಾಣಿಕ ಸೇವೆಯ ನಿರ್ವಹಣೆ. ಸೇವಾ ಕ್ಷೇತ್ರದಲ್ಲಿ ಕರ್ತವ್ಯ ನಿಷ್ಠೆಗೆ ಮತ್ತೊಂದು ಹೆಸರು ಎಂಬ ಖ್ಯಾತಿ. 1964ರಲ್ಲಿ ಭಾರತದ ಪ್ರಪ್ರಥಮ ಕೇಂದ್ರ ವಿಚಕ್ಷಣ ಆಯುಕ್ತರಾಗಿ ನೇಮಕ. ಪ್ರಾಮಾಣಿಕತೆಗೆ ಸಂದ ಮಹಾನ್ ಗೌರವ. ಸಾರ್ವಜನಿಕ ಆಡಳಿತದಲ್ಲಿ ಪ್ರಾಮಾಣಿಕತೆಯನ್ನು ಮೂಡಿಸುವ ಮಹತ್ತರ ಜವಾಬ್ದಾರಿಯ ಉಸ್ತುವಾರಿ. 1968ರವರೆವಿಗೆ ಈ ಮಹತ್ತರ ಹುದ್ದೆಯ ಅಲಂಕಾರ.

ಶ್ರೀನಿವಾಸರಾಯರದು ಬಹುಮುಖಿ ವ್ಯಕ್ತಿತ್ವ, ಸಾಂಸ್ಕೃತಿಕ, ಸಾಮಾಜಿಕ ಹಾಗೂ ರಾಜಕೀಯ ಚಟುವಟಿಕೆಗಳಲ್ಲಿ ತುಂಬಾ ಆಸಕ್ತಿ. ಭಾರತ ರಾಷ್ಟ್ರೀಯ ಕಾಂಗ್ರೆಸ್ ಸದಸ್ಯರಾಗಿ 1930, 1932 ಮತ್ತು 1942ರಲ್ಲಿನ ಜವಾಬ್ದಾರಿ ಸರ್ಕಾರದ ಆಂದೋಲನ ದಲ್ಲಿ ರಾಷ್ಟ್ರದ ಸ್ವಾತಂತ್ರ್ಯ ಸಮರದಲ್ಲಿ ಸಕ್ರಿಯ ಪಾತ್ರ. ರಾಷ್ಟ್ರಪಿತ ಮಹಾತ್ಮಗಾಂಧೀಜಿ, ರಾಜ ಗೋಪಾಲಾಚಾರಿ ಅವರೊಂದಿಗೆ ವಿಶೇಷ ಸಂಪರ್ಕ, ರಾಷ್ಟ್ರನಾಯಕ ನಿಜಲಿಂಗಪ್ಪ ನವರೊಂದಿಗೆ ಒಡನಾಟ. ಹಿಂದಿ ಪ್ರಚಾರದ ಪ್ರಾರಂಭದ ಹಂತದಲ್ಲಿಯೇ ಕ್ರಿಯಾ ಶೀಲತೆಯ ಪಾತ್ರ. 1928ರಲ್ಲಿಯೇ ಸತ್ಯ ಶೋಧನಾ ಪ್ರಕಟಣಾ ಸಂಸ್ಥೆಯ ಸ್ಥಾಪನೆ. ಕನ್ನಡ ಸಾಹಿತ್ಯ ಕ್ಷೇತ್ರದ ಉದಯೋನ್ಮುಖ ಸಾಹಿತಿಗೆ ಅಪಾರವಾದ ಪ್ರೋತ್ಸಾಹ. ಈ ಸಂಸ್ಥೆಯಿಂದ ಎಂ.ಆರ್. ಶ್ರೀನಿವಾಸಮೂರ್ತಿ, ವಿ. ಸೀತಾರಾಮಯ್ಯ, ಗೊರೂರು ರಾಮಸ್ವಾಮಿ ಅಯ್ಯಂಗಾರ್, ಎಲ್. ಗುಂಡಪ್ಪ, ಸಂ.ಸ., ಆನಂದ, ಕೈವಾರ ರಾಜಾರಾವ್ ಮುಂತಾದ ಮಹಾನ್ ಸಾಹಿತಿಗಳ ಪುಸ್ತಕಗಳ ಪ್ರಕಟಣೆಯ ಸಾರ್ಥಕ ಸಾಧನೆ. ಎಲ್ಲಾ

ಪ್ರಕಾಶನ ಸಂಸ್ಥೆಯ ಪ್ರಕಟಣೆಗಳೆಲ್ಲಾ ಒಂದೇ ಕಡೆ ಓದುಗರಿಗೆ ಲಭ್ಯವಾಗುವಂತೆ ಸತ್ಯ ಶೋಧನ ಪುಸ್ತಕ ಭಂಡಾರದ ಸಾಹಸ. ಸುಮಾರು 50 ವರ್ಷಗಳಿಗೂ ಹೆಚ್ಚಿನ ಸಮಯ ಕನ್ನಡ ಸಾಹಿತ್ಯ ಪರಿಷತ್ತಿನೊಂದಿಗೆ ನಿಕಟ ಸಂಪರ್ಕ. ಬರೋಡದಲ್ಲಿ ನಡೆದ ಹೊರನಾಡ ಕನ್ನಡಿಗರ ಸಮಾವೇಶದಲ್ಲಿ ಅಧ್ಯಕ್ಷತೆ ವಹಿಸುವ ಸೌಭಾಗ್ಯ.

ಕರ್ನಾಟಕದ ನೂರಾರು ಸಾಂಸ್ಕೃತಿಕ, ಸಾಮಾಜಿಕ ಸಂಸ್ಥೆಗಳೊಂದಿಗೆ ಪ್ರೀತಿಯ ಬಾಂಧವ್ಯ, ಗೋಖಲೆ ಸಾರ್ವಜನಿಕ ಸಂಸ್ಥೆಯನ್ನು ಹೆಸರಾಂತ ದಾರ್ಶನಿಕ ಕವಿ ಡಿ.ವಿ.ಜಿ. ಯವರು ಪ್ರಾರಂಭ ಮಾಡಿದ ದಿನಗಳಿಂದ ಅದರೊಂದಿಗೆ ಭಾವನಾತ್ಮಕ ಸಂಬಂಧ. ಈಗಲೂ ಈ ಸಂಸ್ಥೆಯ ಕಾರ್ಯದರ್ಶಿಯಾಗಿ ಕೆಲಸ ನಿರ್ವಹಣೆ. ಗಾಂಧಿ ಶಾಂತಿ ಪ್ರತಿಷ್ಠಾನ ಮತ್ತು ಗಾಂಧಿ ಸ್ಮಾರಕ ನಿಧಿಯ ರಾಜ್ಯ ಘಟಕದ ಅಧ್ಯಕ್ಷರಾಗಿ ಸೇವೆ ನಿರ್ವಹಣೆ.

ಕರ್ನಾಟಕದ ಪ್ರಕೃತಿ ಚಿಕಿತ್ಸಾ ಪರಿಷತ್ತಿನ ಅಧ್ಯಕ್ಷರಾಗಿಯು ಕರ್ತವ್ಯ ನಿರ್ವಹಣೆ. ಬೆಳಗಾಂನಲ್ಲಿ ನಡೆದ ವಕೀಲರ ಬೃಹತ್ ಸಮಾವೇಶದ ಅಧ್ಯಕ್ಷರಾಗಿ ಕೆಲಸ ನಿರ್ವಹಿಸಿದ ಹಿರಿಮೆಗೆ ಪಾತ್ರ.

ತಮ್ಮ ಸಹಧರ್ಮಿಣಿಯ ಸಹಯೋಗದೊಂದಿಗೆ ರಾಷ್ಟ್ರಪಿತ ಮಹಾತ್ಮ ಗಾಂಧೀಜಿ ಯವರ ಭಗವದ್‌ಗೀತೆಯ ಮೇಲಿನ ವ್ಯಾಖ್ಯಾನವನ್ನೂ ಸಹಾ ಕನ್ನಡಕ್ಕೆ ಭಾಷಾಂತರಿಸಿದ ಸಾಹಸಿಗ.

ನಾಡಿನ ರಾಷ್ಟ್ರದ ಹಿರಿಯ ನ್ಯಾಯವಾದಿಯಾಗಿ, ಉಚ್ಛ ನ್ಯಾಯಾಲಯದ ನ್ಯಾಯಾಧೀಶರಾಗಿ, ಮುಖ್ಯ ನ್ಯಾಯಾಧೀಶರಾಗಿ, ಕಾನೂನು ಅಧ್ಯಯನ, ನ್ಯಾಯ ಆಡಳಿತ ನಿರ್ವಹಣೆ, ಕಾನೂನು ಕ್ಷೇತ್ರದಲ್ಲಿ ಸಂಶೋಧನೆ ಹಾಗೂ ಸಾರ್ವಜನಿಕ ಆಡಳಿತ ಮತ್ತು ಸಂವಿಧಾನದ ವಿಷಯಗಳಲ್ಲಿ ಅಪಾರವಾದ ಆಸಕ್ತಿ ಅಲ್ಲದೆ ಪರಿಶ್ರಮ. ಮೈಸೂರು ನ್ಯಾಯವಾದಿಗಳ ಬೃಹತ್ ಸಮ್ಮೇಳನದಲ್ಲಿ ಕ್ರಿಯಾಶೀಲ ಪಾತ್ರ. ಮೈಸೂರು ಬಾರ್ ಕೌನ್ಸಿಲ್‌ನ ಪ್ರಪ್ರಥಮ ಅಧ್ಯಕ್ಷ ಎಂಬ ಕೀರ್ತಿಗೆ ಭಾಜನ. ಭಾರತ ಕಾನೂನು ಸಂಸ್ಥೆ, ಭಾರತದ ಸಂವಿಧಾನ ಮತ್ತು ಪಾರ್ಲಿಮೆಂಟ್ ವ್ಯವಹಾರಗಳ ಸಂಸ್ಥೆ, ಭಾರತದ ಸಾರ್ವಜನಿಕ ಆಡಳಿತ ಸಂಸ್ಥೆ, ಅಂತರ ರಾಷ್ಟ್ರೀಯ ಕಾನೂನು ಸಂಸ್ಥೆಗಳೊಂದಿಗೆ ಅವಿರತವಾದ ಸ್ಪಂದನ. ಸಂಪರ್ಕ. ಅರವಿಂದೋ ಸಂಸ್ಥೆಯ ಬೆಂಗಳೂರು ಘಟಕದ ಅಧ್ಯಕ್ಷರಾಗಿಯೂ ಕಾರ್ಯನಿರ್ವಹಣೆ. ದಕ್ಷಿಣ ಭಾರತ ಹಿಂದಿ ಪ್ರಚಾರ ಸಭಾ ಸಂಸ್ಥೆಯಿಂದ 1996ರಲ್ಲಿ ಗೌರವ ಡಾಕ್ಟರೇಟ್. 1997ರಲ್ಲಿ ಕರ್ನಾಟಕ ಸರ್ಕಾರದಿಂದ ಪ್ರತಿಷ್ಠಿತ ರಾಜ್ಯೋತ್ಸವ ಪ್ರಶಸ್ತಿ ಸ್ವೀಕಾರ.

ಇದು ನಿಟ್ಟೂರು ಶ್ರೀನಿವಾಸರಾಯರ ವ್ಯಕ್ತಿತ್ವದ ಒಂದು ಸೂಕ್ಷ್ಮ ಒಳನೋಟ ಮಾತ್ರ. ಸ್ಫಟಿಕದಂತೆ ಸ್ವಚ್ಛ ಎಂಬ ಖ್ಯಾತಿಗೆ ಪಾತ್ರರಾದ ಈ ನಾಡು ಕಂಡ ಅಪರೂಪದ ವ್ಯಕ್ತಿ ಶ್ರೀನಿವಾಸರಾಯರು. ಈ ಇಳಿವಯಸ್ಸಿನಲ್ಲಿಯೂ ಸಾರ್ವಜನಿಕ ವಿಷಯಗಳ ಬಗ್ಗೆ ಅಪಾರವಾದ ಆಸಕ್ತಿ ಕಾಳಜಿ ತೋರುವ ಶ್ರೀಯುತರ ಅಪಾರವಾದ ನೆನಪಿನ ಶಕ್ತಿ. ಅವರ ನೆನಪಿನ ಅಂಗಳ ತುಂಬಾ ವಿಸ್ತಾರವಾದದ್ದು. ಅವರ ನೆನಪಿನ ಅಂಗಳದಿಂದ ಒಂದೊಂದೆ ಘಟನೆಯ ವೃತ್ತಾಂತವನ್ನು ಹೆಕ್ಕಿ ತೆಗೆದು ವರ್ಣಿಸುವ ಅವರ ಅಭಿವ್ಯಕ್ತಿ ಕಲೆಯಂತೂ ಅಸಾಧಾರಣ. ಸರಳತೆ, ಸಜ್ಜನಿಕೆ, ಸೌಜನ್ಯತೆಯ ಸಾಕಾರ ಮೂರ್ತಿಯೆಂದೇ ನಾಡಿನ ಜನಸಮುದಾಯದಿಂದ ಗೌರವಿಸಲ್ಪಡುವ ಶ್ರೀನಿವಾಸರಾಯರು ನಾಡಿನ ಸಾರ್ವಜನಿಕ ಬದುಕಿನ ಒಂದು ಅನರ್ಘ್ಯರತ್ನ. ಇಂದಿನ ರಾಜ್ಯದ ರಾಜಧಾನಿ ಬೆಂಗಳೂರಿನಲ್ಲಿ ನಡೆಯುವ ಯಾವುದೇ ಪ್ರಮುಖ ಸಾಹಿತ್ಯಿಕ, ಸಾಮಾಜಿಕ ಸಮಾರಂಭಗಳಲ್ಲಿ ಎದ್ದು ಕಾಣುವ ವ್ಯಕ್ತಿತ್ವ. ಅರ್ಥಪೂರ್ಣ ಸಮಾರಂಭಗಳಲ್ಲಿ ಅತಿಥಿಯಾಗಿ ವೇದಿಕೆಯನ್ನೇ ಏರಬೇಕೆಂಬ ಹಂಬಲವಿಲ್ಲ. ಸಾಮಾನ್ಯ ಶ್ರೋತೃವಾಗಿಯು ಸಭಿಕರ ಮಧ್ಯದಲ್ಲಿದ್ದರೂ ಅವರು ಆಕರ್ಷಣೆಯ ಕೇಂದ್ರಬಿಂದು.

ಸಮಕಾಲೀನ ಸಮಾಜದ ಯಾವುದೇ ಪ್ರಚಲಿತ ಸಮಸ್ಯೆಗಳಿಗೆ, ಸವಾಲುಗಳಿಗೆ ಇಂದಿಗೂ ಸಹ ಶೀಘ್ರವಾಗಿ, ತೀವ್ರವಾಗಿ ಪ್ರತಿಕ್ರಿಯಿಸುವ ಅಸಾಧಾರಣ ಸಂವೇದನಾಶೀಲತೆ ಅವರ ವಿಶೇಷ.

ಸಾಮಾಜಿಕ, ಸಾಂಸ್ಕೃತಿಕ, ಸಾಹಿತ್ಯಕ ಮತ್ತು ಧಾರ್ಮಿಕ ಕ್ಷೇತ್ರಗಳಲ್ಲಿ ಅವರು ಸಲ್ಲಿಸಿದ ಸೇವೆಯ ಸ್ಮರಣೆಯೇ ಒಂದು ಪುಣ್ಯದ ಕೆಲಸ. ಅದೇ ಒಂದು ಪೂಜೆ.

ಸಾಹಿತ್ಯ ಪ್ರೇಮಿಗಳಾಗಿ, ಸಾಂಸ್ಕೃತಿಕ ಮೌಲ್ಯಗಳ ಆರಾಧಕರಾಗಿ, ಸಾರ್ವಜನಿಕ ಆಡಳಿತದಲ್ಲಿ ಪರಿಶುದ್ಧತೆಯ ಸಾಕಾರ ಮೂರ್ತಿಗಳಾಗಿ ನಡೆ-ನುಡಿಗಳ ಸಮನ್ವಯಕಾರರಾಗಿ ತಮ್ಮ ಇಡೀ ಜೀವನವನ್ನೇ ಒಂದು ಯೋಗ ಎಂಬಂತೆ ಭಾವಿಸಿ ಅತ್ಯಂತ ಕ್ರಿಯಾಶೀಲರಾಗಿ ನಾಡಿನ, ರಾಷ್ಟ್ರದ ಜನತೆಯ ಕಲ್ಯಾಣದ ಬಗ್ಗೆಯೇ ಸದಾ ಚಿಂತಿಸುವ ಶ್ರೀನಿವಾಸರಾಯರು ಒಬ್ಬ ಮಹಾನ್ ದಾರ್ಶನಿಕರು. ಈ ನಾಡು ಕಂಡ ಒಬ್ಬ ಮಹಾನ್ ಸಂತರು. ಎಲ್ಲಕ್ಕಿಂತ ಮಿಗಿಲಾಗಿ ಅವರೊಬ್ಬ ಕರ್ಮಯೋಗಿ.

ಅವರ ಅವಿಸ್ಮರಣೀಯವಾದ, ಅಪರೂಪದ ವ್ಯಕ್ತಿ ಸಾಧನೆ ಹಾಗೂ ಸಾಹಸಕ್ಕಾಗಿ ಇಂದು ಸುಂದರ ಪ್ರಕಾಶನದ ಗೆಳೆಯ ಗೌರಿಸುಂದರ್ 'ನ್ಯಾಯಮೂರ್ತಿ ನಿಟ್ಟೂರು' ಈ

ಗ್ರಂಥವನ್ನು ಪ್ರಕಟಿಸಿ ಗೌರವಿಸುತ್ತಿದ್ದಾರೆ. ಇಂತಹ ಮಹಾನ್ ವ್ಯಕ್ತಿಯನ್ನು ಹೀಗೆ ಗೌರವಿಸಿ ಅಭಿನಂದಿಸುತ್ತಿರುವುದು ನಿಜಕ್ಕೂ ನಾಡಿನ ಹೆಮ್ಮೆಯ ಸಂಗತಿ.

ಶರಣ ಜೀವನ ರಹಸ್ಯದಲಿ ಸತ್ತ್ವದಲ್ಲಿ
ಶರಣು ಜೀವನದ ಸುಮವೆನಿಪ ಯತ್ನದಲಿ
ಶರಣಂತರಾತ್ಮ ಗಂಭೀರ ಪ್ರಶಾಂತಿಯಲಿ
ಶರಣು ವಿಶ್ವಾತ್ಮದಲ್ಲಿ - ಮಂಕುತಿಮ್ಮ

- ಡಿ.ವಿ.ಜಿ.





